# ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ : ಒಂದು ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ


ಸಂಶೋಧಕ

ಸ್ವಾಮಿ ಕೆ.ಎಸ್.

ಮಾರ್ಗದರ್ಶಕರು

ಡಾ. ಎನ್. ಚೆನ್ನಸ್ವಾಮಿ ಸೋಸಲೆ







ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ : ಒಂದು ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ

ಸಂಶೋಧಕ

ಸ್ವಾಮಿ ಕೆ.ಎಸ್.



ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ



ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಮೈಸೂರು ಸಂಸ್ಥಾನದ ಭೂಪಟ




ಮೂಲ;- ಎಸ್. ಚಂದ್ರಶೇಖರ್,(ಸಂ), ಕರ್ನಾಟಕ ಚರಿತ್ರೆ ಸಂಪುಟ-೭

# ದೃಢೀಕರಣ ಪತ್ರ

**"ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಸ್ವಾಮಿ ಕೆ.ಎಸ್. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 13.10.08.
ಸ್ಥಳ : ವಿದ್ಯಾರಣ್ಯ

**(ಡಾ. ಎನ್. ಚಿನ್ನಸ್ವಾಮಿ ಸೋಸಲೆ)**
ಪ್ರವಾಚಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

**"ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 13.10.2006
ಸ್ಥಳ : ವಿದ್ಯಾರಣ್ಯ

(ಸ್ವಾಮಿ ಕೆ.ಎಸ್.)
ಎಂ.ಫಿಲ್ ಸಂಶೋಧನ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ



### ಅನುಬಂಧಗಳು

## ಅಧ್ಯಾಯ - ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಿ ವಿಧಾನಗಳು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ವಿಧಿ ವಿಧಾನಗಳು

## ಪ್ರಸ್ತಾವನೆ

ಜಗತ್ತಿನ ಪ್ರತಿಯೊಂದು ಸಮಾಜವು ವೈವಿಧ್ಯಮಯವಾಗಿಯೂ ವೈಶಿಷ್ಟ್ಯಪೂರ್ಣವಾಗಿಯೂ ಇರುವುದನ್ನು ಕಾಣುತ್ತೇವೆ. ನಮ್ಮ ಸುತ್ತಮುತ್ತಲಿನ ಸಮಾಜದತ್ತ ಗಮನವನ್ನು ಹರಿಸಿದರೆ ಅದು ಗಮನಾರ್ಹ ಪ್ರಮಾಣದ ವಿಷಮತೆಯ ಸ್ವರೂಪ ಹೊಂದಿರುವುದನ್ನು ಗುರುತಿಸಬಹುದಾಗಿದೆ. ಎಲ್ಲಿ ನೋಡಿದರೂ ಶ್ರೀಮಂತ-ಬಡವ ಒಡೆಯ-ಕೃಷಿಕಾರ್ಮಿಕ ಸ್ಪೃಶ್ಯ-ಅಸ್ಪೃಶ್ಯ ಶಿಕ್ಷಿತ-ಅಶಿಕ್ಷಿತ ನಾಗರೀಕ-ಅನಾಗರೀಕ ಮೊದಲಾದ ವಿವಿಧ ಬಗೆಯ ವಿಭಾಗಗಳಿರುವುದನ್ನು ಕಾಣಬಹುದಾಗಿದೆ. ಸಮಾಜವು ಎಲ್ಲೆಲ್ಲಿಯೂ ಆರ್ಥಿಕವಾಗಿ ಧಾರ್ಮಿಕವಾಗಿ ರಾಜಕೀಯವಾಗಿ ಸಾಮಾಜಿಕವಾಗಿ ಅನೇಕ ಭಾಗಗಳಲ್ಲಿ ಹರಿದು ಹಂಚಿಹೋಗಿದೆ. 'ಹುಟ್ಟಿನಿಂದ ಮಾನವರೆಲ್ಲರು ಸಮಾನರೇ ಆಗಿರುತ್ತಾರೆ'. ಜೀವನ ಕ್ರಮದಲ್ಲಿ ಬದುಕಿನ ಸ್ಥಿತ್ಯಂತರ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಅವರು ಶ್ರೇಷ್ಠ-ಕನಿಷ್ಠ ಉಚ್ಚ-ನೀಚ ಮೇಲು-ಕೀಳು ಮೊದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿ ಸೇರಿ ಜೀವಿಸುತ್ತಿದ್ದಾರೆ. ಸಮಾಜದಲ್ಲಿ ವ್ಯಕ್ತಿಯ ಸ್ಥಾನಮಾನಗಳು ಘನತೆ ಗೌರವಗಳು ಪ್ರತಿಷ್ಠೆಗಳು ಅನುವಂಶೀಯವಾಗಿ ಇಲ್ಲವೆ ಸ್ವ-ಸಾಮರ್ಥ್ಯದಿಂದ ನಿರ್ಧರಿಸಲ್ಪಡುತ್ತವೆ. ಇದನ್ನು ಗಮನಿಸಿ ಸಮಾಜಶಾಸ್ತ್ರಜ್ಞರಾದ ಕಿಂಗ್ಸ್‌ಲೆ ಡೇವಿಡ್‌ರವರು "ಜಗತ್ತಿನ ಸಂಸ್ಕೃತಿಗಳ ಕಡೆಗೆ ಯಾರೇ ಆಗಲಿ ನೋಡಿದಾಗ ವರ್ಗವೇ ಇಲ್ಲದ ಅಂದರೆ ಸ್ತರವಿನ್ಯಾಸಗೊಂಡಿರದ ಯಾವುದೇ ಸಮಾಜವು ಕಂಡುಬರುವುದಿಲ್ಲ" ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ.[೧]

ಈ ಹಿನ್ನೆಲೆಯಲ್ಲಿಯೇ ಭಾರತೀಯ ಸಮಾಜ ನಿರ್ಮಾಣವಾಗಿರುವುದನ್ನು ಗಮನಿಸ ಬಹುದಾಗಿದೆ. ಧರ್ಮಗ್ರಂಥಗಳಲ್ಲಿ ಉಲ್ಲೇಖಿಸಿರುವಂತೆ ಪ್ರಾಚೀನ ಹಿಂದೂ ಸಮಾಜವು ನಾಲ್ಕು ಸ್ತರಗಳಿಂದ ಕೂಡಿದ್ದು ಅವುಗಳನ್ನು 'ವರ್ಣ'ಗಳೆಂದು ಕರೆಯಲಾಗಿದೆ. ಅವುಗಳೆಂದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ. ಇಂದಿನ ಆಧುನಿಕ ಕಾಲದಲ್ಲಿ ಅಸ್ಪೃಶ್ಯರೆಂದು ಪರಿಗಣಿತರಾಗಿರುವ ಪರಿಶಿಷ್ಟ ಜಾತಿಯವರನ್ನು ಐದನೆ ವರ್ಣವೆಂದು ಸಂಕೇತಿಸುವ ಪಂಚಮರೆಂದು ಕರೆಯಲಾಗಿದ್ದರೂ ಧರ್ಮ

ಶಾಸ್ತ್ರಗಳ ಕಾಲದಲ್ಲಿ ಕೇವಲ ನಾಲ್ಕು ವರ್ಣಗಳು ಮಾತ್ರ ಇದ್ದವು ಎಂಬುದು ಗಮನಾರ್ಹವಾದ ಅಂಶ. ಮೊದಲನೇ ಮೂರು ವರ್ಣದವರನ್ನು ಆರ್ಯರೆಂದು ಮತ್ತು ನಾಲ್ಕನೇ ವರ್ಣೀಯರನ್ನು ದಾಸರು ಅಥವಾ ದಸ್ಯುಗಳೆಂದು ಕರೆಯಲಾಗಿದೆ. ಆರ್ಯರ ಸೇವೆಯಲ್ಲಿದ್ದಿರಬಹುದಾದ ಯಾವುದೇ ದಾಸ ಬುಡಕಟ್ಟಿನ ಹೆಸರೇ ಶೂದ್ರ ಎಂದಿರಬಹುದಾಗಿದ್ದು ಆ ಹೆಸರನ್ನೇ ಮುಂದೆ ಸೇವಾ ವಿಭಾಗದಲ್ಲಿದ್ದ ಜನರಿಗೆ ಶಾಶ್ವತವಾಗಿ ನೀಡಲಾಯಿತು ಎಂದು ಹೇಳಲಾಗಿದೆ. ಇಂಗ್ಲೀಷಿನ 'ಕಾಸ್ಟ್' ಎಂಬ ಪದಕ್ಕೆ ತತ್ಸಮಾನವಾದ ಜಾತಿ ಎಂಬ ಪದವನ್ನು ವರ್ಣ ಎಂಬ ಅರ್ಥದಲ್ಲಿಯೇ ಬಳಸುವುದುಂಟು. ಆದರೆ ಜಾತಿ ಎಂಬ ಪದವು ವೇದಗಳ ಸಾಹಿತ್ಯದಲ್ಲಿ ಎಲ್ಲಿಯೂ ಉಲ್ಲೇಖವಾಗಿಲ್ಲ ಎಂದು ಪಿ.ವಿ. ಕಾಣೆ ತಿಳಿಸುತ್ತಾರೆ.[3] ಆದಾಗ್ಯೂ ಸ್ಮೃತಿಗಳ ಕಾಲದಲ್ಲಿ ಜಾತಿ ಎಂಬ ಪದವನ್ನು ವರ್ಣ ಸಂಕೇತಿಸುವುದಕ್ಕಾಗಿ ಬಳಸುವ ಪರಿಪಾಠ ಆರಂಭವಾಯಿತ್ತೆನ್ನಬಹುದಾಗಿದೆ.

ವರ್ಣಗಳ ಉಗಮದ ಬಗ್ಗೆ ಸಂಬಂಧಪಟ್ಟಂತೆ ಋಗ್ವೇದದ ಪುರುಷ ಸೂಕ್ತದಲ್ಲಿ ಬರುವ ವಿವರ ಹೀಗಿದೆ. ವಿರಾಟ ಪುರುಷನ ಶಿರದಿಂದ ಬ್ರಾಹ್ಮಣರು ಬಾಹುಗಳಿಂದ ಕ್ಷತ್ರಿಯನೂ ತೊಡೆಗಳಿಂದ ವೈಶ್ಯನು ಮತ್ತು ಪಾದಗಳಿಂದ ಶೂದ್ರನೂ ಜನಿಸಿದನೆಂದು ಹೇಳಿದೆ. ಶಿರದಿಂದ ಜನಿಸಿದ ಬ್ರಾಹ್ಮಣರು ವೇದ ಅಧ್ಯಯನ ಮತ್ತು ಪೌರೋಹಿತ್ಯದಲ್ಲಿಯೂ, ಬಾಹುಗಳಿಂದ ಜನಿಸಿದ ಕ್ಷತ್ರಿಯನು ದೈಹಿಕಶಕ್ತಿ ಸಾಮರ್ಥ್ಯ ಪ್ರತಿನಿಧಿಸುವನಾಗಿಯೂ ತೊಡೆಗಳಿಂದ ಜನಿಸಿದ. ವೈಶ್ಯನು ಕೃಷಿ ಮತ್ತು ವ್ಯಾಪಾರ ದಲ್ಲಿಯೂ ಪಾದಗಳಿಂದ ಜನಿಸಿದ ಶೂದ್ರನು ಮೇಲಿನ ಮೂರು ವರ್ಗಗಳಿಗೆ ಸೇವೆ ಸಲ್ಲಿಸುವ ಕಾರ್ಯದಲ್ಲಿ ನಿರತರಾಗಿದ್ದನೆಂದು ಹೇಳಲಾಗಿದೆ.

ವರ್ಣ ಎಂಬುದಕ್ಕೆ 'ಬಣ್ಣ' ಎಂಬ ಅರ್ಥವಿದೆ. ಇದು ಗುಣಕರ್ಮಗಳನ್ನು ಸಂಕೇತಿಸುವುದಾಗಿದೆ. ವ್ಯಕ್ತಿಯ ಯೋಗ್ಯತೆ ಮತ್ತು ಅವನು ಯಾವ ವರ್ಗಕ್ಕೆ ಸೇರಿದನೆಂಬ ನಿಷ್ಕರ್ಷೆಯೂ ಆತನ ಹುಟ್ಟಿನಿಂದ ಬರುವುದಿಲ್ಲ. ಬದಲಾಗಿ ಆತ ಬೆಳೆಸಿಕೊಂಡ ಗುಣ ಹಾಗೂ ಆತನ ಆಚಾರಗಳಿಂದ ನಿರ್ಧಾರವಾಗುತ್ತದೆ ಎಂದು ಹಿಂದೂ ಧರ್ಮಗಳು ತಿಳಿಸುತ್ತದೆ.

ವೇದಗಳ ಕಾಲದ ಹಿನ್ನೆಲೆಯಲ್ಲಿ ಅರ್ಥೈಸುವುದಾದರೆ ವರ್ಣಗಳು ಸಮಾಜದ ವಿಭಿನ್ನ ಕಾರ್ಯಗಳನ್ನು ಜವಾಬ್ದಾರಿಗಳನ್ನು ಕ್ರಮಬದ್ಧವಾಗಿ ಹಾಗೂ ಯೋಜಿತವಾಗಿ ನಿಭಾಯಿಸುವ ಸಲುವಾಗಿ ರಚಿಸಲಾಯಿತ್ತೆನ್ನಬಹುದು. ಆದರೆ ಪ್ರತಿಯೊಂದು ವರ್ಣವು ತನ್ನ ನಿರ್ಧಿಷ್ಟ ಕಾರ್ಯ ಮತ್ತು ಜವಾಬ್ದಾರಿ ಗಳನ್ನು ನಿಯಮಾನುಸಾರವಾಗಿ ಅರ್ಥತ್ ಸ್ವಧರ್ಮಕ್ಕನುಗುಣವಾಗಿ ನಿರ್ವಹಿಸಬೇಕಾಗಿತ್ತು. ಆದರೆ ಜವಾಬ್ದಾರಿಗಳನ್ನು ಹಂಚುವಾಗ ಅಸಮಾನತೆಗೆ ಆಸ್ಪದ ಮಾಡಿಕೊಟ್ಟಿತು. ಒಂದೊಂದು ವರ್ಣಕ್ಕೂ ಪ್ರತ್ಯೇಕ ಜವಾಬ್ದಾರಿಗಳನ್ನು ವಹಿಸಿಕೊಟ್ಟಿತ್ತಾದರೂ ಈ ವ್ಯವಸ್ಥೆಯೊಳಗಿನ ಅವರೋಹಣ ಕ್ರಮ ಒಂದು ದೋಷವಾಗಿ ಪರಿಣಮಿಸಿತು. ಈ ಕ್ರಮವೇ ಇಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ದುರಂತಗಳಿಗೆ ಮೂಲ ನೆಲೆಯಾಗುವಂತೆ ಮಾಡಿದೆ.

ಪ್ರಾರಂಭದಲ್ಲಿ ವರ್ಣವ್ಯವಸ್ಥೆಯಲ್ಲಿ ಯಾವುದೇ ಬಗೆಯ ಮೇಲು-ಕೀಳುಗಳೆಂಬ ಭಿನ್ನ ಭೇದ ವಿರಲಿಲ್ಲ. ಆದರೆ ವೇದಗಳ ನಂತರದ ಕಾಲದಲ್ಲಿ ವರ್ಣವ್ಯವಸ್ಥೆಯು ಪರಿವರ್ತನೆಯಾಗ ತೊಡಗಿ

ಕ್ಲಿಷ್ಟತೆ ತಲೆದೂಗಿ ಮೇಲು-ಕೀಳೆಂಬ ಭಾವನೆಗಳು ಕ್ರಮೇಣ ಬೆಳೆಯ ತೊಡಗಿದವು. ವರ್ಣಬೇಧತೆ ಪ್ರಾರಂಭವಾಗಿ ನಾಲ್ಕು ವರ್ಣಗಳು ಪ್ರತ್ಯೇಕ ಜೀವನವನ್ನು ಪ್ರತಿನಿಧಿಸುವಂತಾದವು. ಪರಿಣಾಮ ವರ್ಣಗಳಲ್ಲೂ ಒಳಪಂಗಡಗಳು ಮತ್ತು ಅಂತರ್ವರ್ಣ ವಿವಾಹಗಳು ನಡೆದು ಅನೇಕ ಗುಂಪುಗಳಾಗಿ ಹೊರಹೊಮ್ಮಿದವು. ಈ ಗುಂಪುಗಳೇ ಮುಂದೆ ಜಾತಿ ಗುಂಪುಗಳಾಗಿ ಭಾರತೀಯ ಸಮಾಜದಲ್ಲಿ ಮಾರ್ಪಾಡು ಹೊಂದಿದವು. ಅಂದರೆ ವರ್ಣಾಶ್ರಮ ವ್ಯವಸ್ಥೆಯು ತನ್ನ ಮೊದಲಿನ ಮುಕ್ತ ಸ್ವರೂಪವನ್ನು ಬದಲಾಯಿಸಿಕೊಂಡು ಕೆಲವು ಆಚಾರ-ವಿಚಾರಗಳಲ್ಲಿ ನಿರ್ಬಂಧಗಳನ್ನು ವಿಧಿಸಿ ಒಂದು ಜಾತಿ ವ್ಯವಸ್ಥೆಯಾಗಿ ಮಾರ್ಪಾಡು ಹೊಂದಿ ಇಂದು ಭಾರತೀಯ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟು ಒಂದು ಅರ್ಬುಜ ರೋಗವಾಗಿ ಪರಿಣಮಿಸಿದೆ.

ಗುಣಧರ್ಮದ ಆಧಾರದ ಮೇಲೆ ವಿಭಜಿಸಲ್ಪಟ್ಟ ಈ ವರ್ಣಗಳಲ್ಲಿ ಸಾಮಾಜಿಕ ಮತ್ತು ಧಾರ್ಮಿಕವಾಗಿ ಬ್ರಾಹ್ಮಣರ ಸ್ಥಾನ ಅತ್ಯಂತ ಉಚ್ಛ ಮಟ್ಟದಾದರೆ ಶೂದ್ರನ ಸ್ಥಾನ ಅಷ್ಟೇ ಕನಿಷ್ಟ ಮಟ್ಟದಾಗಿತ್ತು. ಕ್ಷತ್ರಿಯ ಪ್ರಭುತ್ವದ ವಾರಸುದಾರನಾಗಿದ್ದು ಆಳುವ ದೊರೆಯಾಗಿದ್ದ, ಇವನಿಗೆ ಶಸ್ತ್ರ ವಿದ್ಯೆಯ ಜೊತೆಗೆ ಅಕ್ಷರ ಕಲಿಕೆಯ ಅವಕಾಶವಿತ್ತು.

ವೈಶ್ಯನ ಕರ್ಮ ಕೃಷಿ ಮತ್ತು ವ್ಯಾಪಾರವಾಗಿತ್ತು. ನಾಲ್ಕು ವರ್ಣಗಳಲ್ಲಿ ಒಂದನೇ ಸ್ಥಾನ ಪಡೆದಿದ್ದ ಬ್ರಾಹ್ಮಣರು ವಿದ್ಯೆಯ ವಾರಸುದಾರರಾಗಿದ್ದು ಧಾರ್ಮಿಕ ಪೌರೋಹಿತ್ಯದ ಪರಮಾಧಿಕಾರಿ ಯಾಗಿದ್ದರಲ್ಲದೆ ರಾಜನ ಮಂತ್ರಿಯೂ, ಸಲಹಗಾರರೂ ಆಗಿದ್ದುಕೊಂಡು ರಾಜ್ಯಾಡಳತದಲ್ಲಿ ಪ್ರಮಾಣ ಪಾತ್ರ ನಿರ್ವಹಿಸುತ್ತಿದ್ದರು. ಜನಪರ ಇಲ್ಲವೆ ಜನವಿರೋಧಿಯಾದ ಎಲ್ಲಾ ಬಗೆಯ ವಿಧಿ-ಶಾಸನಗಳ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ. ಕ್ರಮೇಣ ಗುಣಕರ್ಮದ ಮಾತು ಹಿಂದೆ ಸರಿದು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ಕಾರಣಕ್ಕಾಗಿಯೇ ಒಬ್ಬ ವ್ಯಕ್ತಿ ಶ್ರೇಷ್ಠತೆಯನ್ನು ಆತ ಎಷ್ಟೇ ಮೂರ್ಖ ನಾಗಿದ್ದರೂ ಪಡೆಯುತ್ತಾನೆಂಬ ಅತಿರೇಕಕ್ಕೂ ಈ ತರ್ಕ ಮುಂದುವರೆಯಿತು.[೩] ಒಟ್ಟಿನಲ್ಲಿ ಈ ವಿಭಜನ ತಂತ್ರದಿಂದಾಗಿ ಅಂತಿಮವಾಗಿ ವೈಶ್ಯರು ಸಂಪೂರ್ಣವಾಗಿ ಶೂದ್ರರು ಮತ್ತು ಪಂಚಮರು ಸಾಮಾಜಿಕ ಶೈಕ್ಷಣಿಕ ಧಾರ್ಮಿಕ ಮತ್ತು ರಾಜಕೀಯ ಹಕ್ಕು ಸವಲತ್ತುಗಳಂದ ವಂಚಿತರಾದರೆಂಬುದು ಅತ್ಯಂತ ವಿಷಾಧನೀಯ.

'ಪರಿಚಾರಿಕೆ' ಅಂದರೆ ಸೇವಕ ವೃತ್ತಿ ಶೂದ್ರನಿಗೆ ಸ್ವಭಾವ ಜನ್ಯವಾದುದು ಎಂಬುದು ಇಲ್ಲಿನ ಅರ್ಥ. ಅಂದರೆ ವ್ಯವಸ್ಥೆಯ ಮುಂಚೂಣಿಯಲ್ಲಿರುವ ಬ್ರಾಹ್ಮಣ ಮತ್ತು ಕ್ಷತ್ರಿಯರ ಸೇವೆ ಮಾಡಿ ಕೊಂಡಿರುವುದು ಬಹುಸಂಖ್ಯಾತ ಶೂದ್ರರ ಕರ್ತವ್ಯವಾಗಿದೆ. ದುಡಿಯುವ ವರ್ಗಕ್ಕೆ ಸೇರಿದ ಶ್ರಮಜೀವಿಗಳಾದ ಶೂದ್ರರಿಗೆ ಸ್ವತಂತ್ರವಾದ ಅಸ್ತಿತ್ವವಿರಲಿಲ್ಲ. ಸಾಮಾಜಿಕ ಧಾರ್ಮಿಕ ಸ್ಥಾನಮಾನಗಳ ಅವಕಾಶವೇ ಇರಲಿಲ್ಲ. ಮೇಲ್ವರ್ಗದವರ ಸೇವೆ ಮಾಡುವುದರಲ್ಲೇ ತಮ್ಮ ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳಬೇಕಾಯಿತು. ಇದೇ ಅವರ ಬದುಕಿನ ಮುಖ್ಯ ಗುರಿಯಾಗಿತ್ತು. ಒಂದು ವೇಳೆ ಒಡೆಯ ನಿಂದ ಒಬ್ಬ ಶೂದ್ರ ಬಿಡುಗಡೆ ಪಡೆದರೂ ಆತ ದಾಸ್ಯದಿಂದ ಮಾತ್ರ ಬಿಡುಗಡೆ ಹೊಂದಲು ಸಾಧ್ಯವಿರಲಿಲ್ಲ. ಏಕೆಂದರೆ ಆತ ಗುಲಾಮ. ಇಲ್ಲವೇ ದಾಸನಾಗಿರುವುದು ಆತನ ಹುಟ್ಟಿನಿಂದಲೇ ಬಂದಿರುವ ಸಹಜ ಗುಣವಾಗಿರುವ ಕಾರಣಕ್ಕಾಗಿ ಎಂಬ ಕೀಳರಿಮೆಯನ್ನು ನಾವಿಲ್ಲಿ ಕಾಣುತ್ತೇವೆ.

ಶೂದ್ರರನ್ನು ಸರ್ವರೀತಿಯಲ್ಲಿ ನಿಯಂತ್ರಿಸಿ ಅವರನ್ನು ಗುಲಾಮರನ್ನಾಗಿ ಇಟ್ಟುಕೊಂಡ ವ್ಯವಸ್ಥೆಯ ಸಂಚನ್ನು ನಾವಿಲ್ಲಿ ನೋಡಬಹುದಾಗಿದೆ. ಮನುಸ್ಮೃತಿಯಲ್ಲೂ "ವೇದಾಭ್ಯಾಸೊ ಬ್ರಾಹ್ಮಣಸ್ಯ" ಎಂದು ಹೇಳಲಾಗಿದೆ. ಅಂದರೆ ಬ್ರಾಹ್ಮಣರಿಗೆ ಮಾತ್ರ ವೇದಭ್ಯಾಸ ಅಥವಾ ಶಿಕ್ಷಣದ ಅವಕಾಶವನ್ನು ನೀಡಲಾಗಿದೆ (ರಾಜ ಮತ್ತು ಅವನ ಮನೆತನದವರಿಗೆ ಮಾತ್ರ ಅಕ್ಷರಜ್ಞಾನ ಇತ್ತೆಂಬುದನ್ನು ಇಲ್ಲಿ ಸ್ಮರಿಸಬಹುದು). ಆದರೆ ಶೂದ್ರರಿಗೆ ಉಪನಯನ ಸಂಸ್ಕಾರದ ಅವಕಾಶವಿಲ್ಲದ ಕಾರಣ ಅವರಿಗೆ ವೇದಾಭ್ಯಾಸ ಅಂದರೆ ಅಕ್ಷರ ಕಲಿಕೆಯ ಅವಕಾಶವೇ ಇರಲಿಲ್ಲ. ಒಂದು ವೇಳೆ ಶೂದ್ರರು ವೇದಾಭ್ಯಾಸ ನಿಷೇಧವನ್ನು ಮೀರಿ ವರ್ತಿಸಿದರೆ ಅವರ ನಾಲಿಗೆಯನ್ನು ಕತ್ತರಿಸುವಂಥ ಕಿವಿಯಲ್ಲಿ ಕಾದ ಸೀಸವನ್ನು ಸುರಿಯುವಂಥ ಘೋರ ಶಿಕ್ಷೆಗೊಳಗಾಗುತ್ತಿದ್ದರು. ಇಂಥ ಮಾನವ ವಿರೋಧಿ-ವಿಧಿ-ನಿಷೇಧಗಳ ಮೂಲಕ ಘೋರ ಶಿಕ್ಷೆಗಳ ಮೂಲಕ ಬಹುಸಂಖ್ಯಾತ ಶೂದ್ರ ಜನ ಸಮುದಾಯವನ್ನು ಅಕ್ಷರ ಕಲಿಕೆಯಿಂದ ದೂರ ಇಟ್ಟಿದ್ದರ ಸಂಚು ಇಂದು ಯಾರಿಗಾದರೂ ತಿಳಿಯುವಂಥದ್ದೇ ಆಗಿದೆ. ಸ್ತ್ರೀಯರನ್ನು ಧಾರ್ಮಿಕ ಶೈಕ್ಷಣಿಕ ಸವಲತ್ತುಗಳಿಂದ ದೂರ ಇಟ್ಟಿದ್ದು ಇದೇ ಹಿನ್ನೆಲೆಯಿಂದ ಎಂಬುದನ್ನು ಗಮನಿಸಬೇಕಾದ ಸಂಗತಿ. ಇದು ಸವರ್ಣಿಯರೆನಿಸಿಕೊಂಡ ಧರ್ಮದಲ್ಲಿಯೇ ಶೂದ್ರರ ಸ್ಥಿತಿ ಇದಾದರೆ ವರ್ಣಕ್ಕೆ ಅಥವಾ ವರ್ಗಕ್ಕೆ ಸೇರದೆ ಊರಿನ ಹೊರಗೆ ವಾಸಿಸುತ್ತಿದ್ದ 'ಅಂತ್ಯಜ' ಅಥವಾ 'ಪಂಚಮರು' ಎನಿಸಿಕೊಂಡ ಸ್ಥಿತಿಗತಿಗಳು ಯಾವ ಬಗೆಯಲ್ಲಿದ್ದವು ಎಂಬುದು ಕೂಡ ಚಿಂತಿಸಬೇಕಾದ ವಿಷಯ.

ವಿಶ್ವಭ್ರಾತೃತ್ವ ಸಮಾನತೆ ವ್ಯಕ್ತಿ ಸ್ವತಂತ್ರ್ಯ ಪ್ರಜಾಪ್ರಭುತ್ವ ಶ್ರಮ ಗೌರವ ಮೊದಲಾದ ಮೌಲ್ಯಗಳನ್ನು ಷೋಷಣೆ ಮಾಡಿಕೊಂಡು ಬಂದಿರುವ ಭಾರತೀಯ ಸಮಾಜದಲ್ಲಿಯೇ ಅಸಮಾನತೆ ಗುಲಾಮಗಿರಿ ಶೋಷಣೆ ಹುಟ್ಟು ಆಧಾರಿತ ತಾರತಮ್ಯ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಅಸ್ಪೃಶ್ಯತೆಯನ್ನು ಒಂದಲ್ಲ ಒಂದು ರೂಪದಲ್ಲಿ ಆಚರಣೆ ಮಾಡಿಕೊಂಡು ಬಂದಿರುವುದು ಒಂದು ಐತಿಹಾಸಿಕ ವಿರೋಧವೇ ಸರಿ. ಹಾಗೂ 'ಜಗತ್ತಿಗೆ ಮಾರ್ಗದರ್ಶಕವೆಂದನಿಸಿರುವ ವಿದಾತ್ತ ಸಾಂಸ್ಕೃತಿಕ ಮೌಲ್ಯಗಳನ್ನು ಹೊಂದಿರುವ' ಹಿಂದೂ ಸಮಾಜದಲ್ಲಿಯೇ ಅಸ್ಪೃಶ್ಯತೆಯಂತಹ ಅನಿಷ್ಠ ಪದ್ಧತಿ ಶತಶತಮಾನ ಗಳಿಂದಲೂ ಅಂಟಿಕೊಂಡು ಬೆಳೆದು ಬಂದಿದೆ. ಒಂದು ಸಮಾಜ ತನ್ನದೇ ಆದ ಒಂದು ಭಾಗದ ಜನತೆಯನ್ನು 'ಅಸ್ಪೃಶ್ಯ'ರೆಂದು ಘೋಷಿಸಿ ಎಲ್ಲಾ ರೀತಿಯ ಹಕ್ಕುಗಳನ್ನು ಕಸಿದುಕೊಂಡು ಅವರ ಜೀವನ ಪರ್ಯಾಂತ ದಾಸರಂತೆ ನಡೆಸಿಕೊಂಡ ಬಗ್ಗೆ ಅರ್ಥಮಾಡಿಕೊಳ್ಳುವುದು ಕಷ್ಟ. ಮನುಷ್ಯ ಜೀವಿಗಳು ಹಾಗೂ ನಿರ್ಜೀವ ವಸ್ತುಗಳಲ್ಲೂ ದೇವರನ್ನು ಕಾಣುವ ಹಂಬಲ ಮತ್ತು ತತ್ವಗಳನ್ನೊಳ ಗೊಂಡ ಹಿಂದೂ ಸಮಾಜ ತನ್ನ ಸಹ ಮಾನವರಲ್ಲೇ ಕೆಲವರನ್ನು ಪ್ರತ್ಯೇಕತಾ ಭಾವನೆಯಿಂದ ನೋಡಿತು ನಡೆಸಿಕೊಂಡಿತು ಎಂದರೆ ದುಃಖಕರ ಸಂಗತಿ. ಭಾರತದಲ್ಲಿ ಇಂತಹ ಸಾಮಾಜಿಕ ವ್ಯವಸ್ಥೆ ಹಲವು ಶತಮಾನಗಳಿಂದ ನಡೆದುಕೊಂಡು ಬಂದಿದೆ. ಇಂದಿಗೂ ಅಲ್ಲಲ್ಲಿ ಅಸ್ತಿತ್ವದಲ್ಲಿದೆ ಎಂದರೆ ಗಂಭೀರವಾಗಿ ಚಿಂತಿಸಬೇಕಾದ ಸಂಗತಿಯಾಗಿದೆ.

ಇಂದು ಅಸ್ಪೃಶ್ಯ ಎಂಬ ಪದಕ್ಕೆ ಪರ್ಯಾಯವಾಗಿ 'ದಲಿತ' ಎಂಬ ಪದವನ್ನು ಬಳಸಲಾಗುತ್ತಿದೆ. ಅಂದರೆ 'ಶೋಷಿತ' ಅಥವಾ 'ತುಳಿತಕ್ಕೆ ಒಳಗಾದವರು' ಎಂಬ ಅರ್ಥದಲ್ಲಿ ಬಳಸಲಾಗುತ್ತಿದೆ. ಆದರೆ 'ದಲಿತ' ಎಂಬ ಪರಿಕಲ್ಪನೆಯಲ್ಲಿ 'ದಲಿತ' ಹಾಗೂ 'ಶೋಷಿತ' ಈ ಎರಡು ಪದಕ್ಕೂ ಸ್ವಲ್ಪ

ವ್ಯತ್ಯಾಸವಿದೆ ಎಂಬುದನ್ನು ಗುರುತಿಸುವ ಅಗತ್ಯವಿದೆ. ದಲಿತರು ಮೂಲತಃ ಶೋಷಿತರೇ ನಿಜ. ಆದರೆ ಶೋಷಿತರಲ್ಲ ದಲಿತರಲ್ಲ. ದಲಿತರು ಕೇವಲ ಶೋಷಿತರಷ್ಟೇ ಅಲ್ಲ. ಶೊಷಣೆಯ ಜೊತೆಗೆ ಅವಮಾನವೀಯ ಹಿಂಸೆ ಕ್ರೌರ್ಯಗಳಿಗೆ ಒಳಗಾದವರು. ಒಂದು ವ್ಯಕ್ತಿತ್ವವೇ ಇಲ್ಲದವರಂತೆ ನಡೆಸಿಕೊಳ್ಳಲ್ಪಟ್ಟವರು ಎಂದು ಡಾ. ಅರವಿಂದ ಮಾಲಗತ್ತಿಯವರು ತಮ್ಮ 'ದಲಿತ ಮಾರ್ಗ' ಎಂಬ ಕೃತಿಯಲ್ಲಿ ಬಳಸಿರುವುದನ್ನು ಗಮನಿಸಬಹುದು.

ಪ್ರಾರಂಭದಲ್ಲಿ ಹೇಳಿದ ಹಾಗೆ ವರ್ಣಗಳ ಗುಂಪಿಗೆ ಸೇರದೆ ಊರ ಹೊರಗೆ ಕನಿಷ್ಠ ಜೀವನ ನಡೆಸುತ್ತಿದ್ದ ಜನರೆ 'ಚಂಡಾಲರು' ಅಥವಾ 'ಅಸ್ಪೃಶ್ಯರು'. ಈ ಜನಸಮೂಹ ಹೇಗೆ ಬಹಿಷ್ಕೃತರಾದರು? ಯಾವುದೇ ಸಂಪರ್ಕಕ್ಕೆ ಅನರ್ಹರು ಎಂಬ ಭಾವನೆ ಹೀಗೆ ಬೆಳೆಯಿತು ನಂತರ ಅದು ಹೇಗೆ ಅಸ್ಪೃಶ್ಯತೆಗೆ ಎಡೆಮಾಡಿಕೊಟ್ಟಿತು? ಹಾಗೂ ಹೇಗೆ ಒಂದು ಸಾಮಾಜಿಕ ಪದ್ಧತಿಯಾಗಿ ಪರಿವರ್ತನೆ ಗೊಂಡಿತು ಎನ್ನುವುದು ಮಾತ್ರ ಭಾರತೀಯ ಸಮಾಜಕ್ಕೆ ವಿಶಿಷ್ಟವಾದುದು.

ಇಂತಹ ಅನಿಷ್ಟ ಪದ್ಧತಿಯಾದ ಅಸ್ಪೃಶ್ಯತೆಯ ಆಚರಣೆ ಬಗ್ಗೆ ಋಗ್ವೇದ ಕಾಲದಲ್ಲಿ ಕಂಡು ಬರುವುದಿಲ್ಲ. ಆದರೆ ವೇದಗಳ ನಂತರದ ಕಾಲದಲ್ಲಿ ಅಸ್ಪೃಶ್ಯತೆಯ ಆಚರಣೆಗೆ ಒಂದು ಸಾಮಾಜಿಕ ವ್ಯವಸ್ಥೆಯಾಗಿ ರೂಪುಗೊಂಡಿತು. ಇಂತಹ ಅಸ್ಪೃಶ್ಯತೆ ಬಗ್ಗೆ ಯಜುರ್ವೇದದಲ್ಲಿ ಚಂಡಾಲರೆಂದು ಉಲ್ಲೇಖಿಸಲಾಗಿದೆ. ಹಾಗೆಯೇ ಛಂದೋಗ್ಯ ಉಪನಿಷತ್ತಿನಲ್ಲಿ 'ಚಂಡಾಲ' ಪದದ ಉಲ್ಲೇಖವಿದ್ದು ನಾಯಿ ಮತ್ತು ಹಂದಿಗೆ ಸಮಾನವೆನ್ನುವ ಅರ್ಥದಲ್ಲೂ ಈ ಪದವನ್ನು ಬಳಸಲಾಗಿದೆ.

ಒಟ್ಟಾರೆ ಅಸ್ಪೃಶ್ಯತೆ ಎನ್ನುವುದು ಜಾತಿ ಪದ್ಧತಿಯ ವಿಕೃತ ಸ್ವರೂಪದ ಪರಿಣಾಮವೆನ್ನಬಹುದು. ಇವರು ಸಮಾಜದ ಯಾವುದೇ ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ಮತ್ತು ರಾಜಕೀಯ ಹಕ್ಕುಗಳಿಂದ ದೂರವೇ ಉಳಿದರು. ಅಲ್ಲದೆ ಯಾವುದೇ ರೀತಿಯ ಸಂಪರ್ಕಕ್ಕೂ ಅನರ್ಹರು ಎಂಬ ಕಲ್ಪನೆ ಮತ್ತು ಸಾಮಾಜಿಕ ಅಸಮಾನತೆ ಇತರೆ ಎಲ್ಲಾ ರೀತಿಯ ಅಸಮಾನತೆಗಳಿಗೂ ಮೂಲವಾಯಿತು. ಇದರಿಂದಾಗಿ ಸಮಾಜದ ಬೇರೆಲ್ಲ ಹಕ್ಕುಗಳಿಂದಲೂ ಅಸ್ಪೃಶ್ಯರು ವಂಚಿತರಾಗುವಂತಾಯಿತು. ಪರಿಣಾಮ ಧಾರ್ಮಿಕ ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಹಕ್ಕುಗಳಿಂದ ವಂಚಿತರಾಗಿ ತಮ್ಮದೆಯಾದ ನೆಲದಲ್ಲಿ ನಿರಂತರ ಅನಾಥ ಜೀವನವನ್ನು ನಡೆಸುತ್ತಾ ಆಗಾಗ್ಗೆ ತಮ್ಮದೆ ನಿರ್ದಯಿ ಸಮಾಜದ ಪ್ರಕೋಪಕ್ಕೆ ದೌರ್ಜನ್ಯಕ್ಕೆ ಮತ್ತು ಶೋಷಣೆಗೆ ಬಲಿಯಾಗಿ ಜೀವನ ನಡೆಸುತ್ತಿದ್ದಾರೆ.

ಅಸ್ಪೃಶ್ಯರ ಸ್ಪರ್ಶ ಛಾಯೆ ಮತ್ತು ಧ್ವನಿ ಮೇಲ್ವರ್ಗದ ಹಿಂದುವಿಗೆ ಅಶುದ್ಧವಾದವು. ಅಲ್ಲದೆ ಮೇಲ್ವರ್ಗದ ಜನರು ನಡೆದಾಡುವ ಹಾದಿಯಿಂದ ದೂರವಿರಬೇಕಾಯಿತು. ಊರ ಹೊರಗಿನ ಕೊಳಚೆ ಪ್ರದೇಶದಲ್ಲಿ ಹಾಗೂ ಗಾಳಿ ಬೆಳಕು ಇರದ ಗುಡಿಸಲುಗಳಲ್ಲಿ ವಾಸಿಸಬೇಕಾಯಿತು. ಸಾರ್ವಜನಿಕ ಬಾವಿಯ ನೀರನ್ನು ಇವರು ಬಳಸುವಂತಿರಲಿಲ್ಲ. ಅಸ್ಪೃಶ್ಯ ಮಕ್ಕಳಿಗೆ ಶಾಲೆಗಳಲ್ಲಿ ಪ್ರವೇಶವಿರಲಿಲ್ಲ. ಹಿಂದೂ ದೇವರನ್ನು ಪೂಜಿಸಿ ಹಿಂದೂ ಹಬ್ಬ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬಂದಿದ್ದರೂ ಸಹ ದೇವಾಲಯಗಳಲ್ಲಿ ಅವರಿಗೆ ಪ್ರವೇಶವಿರಲಿಲ್ಲ. ಸಮಾಜದಲ್ಲಿ ನಿಕೃಷ್ಟ ಕೆಲಸವೆಂದು ಪರಿಗಣಿಸಲ್ಪಟ್ಟಿದ್ದ ರಸ್ತೆಗಳಲ್ಲಿ ಕಸಗುಡಿಸುವುದು, ಚರಂಡಿಗಳನ್ನು ಸ್ವಚ್ಛಗೊಳಿಸುವುದು ಸತ್ತ ಪ್ರಾಣಿಗಳನ್ನು ಊರ ಹೊರಕ್ಕೆ

ಸಾಗಿಸುವುದು ಮೊದಲಾದ ಕೆಲಸಗಳು ಇವರಿಗೆ ಸೀಮಿತವಾಗಿದ್ದವು. ಒಟ್ಟಾರೆ ಸಾಮಾಜಿಕ, ಧಾರ್ಮಿಕ ಮತ್ತು ಎಲ್ಲಾ ಪೌರ ಹಕ್ಕುಗಳನ್ನು ಇವರಿಂದ ಕಸಿದುಕೊಂಡ ಮೇಲ್ವರ್ಗದ ಜನ ಪ್ರಾಣಿಗಳಗಿಂತಲೂ ಕೀಳಾಗಿ ನೋಡುವ ಮನೋಭಾವವನ್ನು ಬೆಳೆಸಿಕೊಂಡಿದ್ದರು. ಇದರಿಂದಾಗಿ ಅಸ್ಪೃಶ್ಯನಾಗಿ ಹುಟ್ಟಿದವನು ಅಸ್ಪೃಶ್ಯನಾಗಿಯೇ ಜೀವನ ಸಾಗಿಸಿ ಅಸ್ಪೃಶ್ಯನಾಗಿಯೇ ಸಾಯಬೇಕಾಯಿತು. ಒಟ್ಟಾರೆ ಮೂಲಭೂತ ಸೌಕರ್ಯಗಳಂದ ವಂಚಿತರಾದ ಇವರು ಮುಖ್ಯವಾಗಿ ಶಿಕ್ಷಣದಿಂದಲೂ ಸಹ ದೂರ ಉಳದರು. ಹೀಗೆ ಅಸ್ಪೃಶ್ಯ ಜಾತಿಯವರು ಮುಂದಿನ ಜನ್ಮದ ಕನಸು ಕಾಣುತ್ತ ಎಲ್ಲಾ ಕಷ್ಟ–ನೋವುಗಳನ್ನು ಮೂಕರಂತೆ ಅನುಭವಿಸುತ್ತ ಕೀಳು ಜಾತಿಯವರೆಂದು ಪರಿಗಣಿಸಲ್ಪಟ್ಟು ಸಂಕೋಲೆಯಲ್ಲ ಜೀವನ ಸಾಗಿಸಿಕೊಂಡು ಬಂದಿದ್ದಾರೆ. ಹೀಗೆ ಅಸ್ಪೃಶ್ಯ ಪದ್ಧತಿಯು ಭಾರತದ ಸಾಮಾಜಿಕ ವ್ಯವಸ್ಥೆಯಲ್ಲ ಕ್ರಮೇಣ ಆಳವಾಗಿ ಬೇರುಬಿಟ್ಟಿತು. ಈ ಅಸ್ಪೃಶ್ಯ ಜನರನ್ನು ದೇಶದ ಬೇರೆ–ಬೇರೆ ಭಾಗಗಳಲ್ಲ ಬೇರೆ–ಬೇರೆ ಹೆಸರಿನಿಂದ ಅಂದರೆ ಹೀನ ಜಾತಿ ಪಂಚಮರು ಅತಿಶೂದ್ರರು ಅಂತ್ಯಜರು ಅವರ್ಣೀಯರು ಪರಿಯರು ಶ್ವಪಚರು ಬಾಹ್ಯಜಾತಿಗಳು ಹರಿಜನರು ಎಂಬುದಾಗಿ ಕರೆಯುತ್ತಿರುವುದನ್ನು ಗಮನಿಸಬಹುದು.

ಹೀಗೆ ಹಿಂದೂ ಧರ್ಮದ ಚಾತುರ್ವರ್ಣ ಪದ್ಧತಿಯಿಂದ ಉದ್ಭವಿಸಿದ ವರ್ಗ ಸಂಘರ್ಷದಲ್ಲ ಅಸ್ಪೃಶ್ಯರು ಬಲಿಪಶುಗಳಾದರು. ಈ ಜಾತಿ ಪದ್ಧತಿಯಲ್ಲ ಸಿಲುಕಿದ ಅಸ್ಪೃಶ್ಯರು ತಮ್ಮ ಸಾಮಾಜಿಕ ಅಸ್ತಿತ್ವವನ್ನು ವ್ಯಕ್ತಿತ್ವವನ್ನು ಕಳೆದುಕೊಂಡರು. ಮಾನವ ಮಾನವನನ್ನೇ ಮುಟ್ಟದ ಧರ್ಮದ ದಬ್ಬಾಳಕೆಯಲ್ಲ ಅಸ್ಪೃಶ್ಯರು ಸುಟ್ಟು ಸುಣ್ಣವಾಗಿ ಉಸಿರು ಕಟ್ಟಿ ಅದೇ ಧರ್ಮದಲ್ಲ ವಿಧಿಯಿಲ್ಲದೆ ಉಳಯುವುದು ಅನಿವಾರ್ಯವಾಯಿತು. ಹಿಂದೂ ಸಂವಿದಾನದಲ್ಲ ಇಂದು ಅಂಟಿಕೊಂಡ ಈ ಕೀಳು ದರ್ಜೆಯ ಜಾತಿ ವ್ಯವಸ್ಥೆ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ. ಈ ಅವಮಾನವೀಯ ದುಷ್ಟ ಪದ್ಧತಿಯನ್ನು ಯಾವ ಮಾನವ ಶಕ್ತಿಯೂ ಕಿತ್ತೊಗೆಯಲು ಅಪ್ರಯೋಜಕವಾದವು. ಜಾತಿ ಪದ್ಧತಿಗೆ ಹಲವಾರು ಹಿತಾಶಕ್ತಿಗಳು ನೀರು ಗೊಬ್ಬರ ಹಾಕಿ ಹೆಮ್ಮರವಾಗಿಸಿ ಬೆಳೆಸಿ ಸಮಾಜದ ಮೇಲೆ ತಮ್ಮ ಹಿಡಿತವನ್ನು ಬಿಗಿಗೊಳಸಿ ಕೊಳ್ಳುವಲ್ಲ ಸಫಲವಾಗಿವೆ. ಅಂತಹ ಶಕ್ತಿಗಳು ಜಾತಿ ಪದ್ಧತಿಯನ್ನು ಶತಮಾನಗಳಂದ ಶತಮಾನಗಳವರೆಗೆ ಪರಂಪರೆಯಿಂದ ಪರಂಪರೆವರೆಗೆ ಬೋಧಿಸಿದವು ಅನುಸರಿಸಿದವು ಹಾಗೆಯೇ ಬೆಳೆಯಲು ಬಿಟ್ಟವು. ದೇಶದ ವೈಜ್ಞಾನಿಕ ತಾಂತ್ರಿಕ ಪ್ರಗತಿಗಳ ಜಾತಿ ಪದ್ಧತಿಯ ಪೆಡಂಭೂತವನ್ನು ಕಿತ್ತೊಗೆಯಲಾಗಲಲ್ಲ. ಎದುರಿಸಿ ನಿಲ್ಲಲೂ ಆಗಲಲ್ಲ. ಹೀಗೆ ಆಳವಾಗಿ ಬೇರುಬಿಟ್ಟು ಜಾತಿ ವಿಷ ವೃಕ್ಷದಲ್ಲ ಬೆಲೆತೆತ್ತವರು ಅಸ್ಪೃಶ್ಯರು.

ಹೀಗೆ ಜಾತಿಯ ಹೆಸರಿನಲ್ಲ ಅಸ್ಪೃಶ್ಯತೆಯ ಹೆಸರಿನಲ್ಲ ಮನುಷ್ಯ ಮನುಷ್ಯರ ನಡುವೆ ಅಡ್ಡಗೋಡೆ ನಿರ್ಮಿಸಿ ಅವಮಾನಿಸುತ್ತಿರುವ ಧರ್ಮವೆಂದರೇ ಹಿಂದೂ ಧರ್ಮ ಒಂದೇ! ತನ್ನ ಧರ್ಮದವರನ್ನೇ ದೂರವಿಟ್ಟು ಅವರನ್ನು ಹೀನವಾಗಿ ಕಾಣುತ್ತಾ ಪರಧರ್ಮೀಯರಿಗೆ ಪಾದಕ್ರಾಂತವಾಗಿ ಅವರ ಪಾದ ದೂಳನಲ್ಲ ಶಿರದ ಮೇಲೆ ಧರಿಸುವ ಧರ್ಮವೆಂದರೆ ಹಿಂದು ಧರ್ಮವೊಂದೆ. ಆದ್ದರಿಂದ ಹಿಂದೂ ಧರ್ಮ ಅಧರ್ಮಕ್ಕೆ ಅನ್ಯಾಯಕ್ಕೆ ಅನೈಕ್ಯತೆಗೆ ಆತ್ಮವಂಚನೆಗೆ ಅವಮಾನವೀಯತೆಯ ಆಗರವಾಗಿ ಕ್ಷಣಕ್ಷಣವೂ, ದಿನದಿನವೂ ಅದೋಗತಿಗಿಳಯುತ್ತಿದೆ. ಆದರೂ ರಕ್ಷಕರೆನಿಸಿಕೊಂಡವರ ಗಿಣಿಮಾತುಗಳು

ಮಾತ್ರ ಬದಲಾಗುವಂತಿಲ್ಲ. ಮಠಾಧಿಪತಿಗಳ ಕಣ್ಣು ತೆರೆಯಲಿಲ್ಲವೆಂದು ಹೇಳಬಹುದು. ಒಟ್ಟಾರೆ ಭಾರತೀಯ ಸಮಾಜದ ದುಷ್ಟ ಆಚರಣೆಗಳಿಂದಾಗಿ ದೇಶದ ಪ್ರಗತಿ ಮತ್ತು ಸಾಮೂಹಿಕ ಅಭಿವೃದ್ಧಿ ಕುಂಠಿತವಾಗಿರುವುದಲ್ಲದೆ ದೇಶದ ಐಕ್ಯತೆಗೂ ದಕ್ಕೆಯಾಗಿದೆ. ಈ ದೇಶದ ಬಹುಸಂಸ್ಕೃತಿ ಉಳಿಯಬೇಕಾದರೆ ಹಾಗೂ ಬಹುಜನರ ಹಿತರಕ್ಷಣೆಯಾಗಬೇಕಾದರೆ ಸರ್ವಧರ್ಮಗಳ ಧರ್ಮಸಹಿಷ್ಣತೆ ಮತ್ತು ಸಹಭಾಳ್ವೆ ಸಾಧ್ಯವಾಗಬೇಕಾದರೆ ಬ್ರಾಹ್ಮಣರು ಸೃಷ್ಟಿಸಿರುವ ಹುಸಿ ಹಾಗೂ ಅಪಾಯಕಾರಿ ಹಿಂದೂ ಮೂಲಭೂತವಾದವನ್ನು ಅದರಲ್ಲಿಯೂ ಅಸ್ಪೃಶ್ಯತೆಯನ್ನು ಬಹುಜನರು ಎಲ್ಲಾ ಧರ್ಮದ ಪ್ರಜ್ಞಾವಂತರೂ ಮಾನವತಾವಾದಿಗಳು ನಿರಾಕರಿಸಬೇಕಾಗಿದೆ. ಭಾರತ ಹಿಂದೂ ರಾಷ್ಟ್ರೀಯವಾಗದೇ ಭಾರತವಾಗಿಯೇ ಉಳಿಯಬೇಕಾಗಿದೆ.

ಪರಿವರ್ತನೆಗೆ ಒಳಗಾದದೆ ಇರುವಂತದ್ದು ಯಾವುದು ಇಲ್ಲ ಎಂದೇ ಹೇಳಬಹುದು. ಅಂದರೆ ಸಮಾಜವೆನ್ನುವುದು ನಿರಂತರ ಬದಲಾವಣೆಗೆ ಒಳಗಾಗುತ್ತಿರುವ ಒಂದು ಪ್ರಕ್ರಿಯೆ. ಆದ್ದರಿಂದ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿಯ ಬೇರುಗಳು ಆಳವಾಗಿ ಬೇರುಬಿಟ್ಟಿದ್ದರೂ ಕೂಡ ಸಮಯ ಸಂದರ್ಭಗಳ ದಾಳಿಗೆ ಸಿಲುಕಿ ಜಾತಿಯು ಪರಿವರ್ತನೆಗೊಳ್ಳುತ್ತ ಬರುತ್ತಿದೆ ಎನ್ನಬಹುದು. ದೇಶವು ಸ್ವಾತಂತ್ರ್ಯಗಳಿಸಿದ ನಂತರ ಸಮಾನತೆ ಬ್ರಾತೃತ್ವ ಹಾಗೂ ಜಾತ್ಯಾತೀತತೆ ಮೊದಲಾದ ತತ್ವಗಳ ನೆಲೆಯುಳ್ಳ ಪ್ರಜಾಸತ್ತತೆ ಸ್ಥಾಪನೆಯಾಗಿ ಜಾತಿ ಸಂಪೂರ್ಣವಾಗಿ ನಾಶವಾಗುತ್ತದೆ ಎಂದು ಕೆಲವರು ನಂಬಿಕೊಂಡಿದ್ದರು. ಆದರೆ ಈ ನಂಬಿಕೆ ಹುಸಿಯಾಯಿತು ಎನ್ನುವುದರಲ್ಲಿ ಸಂಶಯವಿಲ್ಲ. ಜಾತಿಯು ನಾಶವಾಗುವುದರ ಬದಲು ಹೊಸ ಪರಿಸರಕ್ಕೆ ಹೊಂದಿಕೊಂಡು ಹೊಸಹೊಸ ಪಾತ್ರಗಳನ್ನು ನಿರ್ವಹಿಸುತ್ತ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಇಂದಿಗೂ ಒಂದು ಪ್ರಭಾವಿ ಸಂಸ್ಥೆಯಾಗಿಯೇ ಮುಂದುವರೆಯುತ್ತಿದೆ.[೮]

ಈ ಹಿನ್ನೆಲೆಯಲ್ಲಿ ಇಂದು ಅಸ್ಪೃಶ್ಯತೆಯ ಆಚರಣೆಯಲ್ಲಿ ಬದಲಾವಣೆ ಹೊಂದಿರಬಹುದು. ಅದರ ಸ್ವರೂಪ ಮಾತ್ರ ಇದ್ದ ಹಾಗೆಯೇ ಇದೆ. ಏಕೆಂದರೆ ಅಸ್ಪೃಶ್ಯತೆಯೆನ್ನುವುದು ಅಸ್ಪೃಶ್ಯರಿಗೆ ಒಂದು ದುರದುಷ್ಟವಾಗಿರಬಹುದು ಆದರೆ ಹಿಂದುಗಳಿಗೆ ಅದು ಖಂಡಿತವಾಗಿಯೂ ಒಂದು ಅದೃಷ್ಟವೇ ಸರಿ. ಅದು ಅವರಿಗೆ ನೀಚರೆಂದು ಗುರ್ತಿಸಬಹುದಾದ ಒಂದು ವರ್ಗವನ್ನು ಕಲ್ಪಿಸಿಕೊಡುತ್ತದೆ. ಆದ್ದರಿಂದ ಇಂದಿಗೂ ಈ ಜನ ದೇವಾಲಯಗಳಿಗೆ ಪ್ರವೇಶ ಮಾಡುವಂತಿಲ್ಲ ಕೆರೆ ನೀರು ಮುಟ್ಟುವಂತಿಲ್ಲ. ಇತ್ತೀಚೆಗೆ ಸರ್ಕಾರವು ಶಾಲಾ ಮಕ್ಕಳಿಗೆ ಜಾರಿಗೆ ತಂದಿರುವ ಮಧ್ಯಾಹ್ನದ ಬಿಸಿ ಯೂಟದ ವೇಳೆಯಲ್ಲಿ ದಲಿತ ಮಕ್ಕಳು ಸವರ್ಣೀಯ ಮಕ್ಕಳ ಜೊತೆ ಕೂರುವಂತಿಲ್ಲ ಇದೊಂದು ಚಿಂತನೆಗಿಂತ ಆತ್ಮವಲೋಕನದ ವಿಷಯವಾಗಿದೆ. ದಲಿತ ಮಹಿಳೆಯರನ್ನು ಅಡುಗೆಯವರನ್ನಾಗಿ ಒಪ್ಪಿಕೊಳ್ಳಲು ನಮ್ಮ ವೈದಿಕ ಹಾಗೂ ಶೂದ್ರ ಮನಸ್ಸುಗಳು ಸಿದ್ದವಾಗಿಲ್ಲ. ಎಷ್ಟೇ ತಿಳುವಳಿಕೆ ಕೊಟ್ಟು ಏನೇ ಹೇಳಿದರೂ ಇಂಥ ಮನಃಸ್ಥಿತಿಯಿಂದ ಹೊರಬಂದಿಲ್ಲ ಹೊರಬರುವುದಿಲ್ಲ. ಸದ್ಯಕ್ಕೆ ಇದಕ್ಕೆ ಸಾವು ಇಲ್ಲವೆಂದು ಧೈರ್ಯವಾಗಿ ಹೇಳಬಹುದು. ಗ್ರಾಮೀಣ ಪ್ರದೇಶದ ಸವರ್ಣೀಯರ ಮಾಲಿಕತ್ವದ ಹೋಟೆಲ್‌ಗಳಲ್ಲಿ ದಲಿತರಿಗೆ ಪ್ರವೇಶ ನಿಷೇಧ ಹೋಟೆಲ್‌ನ ಹೊರಗೆ ನಿಂತ ಅವರೇ ಇಟ್ಟಿರುವ ಲೋಟದಲ್ಲಿ ಟೀ ಕಾಫಿ ಕುಡಿದು ತೊಳೆದು ಇಡುವಂತಹ ಪದ್ಧತಿ ಇದ್ದಿತು. ಆದರೆ

ಇಂದು ಪ್ಲಾಸ್ಟಿಕ್ ಲೋಟಗಳನ್ನು ಇದನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿವೆ. ಗ್ರಾಮೀಣ ಪ್ರದೇಶದ ಮೀಸಲಾತಿ ಆಧರಿತ ಗ್ರಾಮಪಂಚಾಯ್ತಿ ಮಟ್ಟದ ರಾಜಕೀಯದಲ್ಲಿನ ಮಾನವ ಹಕ್ಕುಗಳ ಉಲ್ಲಂಘನೆ ದಲಿತ ಪ್ರತಿನಿಧಿಗಳಿಗೆ ಮಾನಸಿಕವಾಗಿ ಹಿಂಸೆ ನೀಡುವಂತಹದ್ದು ಶಿಕ್ಷಣ ಕ್ಷೇತ್ರದಲ್ಲಿ ಕಛೇರಿಗಳಲ್ಲಿ ಒಬ್ಬ ದಲಿತ ವ್ಯಕ್ತಿಯು ಎಷ್ಟೇ ಪ್ರಾಮಾಣಿಕವಾಗಿ ಪಾಠ ಮತ್ತು ಆಡಳಿತ ಮಾಡಿದರೂ ಆತನ ಕೆಲಸವನ್ನು ನೋಡಿ ಮುಜುಗರಪಡುವಂತಹದ್ದು ಇನ್ನೂ ಇಂತಹ ಅನೇಕ ಬಗೆಯಲ್ಲಿ ಅಸ್ಪೃಶ್ಯತೆಯನ್ನು ಆಚರಿಸುತ್ತಿರುವುದನ್ನು ಗಮನಿಸಬಹುದು.

ಹಿಂದೂ ಸಮಾಜದ ಕಳಂಕವೆನಿಸಿದ ಅಸ್ಪೃಶ್ಯತೆಯನ್ನು ತೊಡೆದುಹಾಕುವ ದಿಸೆಯಲ್ಲಿ ಪ್ರಯತ್ನಗಳಿಗೇನೂ ಕೊರತೆಯಿಲ್ಲ. ಭಾರತದಲ್ಲಿ ಹಲವಾರು ಮಹಾಪುರುಷರು ಕಾಲಕಾಲಕ್ಕೆ ಈ ಅಸ್ಪೃಶ್ಯತೆಯ ವಿರುದ್ಧ ಸಮರವನ್ನೇ ಸಾರಿರುವ ಪ್ರಯತ್ನಗಳು ನಡೆದಿವೆ ಮತ್ತು ನಡೆಯುತ್ತಿವೆ. ಈ ನಿಟ್ಟಿನಲ್ಲಿ ಕ್ರಿ.ಪೂ. ೬ನೇ ಶತಮಾನದಲ್ಲಿಯೇ ಬುದ್ಧ ಈ ಪದ್ಧತಿಯನ್ನು ತೊಡೆದುಹಾಕಿ ಸಾಮಾಜಿಕ ಸಮಾನತೆಯನ್ನು ಸ್ಥಾಪಿಸಲು ಪ್ರಯತ್ನಿಸಿದ ಮೊದಲಿಗ. ಹಾಗಾಗಿ ಭಾರತದಲ್ಲಿ ನಡೆದ ಸಾಮಾಜಿಕ ವೈಜ್ಞಾನಿಕಕ್ರಾಂತಿ ಬುದ್ಧನದಾಗಿತ್ತು. ಕ್ರಿ.ಶ. ೧೧ನೇ ಶತಮಾನದಲ್ಲಿ ರಾಮಾನುಚಾರ್ಯರು ಅಸ್ಪೃಶ್ಯ ಶಿಷ್ಯರನ್ನು ಸ್ವೀಕರಿಸಿ ತಾವು ಸ್ಥಾಪಿಸಿದ ಮಠಗಳಿಗೆ, ದೇವಾಲಯಗಳಿಗೆ ಪ್ರವೇಶ ನೀಡಿದ್ದರು. ಕರ್ನಾಟಕದಲ್ಲಿ ಕ್ರಿ.ಶ. ೧೨ನೇ ಶತಮಾನದಲ್ಲಿ ಬಸವಣ್ಣನವರು ಈ ಅಸ್ಪೃಶ್ಯತೆಯನ್ನು ತೊಲಗಿಸಲು ಪ್ರಯತ್ನಿಸಿದರಲ್ಲದೆ ಎಲ್ಲರಿಗೂ ಸಮಾನ ಗೌರವ ಸ್ಥಾನಮಾನಗಳನ್ನು ಧರ್ಮ ಮತ್ತು ಸಮಾಜದಲ್ಲಿ ನೀಡಿದರು. ಅಂತರ್‌ಜಾತಿಯ ವಿವಾಹಗಳಿಗೆ ಪ್ರೋತ್ಸಾಹ ನೀಡಿ ಒಂದು ಸಾಮಾಜಿಕ ಕ್ರಾಂತಿಯನ್ನೇ ಮಾಡಿದರು. ದುರಂತವೆಂದರೆ ಯಾವ ಸಾಮಾಜಿಕ ಬದ್ಧತೆಗಳನ್ನಿಟ್ಟುಕೊಂಡು ಬಸವಣ್ಣನವರು ವೀರಶೈವ ಧರ್ಮವನ್ನು ಸ್ಥಾಪಿಸಿದರೋ ಅದು ಇಂದು ಒಂದು ಪ್ರಬಲ ಜಾತಿಯಾಗಿ ಮಾರ್ಪಟ್ಟಿದ್ದು ಅವರನ್ನು ಆ ಧರ್ಮದ ನಾಯಕರನ್ನಾಗಿ ರೂಪಿಸಿಕೊಂಡಿರುವುದು ಈ ನಾಡಿನ ಅತಿದೊಡ್ಡ ದುರಂತ. ನಂತರದಲ್ಲಿ ಏಕನಾಥ ಕಭೀರ ಚೈತನ್ಯ ತುಕರಾಮ್ ಕನಕದಾಸರು ಭಕ್ತಿಗೆ ಜಾತಿಬೇಧವಿಲ್ಲ ಎಂದು ಸಾರಿ ಅದರಂತೆ ನಡೆದರು. ಆದರೆ ಇವರುಗಳು ಸಹ ಒಂದೊಂದು ಜಾತಿಯ ನಾಯಕರಾಗಿ ರೂಪು ಗೊಂಡಿದ್ದಾರೆ.

ಭಾರತಕ್ಕೆ ಆಗಮಿಸಿದ ಬ್ರಿಟಿಷರು ಜಾರಿಗೆ ತಂದ ಉದಾರವಾದಿ ಶಿಕ್ಷಣ ಪದ್ಧತಿ ಅಸಹಾಯಕ ನಿರ್ಗತಿಕ ಕತ್ತಲ ಬದುಕುಗಳಿಗೆ ಹೊಸ ಭರವಸೆಯನ್ನು ಮೂಡಿಸಿತು. ಶೂದ್ರರು ದಲಿತರು ತಮ್ಮ ಹಕ್ಕುಗಳನ್ನು ಪ್ರಶ್ನಿಸಿ ಪಡೆಯುವ ಜಾಗೃತಿಯನ್ನು ಬೆಳೆಸಿಕೊಳ್ಳಲಾರಂಭಿಸಿದರು. ಆದರೆ ಬ್ರಿಟೀಷ್ ಸರ್ಕಾರವು ತನ್ನ ಆಡಳಿತವನ್ನು ಭದ್ರಪಡಿಸಿ ಕೊಳ್ಳುವುದಕ್ಕಾಗಿ ಸವರ್ಣೀಯರ ಪರವಾಗಿಯೇ ಇದ್ದಿತು ಎನ್ನುವುದು ಗಮನಾರ್ಹ. ಈ ನಡುವೆಯೂ ಬರೋಡದ ಸಯ್ಯಾಜಿರಾವ್ ಗಾಯಕ್‌ವಾಡರವರು ದಲಿತರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿದರು. ಕೊಲ್ಲಾಪುರದ ಸಾಹುಮಹಾರಾಜರು ಮೈಸೂರಿನ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಮೊದಲು ಮೀಸಲಾತಿಯನ್ನು ನೀಡುವುದರ ಮೂಲಕ ದಲಿತರು ಅಕ್ಷರ ಪಡೆಯಲು ಬೇರೆ ಬೇರೆ ಕ್ಷೇತ್ರಗಳಲ್ಲಿ ಅಭಿವೃದ್ಧಿ ಸಾಧಿಸಲು ಅವಕಾಶ ಮಾಡಿಕೊಟ್ಟರು. ಅಲ್ಲದೆ ಮಹಾರಾಷ್ಟ್ರದಲ್ಲಿ ಮಹಾತ್ಮ ಜ್ಯೋತಿಬಾಪುಲೆಯವರು ಮತ್ತು ಅವರ ಜೀವನ ಸಂಗಾತಿ

ಸವಿತಬಾಯಿಯವರು ಮೊದಲ ಬಾರಿಗೆ ಮಹಿಳೆಯರಿಗೆ ಶಾಲೆಗಳನ್ನು ತೆರೆದು ದಲಿತರಿಗೂ ಶಿಕ್ಷಣ ನೀಡಿದರು. ಕೇರಳದ ನಾರಾಯಣಗುರು ಶ್ರೀನಾರಾಯಣ ಧರ್ಮ ಪರಿಪಾಲನ ಯೋಗಂ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅಸ್ಪೃಶ್ಯರಿಗೂ ಸೇರಿದಂತೆ ಎಲ್ಲ ವರ್ಗದ ಜನರಿಗೂ ಪ್ರವೇಶಾವಕಾಶವನ್ನು ಕಲ್ಪಿಸಿಕೊಟ್ಟಿದ್ದರು. ಹೀಗೆ ಈ ಮೇಲಿನ ಎಲ್ಲಾ ದಾರ್ಶನಿಕರು ನೀಡಿದ ಪ್ರೋತ್ಸಾಹ ಮತ್ತು ಮಾರ್ಗದರ್ಶನ ಅವಿಸ್ಮರಣೀಯವಾದುದು.

ಈ ದಿಶೆಯಲ್ಲಿ ಗಾಂದೀಜಿಯವರ ಪ್ರಯತ್ನವೂ ಕೂಡ ಪ್ರಮುಖವಾದುದು. ಹಾಗೆಯೇ ಅಂತ್ಯಜರಲ್ಲಿ ಆತ್ಮಗೌರವ ದೀಮಂತಿಕೆ ಧೈರ್ಯವನ್ನು ಬೆಳೆಸಿ ಅವರ ಬಾಳಿನ ಕತ್ತಲೆಯನ್ನು ಹೋಗಲಾಡಿಸಿ ಈ ಜನಮನದ ಆಶಾಸೂರ್ಯನಾಗಿ ಮೂಡಿಬಂದು ಅಸ್ಪೃಶ್ಯರ ಬಾಳಿನಲ್ಲಿ ಅರುಣೋದಯವನ್ನುಂಟು ಮಾಡಿದವರೆಂದರೆ ಸಮತೆಯ ಶಿಲ್ಪಿ ದಲಿತ ಸೂರ್ಯ ಡಾ. ಬಿ.ಆರ್. ಅಂಬೇಡ್ಕರ್‌ರು.

ಭಾರತ ಸಂವಿಧಾನವು ಅಸ್ಪೃಶ್ಯತೆ ಆಚರಣೆಯ ನಿಷೇಧ ಕಾಯ್ದೆ (೧೯೫೫ರಲ್ಲಿ ಅಸ್ಪೃಶ್ಯತೆ ಅಪರಾಧಗಳ ಕಾಯ್ದೆಯನ್ನು ನಂತರ ಈ ಕಾಯ್ದೆಯನ್ನು ೧೯೭೬ರಲ್ಲಿ ನಾಗರೀಕ ಹಕ್ಕುಗಳ ಸಂರಕ್ಷಣಾ ಕಾಯ್ದೆ ಎಂಬುದಾಗಿ ಬದಲಾಯಿಸಲಾಯಿತು. ವಿಧಿ ೧೫,೧೬,೧೭,೩೮ ಮತ್ತು ೪೬)ಯನ್ನು ಜಾರಿಗೆ ತಂದು ಭಾರತ ಸರ್ಕಾರವು ಶಾಸನಾತ್ಮಕ ಕ್ರಮಗಳನ್ನು ಕೈಗೊಳ್ಳುತ್ತಾ ಬಂದಿದೆ. ಆದರೆ ಅವು ಸಂಪೂರ್ಣವಾಗಿ ಕಾರ್ಯರೂಪದಲ್ಲಿ ಬರದೆ ಕೇವಲ ಕಾನೂನು ಪುಸ್ತಕಗಳ ಒಳಪುಟಗಳಲ್ಲಿ ಮುದ್ರಿತಗೊಂಡಿದೆ. ಇಂದಿಗೂ ಕೆಲವು ಹಳ್ಳಿಗಳಲ್ಲಿ ಹೋಟೆಲ್‌ಗಳಲ್ಲಿ ಚಹ ಅಥವಾ ಕಾಫಿ ಕುಡಿಯಲು ಲೋಟ ಕೊಡದಿರುವಂಥ ಸಾರ್ವಜನಿಕ ಕ್ಷೇತ್ರಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶವನ್ನು ನಿಷೇಧಿಸುವಂಥ ಅಮಾನವೀಯ ಆಚರಣೆಗಳು ಭಾರತ ಸ್ವತಂತ್ರದ ಸುವರ್ಣಮಹೋತ್ಸವವನ್ನು ಆಚರಣೆ ಮಾಡಿಕೊಂಡಿದ್ದರೂ ಇಂಥ ಆಚರಣೆಗಳು ಇಂದಿಗೂ ಆಚರಣೆಯಲ್ಲಿರುವುದು ನಿಜವಾಗಿಯೂ ಇಂದಿನ ನಾಗರೀಕ ಸಮಾಜ ತಲೆ ತಗ್ಗಿಸಬೇಕಾದ ಸಂಗತಿಯಾಗಿದೆ. ಇಂತಹ ನಿಷೇಧ ಆಚರಣೆಗಳು ನಿರಂತರವಾಗಿ ನಡೆಯುತ್ತಿರುವುದಕ್ಕೆ ನಮ್ಮ ಅಧಿಕಾರಿಗಳ ಅಧ್ಯಕ್ಷತೆ ಚುನಾಯಿತ ಸರ್ಕಾರಗಳ ವೈಪಲ್ಯತೆ ಅವರುಗಳಗಿರುವ ಜಾತಿಯ ಶ್ರೇಷ್ಠತೆಯನ್ನು ಪ್ರತಿಬಿಂಬಿಸುವ ಕೈಗನ್ನಡಿಯಾಗಿದೆ.

ಮೊದಲೇ ಹೇಳಿದ ಹಾಗೆ ಸಮಾಜವೆನ್ನುವುದು ನಿರಂತರ ಬದಲಾವಣೆಯಾಗುತ್ತಿರುವ ಒಂದು ಪ್ರಕ್ರಿಯೆ. ಈ ಬದಲಾವಣೆ ಎಂದಿಗೂ ಸಹ ಹೊರಗಿನಿಂದ ಉಂಟಾಗುವುದಿಲ್ಲ. ಇದು ಸಮಾಜದ ಒಂದು ಪ್ರಮುಖ ಅಂಗವಾಗಿದ್ದು ಸಮಾಜವು ಪರಿವರ್ತನೆಗೊಳಗಾಗದಿದ್ದರೆ ಅದು ನಿಂತ ನೀರಿನಂತಾಗಿ ತನ್ನ ಮೂಲ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ. ಹಾಗಾಗಿ ಯಾವುದೇ ಪ್ರಕ್ರಿಯೆ ಅಗೋಚರವಾದುದು ಎಂದು ನಿಸ್ಸಂಶಯವಾಗಿ ಹೇಳಬಹುದು. ಈ ಹಿನ್ನೆಲೆಯಲ್ಲಿ ಸ್ವತಂತ್ರಪೂರ್ವದಲ್ಲಿಯೇ ಅಸ್ಪೃಶ್ಯರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನ ಮಾಡಿ ಭರತ ಖಂಡದಲ್ಲಿ ಅತ್ಯಂತ ಹೆಚ್ಚಿನ ಪ್ರಗತಿಯನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಾಧಿಸಿ ಮುಂದುವರೆಯುತ್ತಿರುವ ರಾಜ್ಯ ಎಂಬ ಹೆಗ್ಗಳಿಕೆಗೆ ನ್ಯಾಯ ಸಮ್ಮತವಾದ ಅರ್ಹತೆಯನ್ನು ಪಡೆದಿರುವ ಹಿಂದೂ ಸಂಸ್ಥಾನವಾದ ಮೈಸೂರು ಮಾದರಿ ಸಂಸ್ಥಾನವಾಗಿದೆ. ಹಾಗಾಗಿ ಭಾರತದ ಚರಿತ್ರೆಯಲ್ಲಿ ಮತ್ತ್ಯಾವ ಸಂಸ್ಥಾನಕ್ಕೂ ಮಾದರಿ ಸಂಸ್ಥಾನ

ಎಂಬ ಹೆಗ್ಗಳಿಕೆಯಿಲ್ಲ. ಆದ್ದರಿಂದ ಮೈಸೂರು ಭಾರತಕ್ಕೆ ಮಾತ್ರವಲ್ಲದೇ ಇಡೀ ಜಗತ್ತಿಗೆ ಮಾದರಿಯಾಗಿರುವ ಸಂಸ್ಥಾನವಾಗಿದೆ ಎಂದು ಲಾರ್ಡ್ ಸಾಕಿಯವರು ಹೇಳಿದ್ದಾರೆ.

ಭಾರತದ ಚರಿತ್ರೆಯಲ್ಲಿ ಮೈಸೂರು ಸಂಸ್ಥಾನ ವಿಶಿಷ್ಟ ಸ್ಥಾನಪಡೆದುಕೊಂಡಿದೆ. ಅನಾದಿ ಕಾಲದಿಂದಲೂ ವಿದ್ಯೆಯಿಂದ ವಂಚಿತರಾಗಿ ಶೋಷಣೆಗೆ ಒಲಗಾಗಿ ಸಮಾಜದಿಂದ ಹೊರಗುಳಿದಂತಹ ಜನಕರಾದ ಅಸ್ಪೃಶ್ಯರು, ಶೋಷಿತರು ಮತ್ತು ಕೆಳವರ್ಗದವರಿಗೆ ಮೊದಲ ಬಾರಿಗೆ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯವನ್ನು ಒದಗಿಸಿಕೊಟ್ಟ ಕೀರ್ತಿ ಮೈಸೂರು ಸಂಸ್ಥಾನಕ್ಕೆ ಸಲ್ಲುತ್ತದೆ. ಜೊತೆಗೆ ಈ ಸಮುದಾಯಗಳಲ್ಲಿ ಸಾಮಾಜಿಕ ಶೈಕ್ಷಣಿಕ ಆರ್ಥಿಕ ರಾಜಕೀಯ ಬದಲಾವಣೆಯನ್ನು ತರುವುದರ ಮೂಲಕ ಇಲ್ಲಿನ ಶೋಷಿತರ ಸ್ಥಿತಿಗತಿಗಳನ್ನು ಉತ್ತಮ ಪಡಿಸಿದರು. ಹಾಗಾಗಿ ಬ್ರಿಟೀಷ್ ಸಾಮ್ರಾಜ್ಯಶಾಹಿ ಕಾಲಘಟ್ಟದಲ್ಲಿಯೇ ಮಾದರಿ ಸಂಸ್ಥಾನವನ್ನಾಗಿಮಾಡಿದ ಕೀರ್ತಿ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲುತ್ತದೆ.

ಸ್ವತಂತ್ರಪೂರ್ವ ಭಾರತದ ದೇಶಿ ರಾಜ್ಯಗಳಲ್ಲಿ ಮಾದರಿ ರಾಜ್ಯ ಎಂದು ಹೆಸರು ಪಡೆದ ಮೈಸೂರು ಸಂಸ್ಥಾನ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಿತು. ಇದಕ್ಕೆ ಅವರ ಆಸ್ಥಾನದಲ್ಲಿ ದಿವಾನರುಗಳಾಗಿ ಸೇವೆ ಸಲ್ಲಿಸಿದ ಸರ್. ಎಂ. ವಿಶ್ವೇಶ್ವರಯ್ಯ ಸರ್. ಎಂ. ಕಾಂತರಾಜ್ ಅರಸು ಎ.ಆರ್. ಬ್ಯಾನರ್ಜಿ ಮಿರ್ಜಾ ಇಸ್ಮಾಯಿಲ್ ಕೆ. ಶೇಷಾದ್ರಿ ಅಯ್ಯರ್ ರವರುಗಳು ನೀಡಿದ ಒಳ್ಳೆಯ ಆಡಳಿತ ಮತ್ತು ಪರಿಶ್ರಮ ಕಾರಣ ವೆನ್ನಬಹುದು. ನಾಡಿನ ಅಭಿವೃದ್ಧಿಯೇ ತಮ್ಮ ಉಸಿರೆಂದು ನಂಬಿದ್ದ ನಾಲ್ವಡಿಯವರಿಗೆ ಬ್ರಿಟಿಷ್ ಸರ್ಕಾರ ಜೆ.ಸಿ.ಐ.ಇ (J.C.I.E) ಎಂಬ ಬಿರುದನ್ನಿತ್ತು ಗೌರವಿಸಿದರೆ ಗಾಂಧೀಯವರು ಅವರನ್ನು 'ರಾಜರ್ಷಿ' ಎಂದು ಕರೆದರು.

ದುರ್ಬಲ ವರ್ಗಗಳ ಏಳಿಗೆಗೋಸ್ಕರ ಮೈಸೂರು ಸರ್ಕಾರ ಕೆಲವು ಯೋಜನೆಗಳನ್ನು ಹಾಕಿಕೊಂಡಿತೇನು ನಿಜ. ಆದರೆ ಇವೆಲ್ಲವು ಬಹುಪಾಲು ಹಾಳೆಗಳ ಮೇಲೆಯೇ ಉಳಿದಿದ್ದವು. ವಿದ್ಯಾಭ್ಯಾಸ ಮತ್ತು ಸರ್ಕಾರಿ ಕೆಲಸಗಳಲ್ಲಿ ಹಿಂದುಳಿದ ವರ್ಗಗಳನ್ನು ಕಡೆಗಣಿಸಲಾಗಿತ್ತು. ಇದಕ್ಕೆ ಕಾರಣ ಈ ವಲಯಗಳು ಮುಂದುವರಿದ ವರ್ಗಗಳ ಹಿತಾಸಕ್ತಿಯ ಮುಖ್ಯಕ್ಷೇತ್ರವಾಗಿಯೇ ಪರಿಣಮಿಸಿದ್ದವು. ಹಿಂದುಳಿದವರಿಗೆ ವಿದ್ಯಾಭ್ಯಾಸ ದೊರಕದೆ ಇರಲು ಅವರ ಆರ್ಥಿಕ ಸ್ಥಿತಿಯು ಒಂದು ಅಂಶವಾಗಿದ್ದರೆ ಹಿಂದುಳಿದ ವರ್ಗಗಳು ಹೆಚ್ಚಿನ ಸಂಖ್ಯೆಯಲ್ಲಿದ್ದ ಹಳ್ಳಿಗಳಲ್ಲಿ ಶಿಕ್ಷಣ ಸಂಸ್ಥೆಗಳ ಅನುಕೂಲವಿಲ್ಲದ್ದು ಮತ್ತೊಂದು ಅಂಶ.

ಆದರೆ ಈ ಕಾಲಘಟ್ಟದ ಪ್ರಾರಂಭದಲ್ಲಿ ಇವರಲ್ಲಿ ಜಾಗೃತ ಮನೋಭಾವ ಬೆಳೆದುದರ ಪರಿಣಾಮ ಇವರನ್ನು ಜಾತಿಯ ಆಧಾರದ ಮೇಲೆ ಗುಂಪುಗಳಾಗುವಂತೆ ಮಾಡಿತು. ತಮ್ಮ ಅಸ್ತಿತ್ವವನ್ನು ಬ್ರಹ್ಮಣೇತರ ವರ್ಗಗಳಾಗಿಯೇ ಇವು ರೂಪಿಸಿಕೊಂಡವು. ಇಂತಹ ಗುಂಪುಗಳಲ್ಲಿ ಮುಖ್ಯವಾದವು ೧೯೦೫ರಲ್ಲಿ ಪ್ರಾರಂಭವಾದ ವೀರಶೈವ ಮಹಾ ಸಭಾ ೧೯೦೬ರಲ್ಲಿ ಒಕ್ಕಲಿಗರ ಸಂಘ ಆದಿ ದ್ರಾವಿಡ ಅಭಿವೃದ್ಧಿ ಸಂಘ ಕುರುಬರ ಸಂಘ ಹಾಗೂ 'ಕೇಂದ್ರ ಮುಸ್ಲಿಮರ ಸಂಘ' ಮೊದಲಾದವುಗಳು ಸರ್ಕಾರಿ ಸೇವೆ ಮತ್ತು ಶಿಕ್ಷಣ ಇಲಾಖೆಯಲ್ಲಿ ಬಹುತೇಕವಾಗಿ ಇದ್ದ ಬ್ರಾಹ್ಮಣರ ಹಿಡಿತವನ್ನು

ವಿರೋಧಿಸಿ ಈ ಸಂಘಗಳು ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದವು. ತಮಗೆ ಆದ ಅನ್ಯಾಯವನ್ನು ಸರಿದೂಗಿಸುವಂತೆ ಇವರ ಪ್ರತಿನಿಧಿಗಳು ೧೯೧೮ರಲ್ಲಿ ಮಹರಾಜರನ್ನು ಬೇಟಿ ಮಾಡಿ ಮನವಿಯನ್ನು ಸಲ್ಲಿಸಿದರು. ಪರಿಣಾಮ ಮಹಾರಾಜರು ಇವರಿಗಾಗಿಯೇ ವಿಶೇಷ ಸವಲತ್ತುಗಳನ್ನು ನೀಡುವ ಭರವಸೆ ಗಳನ್ನಿತ್ತರು[೬].

ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆಯಲ್ಲಿ ಬ್ರಾಹ್ಮಣರ ವರ್ಗಕ್ಕೆ ಸೀಮಿತವಾಗಿದ್ದ ಪಾರಂಪರಿಕ ಹಿಡಿತವೊಂದಕ್ಕೆ ೧೯೦೧ರಲ್ಲಿ ಪ್ರಾರಂಭಗೊಂಡ ಬ್ರಾಹ್ಮಣೇತರ ಚಳವಳಿ ಪ್ರಾರಂಭದಲ್ಲಿ ಪರಿಣಾಮ ಬೀರದೆ ಇರಲಿಲ್ಲ. ೧೮೮೧ರಲ್ಲಿ ಮೈಸೂರು ಸಂಸ್ಥಾನದ ಮುಖ್ಯ ಸೂತ್ರದಾರಿಗಳಾಗಿದ್ದ ದಿವಾನರೆಲ್ಲಾ ಬ್ರಾಹ್ಮಣ ವರ್ಗಕ್ಕೆ ಸೇರಿದವರೇ ಆಗಿದ್ದು ಸಂಸ್ಥಾನದ ಮುಖ್ಯ ಹುದ್ದೆಗಳೆಲ್ಲವೂ ಬ್ರಾಹ್ಮಣರಿಂದಲೇ ತುಂಬಿಹೋಗಿದ್ದವು. ಕಾರಣ ಬ್ರಾಹ್ಮಣೇತರರಲ್ಲಿ ದಕ್ಷರಾದ ಆಡಳಿತಗಾರರು ಇರಲಿಲ್ಲವೆಂಬ ಕಾರಣವನ್ನು ನೀಡಲಾಗುತ್ತಿತ್ತು.

ತಮಗೆ ದೊರಕಬೇಕಾದ ಸಮರ್ಪಕ ರೀತಿಯ ಅಧಿಕಾರ ಮತ್ತು ಗೌರವದ ಬಗ್ಗೆ ಹಿಂದುಳಿದ ವರ್ಗಗಳ ಪ್ರತಿನಿಧಿಗಳು ಒಗ್ಗಟಾಗಿ ಪ್ರಯತ್ನ ನಡೆಸಿ ೧೯೧೬ರಲ್ಲಿ ವಿದ್ಯಾಭ್ಯಾಸಕ್ಕಾಗಿ ಒಂದು ಲಕ್ಷ ರೂಪಾಯಿ ಮೊತ್ತವನ್ನು ತೆಗೆದಿಡುವಂತೆ ನ್ಯಾಯ ವಿದೇಯಕ ಸಭೆಯಲ್ಲಿ ಮಂಡಿಸಿದರು. ಆದರೆ ಅದ್ಯಕ್ಷರಾಗಿದ್ದ ಸರ್.ಎಂ.ವಿಶ್ವೇಶ್ವರಯ್ಯನವರು ಚರ್ಚೆಗೆ ಅವಕಾಶ ಮಾಡಿಕೊಡಲಿಲ್ಲ. ಆದರೆ ಈ ನಿರ್ಣಯದ ಹಿಂದಿದ್ದ ಒಳ್ಳೆಯ ಉದ್ದೇಶವನ್ನು ಅರಿತ ಮಹಾರಾಜರು ಈ ಮೊತ್ತವನ್ನು ತೆಗೆದಿಡಲು ಒಪ್ಪಿದರು.[೭] ಇಲ್ಲಿಂದ ಮುಂದೆ ಹಿಂದುಳಿದ ವರ್ಗಗಳ ಧ್ವನಿಯೊಂದರ ಬೆಳವಣಿಗೆಗಾಗಿಯೇ ಬ್ರಹ್ಮಣೇತರ ರಾಜಕೀಯ ಸಂಸ್ಥೆಯೊಂದು ೧೯೧೭ರಲ್ಲಿ ಶ್ರೀ ಕೆ.ಸಿ. ರೆಡ್ಡಿಯವರ ಮುಖಂಡತ್ವದಲ್ಲಿ ಪ್ರಜಾಮಿತ್ರ ಮಂಡಲಿ ಎನ್ನುವ ಹೆಸರಿನಿಂದ ಸ್ಥಾಪಿತವಾಯಿತು.

ಹಿಂದುಳಿದ ವರ್ಗಗಳಿಗೆ ಶಿಷ್ಯವೇತನ ಮತ್ತು ಫೀ ರಿಯಾಯಿತಿಯ ಸಂದರ್ಭದಲ್ಲಿ ವಿಶೇಷ ಸವಲತ್ತುಗಳನ್ನು ಕೊಡಲಾಯಿತ್ತಲ್ಲದೆ ನೇಮಕಾತಿಯ ಸಂದರ್ಭದಲ್ಲಿ ಈ ವರ್ಗಗಳಿಗೆ ಆದ್ಯತೆ ಕೊಡಬೇಕೆಂದು ಅಧಿಕಾರಿಗಳಿಗೆ ತಿಳಿಸಲಾಯಿತು. ಇವರುಗಳ ಒತ್ತಾಯಗಳು ಹೆಚ್ಚಿದ ಹಾಗೆ ಇವರಿಗೆ ಅಧಿಕ ಪ್ರಾತಿನಿಧ್ಯವನ್ನು ಕೊಡಬೇಕೆನ್ನುವ ವಿಚಾರವನ್ನು ತೀರ್ಮಾನಿಸಲು ಒಂದು ಸಮಿತಿಯನ್ನು ರಚಿಸಲು ಮಹಾರಾಜರು ಒಪ್ಪಿದರು. ಮಹಾರಾಜರ ಈ ಒಪ್ಪಿಗೆಗೆ ವಿರೋಧವನ್ನು ವ್ಯಕ್ತಪಡಿಸಿದ ದಿವಾನ ಸರ್.ಎಂ.ವಿಶ್ವೇಶ್ವರಯ್ಯ ತಮ್ಮ ಹುದ್ದೆಗೆ ರಾಜಿನಾಮೆ ನೀಡಿದರು.[೮] ಖಾಲಿಯಾದ ದಿವಾನ ಹುದ್ದೆಗೆ ೧೯೧೮ರಲ್ಲಿ ಕಾಂತರಾಜ್ ಅರಸರನ್ನು ನೇಮಕ ಮಾಡಲಾಯಿತು. ಇವರು ದಿವಾನ ಹುದ್ದೆಗೆ ಆಯ್ಕೆಯಾದ ಮೊದಲ ಬ್ರಾಹ್ಮಣೇತರರಾಗಿದ್ದಾರೆ.

೧೯೧೮ ಆಗಸ್ಟ್ ತಿಂಗಳಲ್ಲಿ ಹಿಂದುಳಿದ ವರ್ಗಗಳ ಪ್ರಾತಿನಿಧ್ಯವನ್ನು ಕುರಿತು ವಿಚಾರಣೆ ಮಾಡಲು ಸಮಿತಿಯೊಂದನ್ನು ರಚಿಸಿ ಅದಕ್ಕೆ ನ್ಯಾಯದೀಶ ಲೆಸ್ಲಿ ಮಿಲ್ಲರ್‌ರನ್ನು ಅದ್ಯಕ್ಷರನ್ನಾಗಿ ನೇಮಿಸಿತು. ಈ ಸಮಿತಿಯು ೧೯೧೯ ಆಗಸ್ಟ್ ೧೫ ರಂದು ವರದಿ ಸಲ್ಲಿಸಿ ಸಾಕಷ್ಟು ಪ್ರಾತಿನಿದ್ಯ ಪಡೆಯದೇ ಇರುವ ಉಳಿದೆಲ್ಲ ಬ್ರಾಹ್ಮಣೇತರರನ್ನು ಹಿಂದುಳಿದ ವರ್ಗಗಳು ಎಂದು ವ್ಯಾಖ್ಯಾಯಿನಿಸಿತು.

ಹಾಗೆಯೇ ಈ ವರ್ಗಗಳಿಗೆ ವಿದ್ಯೆಯ ಜೊತೆಗೆ ಸರ್ಕಾರಿ ಸೇವೆಗಳಲ್ಲಿ ನೇಮಕಾತಿ ಮಾಡಿಕೊಳ್ಳುವಂತೆ ಶಿಫಾರಸ್ಸನ್ನು ಸಹ ಮಾಡಿತು. ಹಾಗಾಗಿ ೧೯೨೧ರ ಮೇ ತಿಂಗಳಲ್ಲಿನಲ್ಲೂ ಸರ್ಕಾರ ಈ ನಿರ್ಣಯವನ್ನು ಒಪ್ಪಿ ಆಜ್ಞೆಯನ್ನು ಹೊರಡಿಸಿತು.[೯] ಇದು ಭರತಖಂಡದಲ್ಲಿಯೇ ಪ್ರಥಮ ಹಿಂದುಳಿದ ವರ್ಗಗಳ ಮೀಸಲಾತಿಗೆ ಸಂಬಂಧಿಸಿದಂತೆ ನೇಮಿಸಿದ ಆಯೋಗವಾಗಿದೆ. ಇದಕ್ಕೆ ಮೈಸೂರು ಅರಸರು ಬಾಜನರಾಗಿದ್ದಾರೆ.

ಹಿಂದುಳಿದ ವರ್ಗಗಳಿಗಾಗಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಮೈಸೂರು ಸರ್ಕಾರದಿಂದ ತೆರೆಯಲಾಯಿತು. ಆದರೆ ಹರಿಜನ (ಪಂಚಮ) ವಿದ್ಯಾರ್ಥಿಗಳಿಗಾಗಿ ತೆರೆದ ಶಾಲೆಗಳಲ್ಲಿ ಕಲಿಸುವ ಶಿಕ್ಷಕರೇ ಸಿಗುವುದು ಕಷ್ಟವಾಯಿತು. ಈ ಶಾಲೆಗಳಲ್ಲಿ ಕಲಿಸುವವರಿಗೆ ಹೆಚ್ಚಿನ ಸಂಬಳವನ್ನು ಕೊಡಬೇಕೆಂಬ ಒತ್ತಾಯವನ್ನು ಪ್ರಜಾಪ್ರತಿನಿಧಿ ಸಭೆಯಲ್ಲಿ ಕೆಲ ಸದಸ್ಯರು ಒತ್ತಾಯ ಮಾಡಿದರು.[೧೦] ಹೀಗಿದ್ದರೂ ಈ ವಿದ್ಯಾರ್ಥಿಗಳಿಗೆ ಶಿಕ್ಷಣ ಕಲಿಸಲು ಯಾರೂ ಮುಂದೆ ಬರಲಿಲ್ಲ. ಪರಿಣಾಮ ೧೯೧೯ರಲ್ಲಿ ಮಹಾರಾಜರು ಎಲ್ಲಾ ಶಾಲೆಗಳಲ್ಲೂ ಪಂಚಮ ವಿದ್ಯಾರ್ಥಿಗಳ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟರು. ಪಂಚಮರಿಗಾಗಿ ವಿಶೇಷ ಶಾಲೆಗಳನ್ನು ತೆರೆದರೂ ಅನಿವಾರ್ಯವಾಗಿ ಪಂಚಮ ವಿದ್ಯಾರ್ಥಿಗಳು ಹಾಗೂ ದುರ್ಬಲ ವರ್ಗಗಳ ವಿದ್ಯಾರ್ಥಿಗಳ ಜೊತೆಗೆ ಶಾಲೆಯಲ್ಲಿ ಕುಳಿತು ಹಿಂದುಳಿದ ವರ್ಗಗಳ ಶಿಕ್ಷಕರಿಂದ ಪಾಠ ಕಲಿಯಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಇದು ಮೇಲ್ವರ್ಗದ ವ್ಯಕ್ತಿಗಳಿಗೆ ಸಹಿಸಿಕೊಳ್ಳಲಾಗದಾಗಿ ನಮ್ಮ ಮಕ್ಕಳ ಪಂಚಮರೊಂದಿಗೆ ಕುಳಿತು ಪಾಠ ಕಲಿತರೆ ಅಪವಿತ್ರಗೊಳ್ಳುತ್ತಾರೆ ಎಂಬ ಕಾರಣವನ್ನು ನೀಡಿ ಮಿಲ್ಲರ್ ಕಮಿಟಿಯ ವರದಿಯನ್ನೇ ಹಿಂತೆಗೆದು ಕೊಳ್ಳವಂತೆ ಸಂಪ್ರದಾಯಸ್ಥ ವರ್ಗದ ಜನರು ಒತ್ತಾಯಿಸಿದರು.[೧೧] ಆದರೆ ಪಂಚಮರ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿದ್ದ ಮಹಾರಾಜರು "ಪಂಚಮರು ನನ್ನ ಪ್ರಜೆಗಳಲ್ಲವೆ"? ಎಂದು ಪ್ರಶ್ನಿಸಿ ಪಂಚಮರ ಪರವಾಗಿ ತಮ್ಮ ನಿಲುವನ್ನು ವ್ಯಕ್ತಪಡಿಸಿದರು.

ಪಾಶ್ಚಾತ್ಯ ಶಿಕ್ಷಣದಿಂದ ಪ್ರಭಾವಿತರಾದ ಅನೇಕ ದೇಶಿಯ ವ್ಯಕ್ತಿಗಳು ಅನಾದಿ ಕಾಲದಿಂದಲೂ ಹಿಂದೂ ಸಮಾಜಕ್ಕೆ ಅಂಟಿಕೊಂಡೇ ಬಂದಿದ್ದ ಅಸ್ಪೃಶ್ಯತೆಯ ಬಗ್ಗೆ ಮಾತನಾಡಲು ಪ್ರಾರಂಭಿಸಿದರು. ಅದನ್ನು ನಿರ್ಮೂಲನೆ ಮಾಡಲು ರಾಷ್ಟ್ರೀಯವಾದಿಗಳು ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ವಿರೋಧಿ ಚಳವಳಿಯನ್ನು ನಡೆಸಿದರು. ಆದರೆ ಈ ಕಾರ್ಯದಲ್ಲಿ ಅವೆಷ್ಟು ಸತ್ಯ ಹಾಗೂ ಯಶಸ್ವಿ ಯಾದವುವೆಂಬುದು ಕೂಡ ಮುಖ್ಯ. ಕಾರಣ ಕೇವಲ ಪ್ರಚಾರಕ್ಕೋಸ್ಕರ ಇಂತಹ ಚಳವಳಿಗಳನ್ನು ನಡೆಸಿ ಚರಿತ್ರೆಯ ಪುಟಗಳಲ್ಲಿ ದಾಖಲಿಸಿಕೊಂಡಿದ್ದಾರೆ. (ಫುಲೆ ಸಾಹುಮಹಾರಾಜರು ನಾರಾಯಣಗುರು ಪೆರಿಯಾರ್ ಅಂಬೇಡ್ಕರ್‌ರಂತಹವರನ್ನು ಹೊರತುಪಡಿಸಿ). ಆದರೆ ಮೈಸೂರು ಸಂಸ್ಥಾನದಲ್ಲಿ ಯಾವುದೇ ಪ್ರತಿಫಲಾಕ್ಷೆಯಿಲ್ಲದೆ ನಿಸ್ವಾರ್ಥ ಸೇವೆಯನ್ನು ಮಾಡಿ ಚರಿತ್ರೆಯ ಪುಟಗಳಲ್ಲಿ ದಾಖಲಾಗದೆ ಎಲೆಮರೆ ಕಾಯಿಯಾಗಿಯೇ ಉಳಿದು ಕೊಂಡವರೆಂದರೆ ಶ್ರೀಯುತ ಆರ್. ಗೋಪಾಲಸ್ವಾಮಿ ಅಯ್ಯರ್. ಇವರು ಮೈಸೂರು ಸಂಸ್ಥಾನದಲ್ಲಿ ಪಂಚಮರ ಶೈಕ್ಷಣಿಕ ಸಾಮಾಜಿಕ ಏಳಿಗೆಗಾಗಿ ತಮ್ಮ ಇಡೀ ವೈಯಕ್ತಿಕ ಜೀವನವನ್ನು ಮುಡುಪಾಗಿಟ್ಟು ಪಂಚಮರು ಶೈಕ್ಷಣಿಕವಾಗಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರಗತಿ ಹೊಂದಲು ಕಾರಣ ಪುರುಷರಾದರು. ಇಂದು ಹಳೆ ಮೈಸೂರು ಪ್ರಾಂತ್ಯದಲ್ಲಿ ದಲಿತರ

ಶೈಕ್ಷಣಿಕ ಪ್ರಗತಿ ಕಂಡುಬಂದಿದ್ದರೆ ಅದು ಸ್ವತಂತ್ರ ಪೂರ್ವದಲ್ಲಿಯೇ ನಿಸ್ವಾರ್ಥಸೇವೆ ಸಲ್ಲಿಸಿದ ಆರ್. ಗೋಪಾಲಸ್ವಾಮಿ ಅಯ್ಯರ್‌ರವರಿಂದ ಎಂದು ಹೇಳಬಹುದು. ಅಲ್ಲದೆ ನಾಲ್ವಡಿಯವರು ಪಂಚಮರಿಗಾಗಿ ರೂಪಿಸಿದ ಶೈಕ್ಷಣಿಕ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ಕೂಡ ಈ ನಿಟ್ಟಿನಲ್ಲಿ ಗಮನಾರ್ಹವಾದವು.

ಹಾಗೆಯೇ ಪಾಶ್ಚಾತ್ಯ ಶಿಕ್ಷಣದ ಪ್ರಭಾವಕ್ಕೊಳಗಾದ ಅಖಿಲ ಭಾರತ ಸುಧಾರಣಾವಾದಿ ಚಳುವಳಿಗಳಾದ ಬಹ್ಮಸಮಾಜ ಆರ್ಯಸಮಾಜ ಥಿಯೋಸಾಫಿಕಲ್ ಸೊಸೈಟಿ ಮತ್ತು ರಾಮಕೃಷ್ಣ ಮಿಷನ್‌ಗಳ ಪ್ರಭಾವದಿಂದಾಗಿ ೧೯ನೇ ಶತಮಾನದ ಅಂತ್ಯಕ್ಕೆ ಕರ್ನಾಟಕದಲ್ಲಿ ಅಸ್ಪೃಶ್ಯತಾ ನಿವಾರಣಾ ಚಳವಳಿ ಕಾಣಿಸಿಕೊಂಡಿತು. ಬಹ್ಮ ಸಮಾಜದಿಂದ ಪ್ರಭಾವಿತರಾಗಿದ್ದ ಕುದ್ಮಲ್ ರಂಗರಾಯರು ಮಂಗಳೂರಿನಲ್ಲೂ ಗೋವಿಂದಾಚಾರ್ಯಸ್ವಾಮಿ ಎಂಬ ಧಾರ್ಮಿಕ ವೃತ್ತಿಯ ವ್ಯಕ್ತಿ ಮತ್ತು ಎಂ. ವೆಂಕಟ ಕೃಷ್ಣಯ್ಯನವರು ಮೈಸೂರು ನಗರದಲ್ಲೂ ಸರ್ದಾರ್ ವೀರಣ್ಣಗೌಡ ಪಾಟೀಲರು ಮುಂಬೈ ಕರ್ನಾಟಕದಲ್ಲೂ, ಗಾಂಧಿ ಯುಗಕ್ಕೆ ಪೂರ್ವದಲ್ಲೆ ಅಸ್ಪೃಶ್ಯತಾ ನಿವಾರಣೆಗೆ ದುಡಿದವರಲ್ಲಿ ಗಣ್ಯರು. ಆದರೆ ಬೆಂಗಳೂರಿನ ಆರ್. ಗೋಪಾಲಸ್ವಾಮಿ ಅಯ್ಯರ್ ಮೈಸೂರು ಸಂಸ್ಥಾನದಲ್ಲಿ ಸುಮಾರು ಮೂರು ದಶಕಗಳ ಕಾಲ ಸಲ್ಲಿಸಿದ ಅಪಾರ ಸೇವೆಯಿಂದಾಗಿ ಈ ಕ್ಷೇತ್ರದ ಅಗ್ರಗಣ್ಯ ವ್ಯಕ್ತಿಯಾಗಿ ಕಂಡುಬರುತ್ತಾರೆ. ಆದ್ದರಿಂದ ಅವರನ್ನು 'ಪಂಚಮರ ಗೋಪಾಲಸ್ವಾಮಿಅಯ್ಯರ್' ಎಂದು ಕರೆಯ ಲಾಗಿತ್ತು.[೨] ಅಥವಾ ಅದೊಂದು ಅವರ ಸಾಮಾಜಿಕ ಸೇವೆಗೆ ಸಂದ ಗೌರವ ಸೂಚಕವಾಗಿಯೂ ಉಳಿದುಕೊಂಡಿತ್ತು.

ರಾಮಕೃಷ್ಣ ಪರಮಹಂಸರ ಶಿಷ್ಯರುಗಳಲ್ಲಿ ಒಬ್ಬರಾದ ಮೈಸೂರು ಸಂಸ್ಥಾನದ ಮಹಾರಾಜ ಶ್ರೀ ಚಾಮರಾಜ ಒಡೆಯರು ತಮ್ಮ ಆಡಳಿತಾವಧಿಯಲ್ಲಿ (೧೮೮೧-೯೪) ಸ್ವಾಮಿ ವಿವೇಕಾನಂದರನ್ನು ಆಹ್ವಾನಿಸಿ ಪತ್ರಬರೆದಿದ್ದರು. ಈ ಪತ್ರಕ್ಕೆ ಉತ್ತರವಾಗಿ ಅಂತ್ಯಜರ(ಅಸ್ಪೃಶ್ಯರ) ಉದ್ಧಾರಕ್ಕೆ ಯಾವುದಾದರೂ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೆ ಅದನ್ನು ನೋಡಲು ಬಯಸುತ್ತೇನೆ ಎಂದು ಬರೆದಿದ್ದರು. ಈ ಪತ್ರವನ್ನು ಓದಿ ಸವಾಲಾಗಿ ಸ್ವೀಕರಿಸಿ ಅದರಿಂದ ಪ್ರಭಾವಿತರಾದ ಒಡೆಯರು ೧೮೯೦ರಲ್ಲಿ ಅಂತ್ಯಜ(ಅಸ್ಪೃಶ್ಯ)ರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆದರು. ಕಾಲಕ್ರಮೇಣ ಈ ಶಾಲೆಗಳು 'ಪಂಚಮ' ಶಾಲೆಗಳೆಂದು ಹೆಸರು ಪಡೆದು ಅಂತ್ಯಜರ ವಿದ್ಯಾಭ್ಯಾಸಕ್ಕೆ ಹಣತೆಗಳಾದವು. ನಂತರದ ದಿನಗಳಲ್ಲಿ ಅಧಿಕಾರಕ್ಕೆ ಬಂದ ನಾಲ್ವಡಿ ಕೃಷ್ಣರಾಜ ಒಡೆಯರು ಈ ವರ್ಗದವರ ಶಿಕ್ಷಣ ಹಾಗೂ ಅವರ ರಾಜಕೀಯ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳನ್ನು ಉತ್ತಮಪಡಿಸುವುದ್ದಕ್ಕಾಗಿ ಹಾಗೂ ಇವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕೆ ನೀಡಿದ ಪ್ರೋತ್ಸಾಹ ಕೈಗೊಂಡ ಸುದಾರಣಾ ಕ್ರಮಗಳು ತೋರಿದ ಕಳಕಳಿ ಗಮನಾರ್ಹವಾದವು. ಇವುಗಳನ್ನು ಅಂದಿನ ಪರಿಸರದ ಹಿನ್ನೆಲೆಯಲ್ಲಿ ಅರ್ಥೈ ಸುವುದರ ಮೂಲಕ ಸಾಮಾಜಿಕ ಬದಲಾವಣೆಯ ಪ್ರಾಮುಖ್ಯತೆಯನ್ನು ಅರಿಯಬೇಕಾಗುತ್ತದೆ. ಮೈಸೂರು ಪ್ರಾಂತ್ಯ ಮತ್ತು ಬೆಂಗಳೂರು ಪ್ರಾಂತ್ಯಗಳಲ್ಲಿ ದಲಿತರಲ್ಲಿನ ಪ್ರಗತಿ ಕಂಡುಬಂದಿದ್ದರೆ ಅದು ನಾಲ್ವಡಿಯವರು ಕೈಗೊಂಡ ಶೈಕ್ಷಣಿಕ ಮತ್ತು ಸಾಮಾಜಿಕ ಸುಧಾರಣೆಗಳು ಇವತ್ತಿನ ದಲಿತರ ಪ್ರಜ್ಞಾಪೂರ್ವಕ ಚಿಂತನೆಯ ಬೆಳವಣಿಗೆಗೆ ಕಾರಣವಾಗಿದೆ ಎಂದು ಹೇಳಬಹುದು.

ಇದೇ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ಸಮಾಜೋದ್ಧಾರ ಕಾರ್ಯಗಳನ್ನು ಕೈಗೊಳ್ಳುವ ಸಲುವಾಗಿ ಸೋಷಿಯಲ್ ಸರ್ವೀಸ್ ಲೀಗ್ ಸ್ಥಾಪಿಸಲ್ಪಟ್ಟು ಇದರ ಮೊದಲ ಸಮ್ಮೇಳನವು ಮೈಸೂರಿನಲ್ಲಿ ನಡೆಯಿತು. ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ಮಾತನಾಡಿ "ಡಿಪ್ರೆಸ್ಡ್‌ಕ್ಲಾಸ್ ಜನಾಂಗದ ವಿದ್ಯಾಭ್ಯಾಸ ಅವರನ್ನು ತಲುಪುವಂತಿರಬೇಕು ಅದಕ್ಕೆ ಮಾನವೀಯತೆವುಳ್ಳ ಸಂಸ್ಥೆಗಳು ಉದಯಿಸಿ ಈ ಜನರ ಅನೈತಿಕ ಅನುಕರಣೆಯನ್ನು ಹೋಗಲಾಡಿಸಬೇಕು"[೧೩] ಎಂದು ಹೇಳಿದರು. ಈ ಹಿನ್ನೆಲೆಯಲ್ಲಿ ಸಮಾಜೋದ್ಧಾರಕ ಕೆಲಸವನ್ನು ದ್ಯೇಯವಾಗಿಟ್ಟುಕೊಂಡು ೧೯೮೩ರಲ್ಲಿ ಭಾರತಕ್ಕೆ ಬಂದ ಥಿಯೋಸಾಫಿಕಲ್ ಸೊಸೈಟಿಯ ಸದಸ್ಯರಾದ ಅನಿಬೆಸೆಂಟ್ ೧೯೧೩ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಪಂಚಮರ ಶ್ರೇಯೋಭಿವೃದ್ಧಿಗಾಗಿ ನಿಷ್ಕಳಂಕ ಸೇವಾನಿರತರಾದವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದರು. ಈ ಸಂದರ್ಭದಲ್ಲಿ ಥಿಯೋಸಾಫಿಕಲ್ ಸೊಸೈಟಿ ಸದಸ್ಯರಾದ ಜಸ್ಟೀಸ್ ಸುಬ್ರಮಣ್ಯಂ ಅಯ್ಯರ್ ಮತ್ತು ಜೆ. ಕೃಷ್ಣಮೂರ್ತಿಯವರು ಈ ಕೆಲಸಕ್ಕೆ ತಕ್ಕರಾದವರೆಂದರೆ ಶ್ರೀಯುತ "ಆರ್. ಗೋಪಾಲಸ್ವಾಮಿ ಅಯ್ಯರ್" ಎಂದು ತೀರ್ಮಾನಿಸಿ ಸದಸ್ಯರಾಗಿದ್ದ ಅಯ್ಯರ್‌ರವರ ಮನ ಒಲಿಸಿದರು. ಇವರೇ ನಮ್ಮ ಅಧ್ಯಯನದ ಪ್ರಮುಖ ಕೇಂದ್ರಬಿಂದು. ಜೆ.ಕೃಷ್ಣಮೂರ್ತಿ ಮತ್ತು ಅನಿಬೆಸೆಂಟ್‌ರ ಪ್ರಭಾವಕ್ಕೊಳಗಾದ ಅಯ್ಯರ್ ೧೯೧೫ರಿಂದಲೇ ಅಸ್ಪೃಶ್ಯರ ಉದ್ದಾರಕ್ಕೆ ಕಂಕಣಬದ್ದರಾಗಿ ೧೯೧೭ರಿಂದ ಪೂರ್ಣಾವಧಿಯ ಸೇವೆಯಲ್ಲಿ ತನುಮನವನ್ನರ್ಪಿಸಿ ಬೆಂಗಳೂರಿನ ಚಾಮರಾಜಪೇಟೆ ಯಲ್ಲಿರುವ ತಮ್ಮ ನಿವಾಸವಾದ 'ಎಲಿಫೆಂಟ್ ಲಾಡ್ಜ್'ನಿಂದ ದಲಿತೋದ್ಧಾರಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಿದರು.

ಸ್ವತಂತ್ರ ಪೂರ್ವದಲ್ಲಿಯೇ ದೀನದಲಿತರ ಸೇವೆಯಲ್ಲಿ ಕಾರ್ಯಪ್ರವೃತ್ತರಾದ ಆರ್. ಗೋಪಾಲಸ್ವಾಮಿ ಅಯ್ಯರ್ ಕರ್ನಾಟಕ ಕಂಡ ಕೆಲವೇ ಮಂದಿ ದಲಿತ ಸುಧಾರಕರಲ್ಲಿ ಒಬ್ಬರಾಗಿದ್ದಾರೆ. ಇವರು ಪಂಚಮರ ಸಾಮಾಜಿಕ ಮತ್ತು ಶೈಕ್ಷಣಿಕ ಸುಧಾರಣೆಗಾಗಿ ಕೈಗೊಂಡ ಕಾರ್ಯಚಟುವಟಿಕೆಗಳು ಚರಿತ್ರೆಯಲ್ಲಿ ಮರೆಯಲಾಗದಾಗಿವೆ. "ಸೇವೆಯಿಂದ ಪ್ರಗತಿ" ಎಂಬ ತತ್ವಕ್ಕೆ ಬದ್ದರಾಗಿ ಯಾವುದೇ ಪ್ರತಿಫಲಾಕ್ಷೆಯಿಲ್ಲದೆ ಪಂಚಮರಲ್ಲಿ ಸ್ವಾಭಿಮಾನ ಶಿಕ್ಷಣ ವೈಚಾರಿಕ ಪ್ರಜ್ಞೆಯನ್ನು ಮೂಡಿಸಿದ್ದು ಗಮನಾರ್ಹವಾದುದು. ಮೈಸೂರು ಸಂಸ್ಥಾನದ ಸಾಮಾಜಿಕ ಬೆಳವಣಿಗೆಯ ದೃಷ್ಟಿಯಿಂದ ೧೮೯೪ ರಿಂದ ೧೯೪೦ರವರೆಗೆ ಸುಮಾರು ೪೬ ವರ್ಷಗಳ ಕಾಲ ಆಳ್ವಿಕೆ ನಡೆಸಿದ ದಲಿತರ ಬಂಧು ಎಂದೇ ಹೆಸರಾಗಿರುವ ನಾಲ್ವಡಿ ಕೃಷ್ಣರಾಜ ಒಡೆಯ ಆಳ್ವಿಕೆಯನ್ನು ಸುವರ್ಣಾಕ್ಷರದಲ್ಲಿ ಬರದಿಡಬೇಕಾದ ಕಾಲ. ಏಕೆಂದರೆ ಶತ-ಶತಮಾನಗಳಿಂದಲೂ ಪಶುಗಳಿಗಿಂತಲೂ ಹೀನಾಯವಾಗಿ ಜೀವನ ನಡೆಸುತ್ತಿದ್ದ ದಲಿತರಿಗೆ ಈ ಕಾಲದಲ್ಲಿಯೇ ಶಾಲೆಗಳಿಗೆ ಮುಕ್ತ ಪ್ರವೇಶ ನೀಡಲಾಯಿತು. ಅವರ ನೋವು-ನಲಿವುಗಳ ಬಗ್ಗೆ ಮತ್ತು ಅವರ ಸರ್ವಾಂಗೀಣ ಅಭಿವೃದ್ಧಿಯ ಬಗ್ಗೆ ಗಮನ ನೀಡಲಾದ್ದರಿಂದ ದಲಿತರು ಮೈಸೂರು ಸಂಸ್ಥಾನದಲ್ಲಿ ಸಮಾಜದ ಮುಖ್ಯವಾಹಿನಿಗೆ ಬರಲು ಸಾಧ್ಯವಾಯಿತು. ದಲಿತರ ಈ ಎಲ್ಲಾ ಬೆಳವಣಿಗೆಗೆ ಮೂಲ ಕಾರಣ ಪುರುಷರಾದವರೆಂದರೆ ನಾಲ್ವಡಿಯವರು. ಹಾಗೆಯೇ ಯುವರಾಜರಾದ ಕಂಠೀರವ ನರಸಿಂಹರಾಜ ಒಡೆಯರು ನೀಡಿದ ಸಹಕಾರ ನಾಲ್ವಡಿ ಆಸ್ಥಾನದಲ್ಲಿ ದಿವಾನರಾಗಿ ಸೇವೆ ಸಲ್ಲಿಸಿದ ಸರ್.ಎಂ. ವಿಶ್ವೇಶ್ವರಯ್ಯ ಮಿರ್ಜಾ ಇಸ್ಮಾಯಿಲ್ ಕೆ. ಶೇಷಾದ್ರಿಅಯ್ಯರ್

ಕಾಂತರಾಜ್ ಅರಸರುಗಳ ಕಾಲದಲ್ಲಿ ಕೈಗೊಂಡ ಸುಧಾರಣಾ ಕ್ರಮಗಳು ಪ್ರಮುಖ ಪಾತ್ರವಹಿಸಿದವು ಮತ್ತು ಅವರು ನೀಡಿದ ಉತ್ತಮ ಆಡಳಿತ ವ್ಯವಸ್ಥೆ ಅದರಲ್ಲೂ ವಿಶೇಷವಾಗಿ ಪಂಚಮರಿಗಾಗಿ ವಿಶೇಷ ಶಾಲೆಗಳು ವಿದ್ಯಾರ್ಥಿನಿಲಯಗಳನ್ನು ತೆರೆಯಲು ಅವಕಾಶ ಮಾಡಿಕೊಟ್ಟಿದ್ದು ಸಮಯ ಸಂದರ್ಭಕ್ಕೆ ವಿಶೇಷ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದು ಸಂಸ್ಥಾನದಲ್ಲಿ ಪಂಚಮರು ಶೈಕ್ಷಣಿಕ ಸಾಮಾಜಿಕವಾಗಿ ಮುಂದೆ ಬರಲು ಸಾದ್ಯವಾಯಿತು. ಹಾಗೂ ಅಯ್ಯರ್‌ರವರಿಗೆ ಮೈಸೂರು ಸಂಸ್ಥಾನದಲ್ಲಿ ಎಲ್ಲಿ ಬೇಕಾದರೂ ಯಾವಾಗ ಬೇಕಾದರೂ ಒಂಬತ್ತು ಜಿಲ್ಲೆಗಳಲ್ಲಿ ಪ್ರಯಾಣ ಮಾಡಲು ರೈಲ್ವೆ ಪಾಸನ್ನು ಒದಗಿಸಿ ಕೊಡಲಾಯಿತು. ಮತ್ತು ತಮ್ಮ ಜೊತೆಯಲ್ಲಿ ಒಂದು ಸೈಕಲ್‌ನ್ನು ತೆಗೆದುಕೊಂಡು ಹೋಗಲು ೧೯೨೪ರಲ್ಲಿ ಅನುಮತಿಯನ್ನು ಸರ್ಕಾರ ನೀಡಿತು. ಅಲ್ಲದೆ ಪಂಚಮರ ಅಭಿವೃದ್ಧಿ ಕಾರ್ಯಗಳಿಗೆ ವಿಶೇಷ ಅಧಿಕಾರವನ್ನು ನೀಡಿದ್ದು ಅಯ್ಯರ್‌ರವರಲ್ಲಿ ಪಂಚಮರ ಬಗ್ಗೆ ಇನ್ನೂ ಹೆಚ್ಚಿನ ಕಾಳಜಿ ಉಂಟಾಗಲು ನಾಲ್ವಡಿ ಕೃಷ್ಣರಾಜ ಒಡೆಯರ ತಾತ್ವಿಕ ನೆಲೆಗಟ್ಟಿನಿಂದಲೇ ಎಂದು ಹೇಳಬಹುದು. ಅಯ್ಯರ್ ನಾಲ್ವಡಿಯವರು ನೀಡಿದ ವಿಶೇಷ ಅಧಿಕಾರವನ್ನು ಸಮರ್ಪಕವಾಗಿ ಬಳಸಿಕೊಂಡು ಎಲ್ಲಿಯೂ ಸಲ್ಲದೆ ಸಮಾಜದಿಂದ ದೂರವಿದ್ದ ಪಂಚಮರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನ ಮಾಡಿದರು. ಜೊತೆಗೆ ಪಂಚಮರು ಶಿಕ್ಷಣ ಸಮಾಜ ಸಂಸ್ಕೃತಿ ಮತ್ತು ರಾಜಕೀಯ ನೆಲೆಗಳಲ್ಲಿ ಹೊಸ ನಿಲುವುಗಳನ್ನು ಕಂಡುಕೊಳ್ಳಲು ಕಾರಣರಾದರು.

ಸ್ವತಂತ್ರ ಪೂರ್ವದಲ್ಲೆ ಅದರಲ್ಲೂ ಗಾಂಧೀಗಿಂತ ಪೂರ್ವದಲ್ಲೇ ಪಂಚಮರ ಕೇರಿಗಳಿಗೆ ಬ್ರಾಹ್ಮಣರೊಬ್ಬರು ಪಾದ ಬೆಳೆಸಿದ್ದು ನಿಜವಾಗಿಯೂ ಆಶ್ಚರ್ಯಕರ ಸಂಗತಿ. ಕೊಳಕು ತಿಪ್ಪೆ ಹಳ್ಳ ಬೇಲಿ ಪಕ್ಕದಲ್ಲಿ ನಾಯಿ ಕೋಳಿ ಹಂದಿಗಳ ಸಂಗಡವಿದ್ದು ವಾಸಿಸುತ್ತಿದ್ದ ಈ ಜನಾಂಗದ ಬೀದಿಗಳಿಗೆ ಯಾವ ಸವರ್ಣೀಯರೆನಿಸಿಕೊಂಡವರು ಕಾಲಿಡಲು ಹೇಸುತ್ತಿದ್ದ ದಿನಗಳಲ್ಲಿ ಪಂಚಮ ಬೀದಿಗಳಿಗೆ ಕಾಲಿಟ್ಟು ಅವರ ಮೈಕೈ ತಟ್ಟಿ ಅವರ ಏಳಿಗೆಗಾಗಿ ವಿದ್ಯಾರ್ಜನೆಗಾಗಿ ಶ್ರಮಿಸಿದವರೆಂದರೆ ಅಯ್ಯರ್. ಹಾಗಾಗಿ ತಮ್ಮ ಕುಟುಂಬ ಮತ್ತು ಬಂಧುಗಳಿಂದ ಜನಾಂಗದ ದೂರವಿಡಲ್ಪಟ್ಟರು. ಆದರೆ ರಾಜ ಮಹಾರಾಜರ ದಿವಾನರ ಮನ್ನಣೆ ಪಡೆದು ಆದಿ ಕರ್ನಾಟಕ ಆದಿ ದ್ರಾವಿಡ ಚಲವಾದಿ ಪಂಚಮರೆನಿಸಿ ಕೊಂಡವರಿಗೆ ಒಟ್ಟಿನಲ್ಲಿ ಹಿಂದಿನ ಮೈಸೂರು ಸಂಸ್ಥಾನದಲ್ಲಿನ ಅಸ್ಪೃಶ್ಯರಿಗೆ ದಾರಿ ದೀಪವಾದರು. ಆದ್ದರಿಂದ ಇವರನ್ನು 'ಪಂಚಮರ' ಅಥವಾ 'ಹೊಲೆಯರ ಗೋಪಾಲಸ್ವಾಮಿ' ಎಂದು ಕರೆಯ ಲಾಗುತ್ತಿತ್ತು.

ರಾಮಸ್ವಾಮಿ ಅಯ್ಯರ್‌ರವರ ಪುತ್ರರಾಗಿ ೧೮೭೭ರ ಜೂನ್ ೨೨ರಂದು ಅಯ್ಯರ್ ಜನಿಸಿದರು. ತಮ್ಮ ಇಪ್ಪತ್ತನೆ ವಯಸ್ಸಿನಲ್ಲಿ ಕಾಲೇಜು ಶಿಕ್ಷಣ ನಿಲ್ಲಿಸಿ ಮನೆಯ ಜವಾಬ್ದಾರಿಯನ್ನು ಹೊರ ಬೇಕಾಯಿತು. ನಂತರ ಯುವರಾಜ ನರಸಿಂಹರಾಜ ಒಡೆಯರವರಿಂದ ಮತ್ತು ಥಿಯೋಸಾಫಿಕಲ್ ಸೊಸೈಟಿಯಿಂದ ಪ್ರಭಾವಿತರಾದ ಅಯ್ಯರ್ ಪಂಚಮ ಶ್ರೇಯೋಭಿವೃದ್ಧಿ ತಮ್ಮನ್ನು ೧೯೧೭ರಿಂದ ಪೂರ್ಣವಾಗಿ ತೊಡಗಿಸಿಕೊಂಡು ೧೯೧೮ರ ವೇಳೆಗೆ ತುಮಕೂರು, ಚಿಕ್ಕಮಗಳೂರು, ಹಾಸನಗಳಲ್ಲಿ ವಸತಿ ಶಾಲೆಗಳನ್ನು ಸ್ಥಾಪಿಸಿದರು. ಹಾಗೆಯೇ ೧೯೨೪ರಲ್ಲಿ ಬೆಂಗಳೂರಿನಲ್ಲಿ ಪಂಚಮರ ವಸತಿ ಶಾಲೆಯನ್ನು ಸ್ಥಾಪಿಸಿದರು. ಮುಂದೆ ಇದು ನರಸಿಂಹರಾಜ ಹಾಸ್ಟಲ್ ಎಂದು ಕರೆಯಲ್ಪಟ್ಟಿತು.

೧೯೨೭ರಲ್ಲಿ ಬೆಂಗಳೂರಿನಲ್ಲಿ ಆದಿಕರ್ನಾಟಕ ಬಾಲಕಿಯರ ವಸತಿ ಶಾಲೆನ್ನು ಆರಂಭಿಸಿದರಲ್ಲದೆ ಇವೆಲ್ಲಕ್ಕೂ ಸರ್ಕಾರದಿಂದ ಅನುಧಾನ ದೊರೆಯುವಂತೆ ಮಾಡಿದರು.

ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿದ್ದ ಸಿವಿಲ್ ಅಂಡ್ ಸೋಶಿಯಲ್ ಪ್ರೋಗ್ರೆಸ್ ಅಸೋಷಿಯೇಶನ್ ಸಿವಿಕ್ ಸಂಘ ಸಹಕಾರ ಸಂಘ ಪ್ರಜಾಪ್ರತಿನಿಧಿಸಭೆ ಜಿಲ್ಲಾ ಬೋರ್ಡಿಂಗ್ ಹೋಂನ ಸದಸ್ಯರಾಗಿ ಕಾರ್ಯದರ್ಶಿಗಳಾಗಿ ಅದ್ಯಕ್ಷರಾಗಿದ್ದರು ಅಯ್ಯರ್ ನಾಲ್ವಡಿಯವರ ಸರ್ಕಾರದಲ್ಲಿ ಪಂಚಮರಿಗಾಗಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಯಶಸ್ವಿಯಾದರು. ಹಾಗೂ ಪಂಚಮರು ಸಾರ್ವಜನಿಕ ಕೆರೆ ಬಾವಿ ಕಟ್ಟೆ ನಾಲೆ ಮೊದಲಾದ ಸ್ಥಳಗಳ ನೀರನ್ನು ಉಪಯೋಗಿಸುವಂತೆ ಮಾಡಿದರು. ಇದಕ್ಕೆ ಅಂದಿನ ದಿವಾನರುಗಳು ನೀಡಿದ ಸಹಕಾರ ಪ್ರಶಂಸನೀಯವಾದದು.

"ಗೋಪಾಲಸ್ವಾಮಿ ಅಯ್ಯರ್‌ರವರು ತಮ್ಮ ಮನೆಯಿಂದ ಹೊರ ಹೊರಟಾಗ ಅವರ ಹಿಂದೆ ಐದಾರು ಪಂಚಮ ವಿದ್ಯಾರ್ಥಿಗಳು ಇಲ್ಲದಿದ್ದ ದಿನವೇ ಇಲ್ಲ. ಶಾಲಾ ಕಾಲೇಜುಗಳು ಪ್ರಾರಂಭವಾದಾಗ ವಿದ್ಯಾರ್ಥಿಗಳ ಪ್ರವೇಶದ ಬಗ್ಗೆ ಓಡಾಡುತ್ತಿದ್ದರೆ ಮುಂದೆ ಆ ವಿದ್ಯಾರ್ಥಿಗಳ ಬೋರ್ಡಿಂಗ್ ಪುಸ್ತಕ ವಿದ್ಯಾರ್ಥಿವೇತನ ಬಟ್ಟೆ ಮೊದಲಾದ ವ್ಯವಸ್ಥೆಗಳ ಬಗ್ಗೆ ಕಾಳಜಿ ವಹಿಸುತ್ತಿದ್ದರು. ಹಾಗೆಯೇ ವಿದ್ಯಾರ್ಥಿಗಳಿಗೆ ಕ್ರೀಡೆ ಗ್ರಂಥಾಧ್ಯಯನ ಶೈಕ್ಷಣಿಕ ಪ್ರವಾಸಗಳಿಗೆ ಕರೆದೊಯ್ಯುವುದು ಸ್ಕೌಟ್‌ರ್‍ಯಾಲಿ ನಡೆಸುವುದು ಇಂಥ ಕಾರ್ಯಗಳಲ್ಲೂ ಅವರು ತಮ್ಮನ್ನು ತೊಡಗಿಸಿಕೊಂಡಿದ್ದರು. ಅಲ್ಲದೆ ಬೇರೆ ಬೇರೆ ಊರುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳಿಗೆ ಮುಂದಿನ ಶಿಕ್ಷಣ ಕುರಿತು ಪತ್ರ ವಿದ್ಯಾರ್ಥಿಗಳ ಪತ್ರಗಳಿಗೆ ಉತ್ತರ ಬರೆಯುವುದು ಮತ್ತು ಅವರಿಗೆ ಪತ್ರಗಳ ಮೂಲಕ ಪ್ರೋತ್ಸಾಹ ನೀಡುತ್ತಿದ್ದರು. ಯಾವ ವಿದ್ಯಾರ್ಥಿ ಯಾವ ಇಲಾಖೆಯಲ್ಲಿ ಮುಂದೆ ಉದ್ಯೋಗ ಪಡೆಯಲು ಯೋಗ್ಯ ಎಂದು ಮೊದಲೆ ಯೋಚಿಸಿ, ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಆಗದವರಿಗೆ ವಿವಿಧ ಖಾಸಗಿ ಮತ್ತು ಸರ್ಕಾರದ ಇಲಾಖೆಗಳಲ್ಲಿ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರನ್ನು ಮನ ಒಲಿಸಿ ನೌಕರಿ ಕೊಡಿಸುತ್ತಿದ್ದರು. ಹಾಗಾಗಿ ಅಯ್ಯರ್‌ರವರ ವಿದ್ಯಾರ್ಥಿಗಳಿಗೆ ನಿರುದ್ಯೋಗದ ಸಮಸ್ಯೆ ಎಂದೂ ಕಾಡಲಿಲ್ಲ. ಏಕೆಂದರೆ ಅವರ ತರ್ಕಬದ್ಧ ಮಾತುಗಾರಿಕೆ ಮತ್ತು ಅವರ ಆಕರ್ಷಕ ವ್ಯಕ್ತಿತ್ವ ಎಲ್ಲರನ್ನು ಮರಳು ಮಾಡುತ್ತಿತ್ತು.

ಬೆಂಗಳೂರು ೧೯೩೯ರಲ್ಲಿ ಅಯ್ಯರ್‌ರವರು ಆದಿಕರ್ನಾಟಕ ಅನುಧಾನಿತ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿದರು. ಮುಂದೆ ಈ ವಿದ್ಯಾರ್ಥಿನಿಲಯ ಅಯ್ಯರ್‌ರ ಮರಣದ ನಂತರ ಆರ್. ಗೋಪಾಲ ಸ್ವಾಮಿ ಅಯ್ಯರ್ ವಿದ್ಯಾರ್ಥಿನಿಲಯವಾಗಿ ೧೯೭೧ರಲ್ಲಿ ವಸತಿ ಶಾಲೆಯಾಗಿ ಡಿ. ವೆಂಕಟಯ್ಯನವರಿಂದ ಮರು ನಾಮಕರಣಗೊಂಡಿತು. ಇದಲ್ಲದೆ ೧೯೩೪ರಲ್ಲಿ ಮಾಗಡಿ ರಸ್ತೆಯಲ್ಲಿ ಆದಿಜಾಂಬವ ವಿದ್ಯಾರ್ಥಿ ನಿಲಯಕ್ಕೆ ಗಾಂಧೀಜಿಯಿಂದ ಶಿಲಾನ್ಯಾಸ ಮಾಡಿಸಿದರು. ಇಂದಿಗೂ ಇದು ಬಾಪೂಜಿ ವಿದ್ಯಾರ್ಥಿ ನಿಲಯವೆಂದು ಪ್ರಸಿದ್ಧಿಯಾಗಿದೆ.

ಅಯ್ಯರ್‌ರವರು ಪಂಚಮರಿಗೆ ತಮ್ಮ ಸೇವೆಯನ್ನು ಸೀಮಿತಗೊಳಿಸಿಕೊಳ್ಳದೆ ಇತರ ಜನರಿಗಾಗಿಯೂ ದುಡಿದಿದ್ದಾರೆ. ಅಂದರೆ ಮಾನಸಿಕ ಆಸ್ಪತ್ರೆಯ (ದಿ ಮ್ಯಾಡ್) ಸದಸ್ಯರಾಗಿ (ದಿ ಬ್ಯಾಡ್) ಜೈಲುಗಳಿಂದ ಬಿಡುಗಡೆಗೊಂಡು ಖೈದಿಗಳನ್ನು ಸರ್ಕಾರದ ಕೆಲಸಕ್ಕೆ ನೇಮಿಸಿಕೊಳ್ಳುವ ಅವಕಾಶವಿದೆ ಎಂದು ಹೇಳಿ ಜೈಲು ಸುಧಾರಣಾ ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದರು.

ಒಟ್ಟಾರೆ ಪಂಚಮ ವಿದ್ಯಾರ್ಥಿಗಳ ಬಗ್ಗೆ ಅಪಾರ ಕನಸುಕಟ್ಟಿದ ಇವರು "ನಮ್ಮವರು ಗೆಜೆಟೆಡ್ ಅಧಿಕಾರಿಗಳಾಗಬೇಕು ಕಾರಿನಲ್ಲಿ ತಿರುಗಾಡುವುದನ್ನು ನಾನು ನೋಡಬೇಕು, ಸವರ್ಣೀಯರ ನಡುವೆ ಮನೆಕಟ್ಟಿ ಬಾಳುವಂತಾಗಬೇಕು ಎಲ್ಲಾ ಸರ್ಕಾರಿ ಕಛೇರಿಗಳಲ್ಲಿ ಉದ್ಯೋಗದಲ್ಲಿರಬೇಕು" ಎಂದು ಹೇಳುತ್ತಿದ್ದರು. ಹಾಗೆಯೇ ಸವರ್ಣೀಯರಿಗೆ "ಕಾಲ ಹೀಗೆ ಇರೋದಿಲ್ಲ ನಮ್ಮವರು ಮುಂದೆ ಅಧಿಕಾರಕ್ಕೆ ಬಂದು ನಿಮ್ಮ ಮೇಲೆ ಸೇಡು ತೀರಿಸಿಕೊಳ್ಳುತ್ತಾರೆ" ಎಂದು ಎಚ್ಚರಿಕೆ ನೀಡುತ್ತಿದ್ದರು.

ಹೀಗೆ ಪಂಚಮರ ನಡುವೆ ಅವರು ಮಾಡುತ್ತಿದ್ದ ಕೆಲಸದಿಂದಾಗಿ ತಾವು ಸ್ವಜನರಿಂದ ಅವಹೇಳನ ಕ್ಕೊಳಗಾದರೂ ತಾವು ಮಾತ್ರ ತಮ್ಮ ಕೆಲಸದ ಬಗ್ಗೆ ತೀರ ದಿಟ್ಟ ಹಟವಾದಿಗಳೂ ಆಗಿದ್ದರು. ತಾವು ಆಯ್ದುಕೊಂಡ ತಮ್ಮ ಜೀವನದ ಕ್ಷೇತ್ರದ ಬಗ್ಗೆ ಯಾವುದೇ ಅಡ್ಡಿ-ಆತಂಕಗಳಿಗೆ ಹೆದರದೆ ತುಂಬಾ ದೃಢರಾಗಿದ್ದರೆಂದು ಡಾ. ಡಿ.ವಿ.ಗುಂಡಪ್ಪ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಮೂರು ದಶಕಗಳ ಕಾಲ ಪಂಚಮರ ಸರ್ವತೋಮುಖ ಅಭಿವೃದ್ಧಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಅಯ್ಯರ್ ೧೯-೦೩-೧೯೪೩ರಂದು ದೈವಾದೀನರಾದರು. ಈ ದಿನ ನಿಜವಾಗಿಯೂ ಪಂಚಮರ ಬಾಳಿನ ಕರಾಳ ದಿನವೇ ಹೌದು.

ಅಯ್ಯರ್‌ರವರ ಪರಿಶ್ರಮದ ಫಲದಿಂದ ಸ್ವತಂತ್ರಪೂರ್ವದಲ್ಲಿಯೇ ಅನೇಕಾರು ವ್ಯಕ್ತಿಗಳು ಶಿಕ್ಷಣ ಪಡೆದು ಸಮಾಜದಲ್ಲಿ ಉನ್ನತಸ್ಥಾನ-ಮಾನ ಪಡೆದು ಅಜರಾಮರಾಗಿದ್ದಾರೆ. ಅಂತಹ ಪ್ರಮುಖ ವ್ಯಕ್ತಿಗಳೆಂದರೆ ಎಂ. ಮಾದಯ್ಯ (ಶಿಕ್ಷಕರು). ಎಂ. ಶಂಕರಯ್ಯ (ಪುರಸಭೆಯ ಅಧ್ಯಕ್ಷರಾಗಿದ್ದವರು) ಎಸ್.ಎಂ. ಸಿದ್ದಯ್ಯ (ಮಾಜಿ ಲೋಕಸಭೆ ಸದಸ್ಯರು) ಗಂಗಾಧರಯ್ಯ (ಸಿದ್ಧಾರ್ಥ ಶಿಕ್ಷಣ ಸಂಸ್ಥೆಯ ಸ್ಥಾಪಕರು), ಬಿ. ರಾಚಯ್ಯ (ಕೇರಳದ ರಾಜ್ಯಪಾಲರು) ಡಿ. ವೆಂಕಟಯ್ಯ (ಗೋಪಾಲಸ್ವಾಮಿ ಅಯ್ಯರ್ ಶಿಕ್ಷಣ ಸಂಸ್ಥೆಯ ಸ್ಥಾಪಕರು), ವೈ.ಸಿ. ಹೊಂಬಾಳಯ್ಯ (ದಲಿತರಲ್ಲಿಯೇ ಪ್ರಥಮ ಬಾರಿಗೆ ಕಾನೂನು ಪದವಿ ಪಡೆದವರು) ಕೆ. ಭೀಮಯ್ಯ (ಮುಖ್ಯ ನ್ಯಾಯಾಧೀಶರಾಗಿದ್ದವರು) ರಾಮಸಿಂಗಯ್ಯ (ಬಿ.ಡಿ.ಓ ಆಗಿ ನಿವೃತ್ತರಾದವರು) ಡಾ. ಜಿ. ಗೋಪಾಲ್ (ಮಕ್ಕಳ ತಜ್ಞರು) ಜಿ. ವೆಂಕಟಯ್ಯ (ಲೆಕ್ಕ ತನಿಖಾಧಿಕಾರಿಗಳು ಮತ್ತು ಮೊದಲ ತಲೆಮಾರಿನ ದಲಿತ ಕವಿ) ಆರ್.ಭರಣಯ್ಯ (ಐ.ಪಿ.ಎಸ್. ಅಧಿಕಾರಿಗಳು), ಎಸ್.ಎಂ. ಸಿಧ್ಧಯ್ಯ (ಕವಿಗಳು), ಡಿ. ರುದ್ರಯ್ಯ (ಪ್ರಸಿದ್ಧ ಅಡ್ವಕೇಟ್) ಬಿ. ಬಸವಲಿಂಗಪ್ಪ (ರಾಜಕಾರಣಿಗಳು ಬೂಸಾ ಚಳುವಳಿಯ ನೇತಾರ) ಹೆಚ್. ಮಾದಯ್ಯ (ಪೋಲಿಸ್ ಇನ್ಸ್‌ಪೆಕ್ಟರ್ ಆಗಿ ರಾಷ್ಟ್ರಪತಿ ಪದಕ ಪಡೆದವರು) ಚಿಕ್ಕಹನುಮಂತಯ್ಯ (ಕೊರಟಗೆರೆ) ಮೊದಲಾದವರು.

ಒಟ್ಟಾರೆ ಶೋಷಿತ ಸಮುದಾಯಗಳಾದ ಹೊಲೆಯ ಮತ್ತು ಮಾದಿಗ ಸಮುದಾಯಗಳಿಗೆ ಸರ್ಕಾರಿ ಶಾಲಾ-ಕಾಲೇಜುಗಳಿಗೆ ದೇವಾಲಯಗಳಿಗೆ ಕೆರೆ ಬಾವಿ ಕಟ್ಟೆಗಳಲ್ಲಿ ನೀರು ತೆಗೆದುಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟರು. ಹಾಗೂ ಶಿಕ್ಷಣ ಪಡೆದ ಪಂಚರಿಗೆ ಖಾಸಗಿ ಮತ್ತು ಸರ್ಕಾರಿ ಇಲಾಖೆಗಳಲ್ಲಿ ನೌಕರಿಯನ್ನು ದೊರಕಿಸಿಕೊಟ್ಟರಲ್ಲದೆ ಮಿರ್ಜಾಇಸ್ಮಾಯಿಲ್‌ರ ಮಂತ್ರಿಮಂಡಲದಲ್ಲಿ ಅಸ್ಪೃಶ್ಯೋದ್ಧಾರ ಕಾರ್ಯಗಳನ್ನು ಕೈಗೊಂಡಿದ್ದರು. ಇಂತಹ ಅನೇಕ ವ್ಯಕ್ತಿಗಳ ಬಗ್ಗೆ ಅವರ ಆಲೋಚನೆಗಳನ್ನು ಕುರಿತು ಅಧ್ಯಯನ ನಡೆದಿವೆಯಾದರೂ ಬಹಳ ಕಡಿಮೆ. ಈ ನಿಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿ

ಅಯ್ಯರ್ ಕೈಗೊಂಡ ಕಾರ್ಯಗಳನ್ನು ಅವರ ಚಿಂತನೆಗಳನ್ನು ತಿಳಿಯಪಡಿಸುವ ಅಧ್ಯಯನ ಕ್ಕೊಳಪಡಿಸುವ ಹಾಗೂ ಸಬಾಲ್ಟ್ರನ್ ಚರಿತ್ರೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಒಂದು ಚಿಕ್ಕ ಪ್ರಯತ್ನವಾಗಿದೆ.

**ಅಧ್ಯಯನದ ಉದ್ದೇಶಗಳು**

ಸಮಾಜದಲ್ಲಿ ಸಮಾನತೆ ಸಾಮರಸ್ಯಗಳು ನೆಲೆಯೂರಬೇಕೆಂಬ ಆಶಯಕ್ಕೆ ಒಂದು ಇತಿಹಾಸವಿದೆ. ವಿವಿಧ ಕಾಲಘಟ್ಟಗಳಲ್ಲಿ ಅಂತಃಕರಣಪೂರ್ವಕವಾಗಿ ಬದುಕನ್ನು ರೂಪಿಸಿದ ಪ್ರೀತಿಸಿದ ಚೇತನಗಳು ಆರೋಗ್ಯಕರ ಸಮಾಜದ ಬೆಳವಣಿಗೆಗೆ ಕಾರಣವಾಗಿವೆ. ತಮ್ಮ ಸ್ವಾರ್ಥಕ್ಕಾಗಿ ವ್ಯಕ್ತಿ ಅಥವಾ ಸಮಾಜ ವನ್ನು ಬಳಸಿಕೊಳ್ಳದೆ ಸಮಾಜಕ್ಕೆ ಹೊಸ ಬೆಳಕನ್ನು ಹುಡುಕಿಕೊಡುವ ಪ್ರಯತ್ನಗಳು ನಡೆದಿವೆ ಎಂದು ಹೇಳಬಹುದು. ಸ್ವತಂತ್ರಪೂರ್ವದಲ್ಲಿದ್ದ ದೀನದಲಿತರ ಸೇವೆ ಸಮಾಜ ಸುಧಾರಣೆಯಂತಹ ಕಾರ್ಯಗಳು ಸ್ವತಂತ್ರ ನಂತರದ ಕಾಲಘಟ್ಟದಲ್ಲಿ ಕಂಡುಬರುತ್ತಿಲ್ಲ. ಪ್ರಸ್ತುತವಾಗಿ ಏನಿದ್ದರೂ ಸಮಾಜ ಸುಧಾರಣೆಯ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ ಶೋಷಣೆಗಳು ನಡೆಯುತ್ತಿವೆ ಎಂದು ಹೇಳಿದರೆ ತಪ್ಪಾಗಲಾರದು. ಈ ಜನಾಂಗದ ಅಭಿವೃದ್ಧಿಗಾಗಿ ಸರ್ಕಾರ ಕೊಡಮಾಡುವ ಹಣವನ್ನು ಸಮರ್ಪಕವಾಗಿ ಖರ್ಚು ಮಾಡುವ ಸೇವಾಮನೋಭಾವ ಇಂದು ಇಲ್ಲವಾಗಿದೆ. ಹಾಗೊಂದು ವೇಳೆ ಖರ್ಚು ಮಾಡಿದ್ದೇ ಯಾದಲ್ಲಿ ಇವರ ಹೆಸರಿನಲ್ಲಿ ಬಿಡುಗಡೆಗೊಂಡಿರುವ ಮತ್ತು ಬಿಡುಗಡೆಯಾಗುವ ಹಣದಿಂದ ಎಷ್ಟು ಲಾಭಗಳಿಸಬಹುದು? ಎಂಬ ಭಾವನೆಯನ್ನು ಬೆಳೆಸಿಕೊಳ್ಳುವುದರ ಜೊತೆಗೆ ಯಾರದೊ ದುಡ್ಡು ಎಲ್ಲಮ್ಮನ ಜಾತ್ರೆ. ಎಂಬ ಗಾದೆ ಮಾತಿನಂತೆ ಪ್ರಚಾರ ಮಾದ್ಯಮಗಳ ಮೂಲಕ ಎಷ್ಟು ಜನಪ್ರಿಯತೆ ಯನ್ನು ಗಳಿಸಿ ರಾಜಕೀಯ ಕ್ಷೇತ್ರಕ್ಕೆ ದುಮುಕಿ ಎಷ್ಟು ಜನರನ್ನು ವಂಚಿಸಬಹುದು ಎಂಬುದರ ಮೇಲೆ ಇಂದಿನ ಸೇವಾ ಮನೋಭಾವನೆಯು ನಿಂತಿದೆ ಎಂದು ಹೇಳಬಹುದು.

ಸೇವಾಕಾಂಕ್ಷೆಯಲ್ಲಿರಬೇಕಾದ ತ್ಯಾಗ ಮನೋಭಾವ ಇಂದು ಕಣ್ಮರೆಯಾಗಿ ಜಾತಿ-ಜಾತಿಗಳ ನಡುವೆ ವೈಷಮ್ಯ ಸ್ತ್ರೀಯರ ದೀನದಲಿತರ ಶೋಷಣೆ ಪಕ್ಷಪಾತ ಅಂಧಾಭಿಮಾನ ಒಳಸಂಚು ಅಕ್ಷಮ್ಯ ಅಪರಾಧಗಳು ದಿನನಿತ್ಯದ ಜೀವನದಲ್ಲಿ ಹೆಚ್ಚಾಗಿ ಕಂಡುಬರುತ್ತಿವೆ. ಹಾಗೂ ಎಷ್ಟೋ ಜನರು ಸರ್ಕಾರದ ಸೇವೆಯಲ್ಲಿರುವ ಸೌಲಭ್ಯಗಳನ್ನು ಪಡೆದು ಉನ್ನತ ಸ್ಥಾನ ಗಳಿಸಿದ ಅಧಿಕಾರಿಗಳು ಸ್ವಜಾತಿಯವರನ್ನೇ ವಂಚಿಸುತ್ತಿದ್ದು ತಮ್ಮ ಹಿಂದಿನ ಜೀವನದ ಸ್ಥಿತಿಗಳನ್ನು ಮರೆತ್ತಿದ್ದಾರೆ. ಅಲ್ಲದೆ ಧರ್ಮ ಮತ್ತು ಅಧಿಕಾರವನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡ ಪರಿಣಾಮ ಇಂದು ಅನೇಕರು ಸಮಸ್ಯೆಗಳ ಮರುಹುಟ್ಟಿಗೆ ಕಾರಣವಾಗಿದ್ದಾರೆಂದು ಹೇಳಬಹುದು. ಇಂತಹ ಸಂದರ್ಭದಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ಮಾಡಿದ ನಿಸ್ವಾರ್ಥಸೇವೆ ಪ್ರಮುಖವಾದುದು. ಮೈಸೂರು ಸಂಸ್ಥಾನದಲ್ಲಿ ಮೂರು ದಶಕಗಳ ಕಾಲ ಪಂಚಮರ ಏಳಿಗೆಗಾಗಿ ತಮ್ಮ ಇಡೀ ವೈಯಕ್ತಿಕ ಬದುಕನ್ನು ಯಾವುದೇ ಪ್ರಚಾರಕ್ಕಾಗಿ ಮತ್ತು ಸೇವಾಪ್ರತಿಫಲಾಕ್ಷೆಯಿಲ್ಲದೆ ಸಮರ್ಪಿಸಿಕೊಂಡಿದ್ದು ಪಂಚಮರ ಸರ್ವಾಂಗೀಣ ಅಭಿವೃದ್ಧಿಗಾಗಿ ಅಯ್ಯರ್ ಕೈಗೊಂಡ ಸಾಮಾಜಿಕ ಶೈಕ್ಷಣಿಕ ಸುಧಾರಣೆಗಳು ಇಂದಿಗೂ ನಮ್ಮನ್ನು ಚಿಂತನೆಗೆ ತೊಡಗಿಸುತ್ತವೆ. ಅಯ್ಯರ್‌ರವರ ಆಕರ್ಷಕ ವ್ಯಕ್ತಿತ್ವ ತರ್ಕಬದ್ಧ ಮಾತುಗಳು ಪಂಚಮರು ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವಂತೆ ಮಾಡುತ್ತಿದ್ದ ಅವರ ಸ್ಫೂರ್ತಿದಾಯಕ

ಮಾತುಗಳು, ಅವರ ಸರಳಜೀವನ 'ಸೇವೆಯಿಂದ ಪ್ರಗತಿ' ಎಂಬ ನಿಸ್ವಾರ್ಥ ಸೇವಾಮನೋಭಾವ ಅವರ ಆದರ್ಶ ಜೀವನ ನಮ್ಮಗಳ ಚಿಂತನೆಯಲ್ಲಿ ಮೂಡಿಬಂದಾಗ ಹೊಸ ಬೆಳಕು ಕಾಣಬಹುದಾಗಿದೆ.

ಮೈಸೂರು ಸಂಸ್ಥಾನದಲ್ಲಿ ಪಂಚಮರ ಸುಂದರ ಸಮಾಜವನ್ನು ನಿರ್ಮಿಸಲು ತಮ್ಮ ಇಡೀ ಬದುಕನ್ನು ಸಮರ್ಪಣ ಮಾಡಿಕೊಂಡವರು ಪಂಚಮರ ಗೋಪಾಲಸ್ವಾಮಿ ಎಂದು ಹೆಸರಾದ ಆರ್. ಗೋಪಾಲಸ್ವಾಮಿಅಯ್ಯರ್. ಈ ಚರಿತ್ರೆ ಮಹಾಪುರುಷರ ಜೀವನ ಸಾಧನೆ ಸಿದ್ಧಿಗಳತ್ತ ಗಮನಹರಿಸಿ ನಿರಂತರ ಪರಿವರ್ತನಶೀಲ ಸಮಾಜದ ಅಭ್ಯುದಯಕ್ಕೆ ಅವರು ನೀಡಿದ ಕೊಡುಗೆಯನ್ನು ಸಬಾಲ್ಟ್ರನ್ ಚರಿತ್ರೆಯಡಿಯಲ್ಲಿ ಅಧ್ಯಯನ ಮಾಡುತ್ತಾ ಸಮಕಾಲೀನ ಜನರ ಗಮನ ಸಳೆದು ಚಿಂತನೆಗೆ ಒಳಪಡಿಸುವುದು ಈ ಅಧ್ಯಯನದ ಉದ್ಧೇಶವಾಗಿದೆ.

**ಅಧ್ಯಯನದ ವ್ಯಾಪ್ತಿ ಮತ್ತು ಮಿತಿಗಳು**

ಪ್ರಸ್ತುತ ಅಧ್ಯಯನವು "ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್: ಒಂದು ಅಧ್ಯಯನ" ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗೂ ದಿವಾನರುಗಳ ಮಾರ್ಗದರ್ಶನದಲ್ಲಿ ಅಯ್ಯರ್‌ರವರು ಪಂಚಮರಿಗಾಗಿ ಕೈಗೊಂಡ ದಲಿತೋದ್ಧಾರ ಕಾರ್ಯಗಳು ಅದರಲ್ಲಿಯೂ ಶೈಕ್ಷಣಿಕ ಪ್ರಗತಿಗೆ ನೀಡಿದ ಕೊಡುಗೆಯನ್ನು ಮರುವಿಶ್ಲೇಷಣೆಗೆ ಒಳಪಡಿಸುವ ಉದ್ಧೇಶದಿಂದ ಪ್ರಸ್ತುತ ಅಧ್ಯಯನವು ತನ್ನದೆಯಾದ ಮಿತಿ ಮತ್ತು ವ್ಯಾಪ್ತಿಗೆ ನಿಗದಿಪಡಿಸಿಕೊಳ್ಳಲಾಗಿದೆ.

೧೮೯೪ರಿಂದ ೧೯೪೦ರ ಅವಧಿಯಲ್ಲಿ ಮೈಸೂರು ಸಂಸ್ಥಾನವು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಿ ಭಾರತದ ಸಂಸ್ಥಾನಗಳಲ್ಲಿಯೇ ಒಂದು ಮಾದರಿ ಸಂಸ್ಥಾನವೆಂದು ಹೆಸರುಗಳಿಸಿ ಜಾಗತಿಕ ಮಟ್ಟದಲ್ಲಿ ಪ್ರಭಾವ ಬೀರಿತು. ಇದಕ್ಕೆಲ್ಲ ಮೂಲ ಕಾರಣ 'ರಾಜರ್ಷಿ' ಎಂಬ ಬಿರುದು ಪಡೆದಿದ್ದ ನಾಲ್ವಡಿಯವರ ದೂರದೃಷ್ಟಿ ಮತ್ತು ಸಾಮಾಜಿಕ ಕಳಕಳಿ ಎಂದು ಹೇಳಬಹುದು. ಈ ಅವಧಿಯಲ್ಲಿ ಶತಶತಮಾನಗಳಿಂದ ಸಮಾಜದಿಂದ ದೂರ ಉಳಿದ ಪಂಚಮರ ಏಳಿಗೆಗೆ ಮತ್ತು ಶೈಕ್ಷಣಿಕ ಪ್ರಗತಿಗಾಗಿ ಕೈಗೊಂಡ ಅನೇಕ ಕಾರ್ಯಕ್ರಮಗಳಿಂದಾಗಿ ಅವರು ಸಮಾಜದ ಮುಖ್ಯವಾಹಿನಿಗೆ ಬರಲು ಸಾಧ್ಯವಾಯಿತು. ನಾಲ್ವಡಿಯವರ ಕಾರ್ಯಕ್ರಮಗಳಿಗೆ ಅಯ್ಯರ್ ಸಹಕರಿಸಿದ್ದರ ಪರಿಣಾಮ ಇಂದು ಮೈಸೂರು ಪ್ರಾಂತ್ಯದಲ್ಲಿ ಪಂಚಮರ ಸಾಮಾಜಿಕ ಶೈಕ್ಷಣಿಕ ಬೆಳವಣಿಗೆಯನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ೧೯೧೫ ರಿಂದ ೧೯೪೩ರ ವರೆಗಿನ ಅವಧಿಯಲ್ಲಿ ಗೋಪಾಲಸ್ವಾಮಿ ಅಯ್ಯರ್‌ರವರ ಪಂಚಮ ಶೈಕ್ಷಣಿಕ ಸೇವೆಯನ್ನು ಸಮಾಜಕ್ಕೆ ಪರಿಚಯಿಸುವುದೇ ಆಗಿದೆ. ಅಲ್ಲದೆ ಅವರ ಚಿಂತನೆಗಳನ್ನು ಅಧ್ಯಯನಕ್ಕೊಳಪಡಿಸುವುದು ಇಲ್ಲಿನ ಆಶಯ.

**ಅಧ್ಯಯನದ ಪ್ರಾಮುಖ್ಯತೆ**

ಪಂಚಮರ ಆರ್.ಗೋಪಾಲಸ್ವಾಮಿಯವರ ಅಧ್ಯಯನದ ಸಮಾಜದ ಪುನರ್ ರಚನೆಯ ದೃಷ್ಟಿಯಿಂದ ಮಹತ್ವದಾಗಿದೆ. "ಇತಿಹಾಸವನ್ನು ಮರೆತವರು ಇತಿಹಾಸ ಸೃಷ್ಟಿಸಲಾರರು" ಎಂಬ

ಬಾಬಾಸಾಹೇಬ್ ಅಂಬೇಡ್ಕರವರ ಮಾತಿನಂತೆ ಇಂದು ಇತಿಹಾಸ ಮರೆತು ಬದುಕುತ್ತಿರುವ ಸಮಾಜಕ್ಕೆ ಐತಿಹಾಸಿಕ ಪ್ರಜ್ಞೆಯನ್ನು ಮೂಡಿಸಲು ಆ ಬಗ್ಗೆ ಕುರಿತು ಚಿಂತಿಸುವ ಮಹತ್ವದಾಗಿದೆ. ದೃಷ್ಟಿಯಿಂದ ಅಯ್ಯರ್‌ರವರ ತ್ಯಾಗ ನಿಸ್ವಾರ್ಥಸೇವಾ ಮನೋಭಾವ ಅವರ ಆದರ್ಶ ಜೀವನದ ಬಗ್ಗೆ ತಿಳಿಯಲು ನಮ್ಮ ಬದುಕಿನಲ್ಲಿ ಅವರ ವಿಚಾರಧಾರೆಗಳನ್ನು ಅಳವಡಿಸಿಕೊಳ್ಳುವ ದೃಷ್ಟಿಯಿಂದ ಅವರ ಬೌದ್ಧಿಕ ಉನ್ನತಿಯು ಅಸ್ಪೃಶ್ಯರಲ್ಲಿರುವ ಕೀಳರಿಮೆ ಮುಜುಗರ ಹಿಂಜರಿಕೆ ಭಯ ಮೊದಲಾದವನ್ನು ಹೋರಾಡಿಸಿ ಕೊಳ್ಳುವುದಕ್ಕೆ ಪೂರಕವಾಗಬಹುದೆಂದು ನಂಬಲಾಗಿದೆ. ಮತ್ತು ಈ ಸಮುದಾಯದವರಿಗೆ ಶೈಕ್ಷಣಿಕ ಸಾಮಾಜಿಕ ಆರ್ಥಿಕ ರಾಜಕೀಯ ಮತ್ತು ಸಾಂಸ್ಕೃತಿಕವಾದ ಇನ್ನಿತರ ಮಹತ್ವದ ಅಂಶಗಳ ಅರಿವನ್ನುಂಟು ಮಾಡುವ ದೃಷ್ಟಿಯಿಂದ ಈ ಅಧ್ಯಯನವು ಪ್ರೇರಣೆಯಾಗಬಹುದೆಂದು ನಂಬಲಾಗಿದೆ.

ಅಯ್ಯರ್‌ರವರ ನಿರ್ಧಿಷ್ಟ ಕಾಲದ ಚಲನಶೀಲ ಚಿಂತನೆಗಳು ಸಮಕಾಲೀನ ಸಂದರ್ಭದಲ್ಲಿ ಹಳೆಯದಾಗಬಹುದಾದರೂ ಸಮಕಾಲೀನ ಸಂದರ್ಭದ ಹೊಸ ಚಿಂತನೆಗಳಿಗೆ ಚಾರಿತ್ರಿಕ ಮಹತ್ವವನ್ನು ಪ್ರಗತಿಪರ ಪರಂಪರೆಯನ್ನು ಅವು ಒದಗಿಸಬಹುದೆಂಬ ನಂಬಿಕೆಯಾಗಿದೆ.

ಸ್ವತಂತ್ರಪೂರ್ವದಲ್ಲಿಯೇ ಪಂಚಮರಿಗಾಗಿ ಇವರು ಮಾಡಿರುವ ಸೇವೆ ಸೂಕ್ತ ಪ್ರಮಾಣದಲ್ಲಿ ಚರಿತ್ರೆಯಲ್ಲಿ ದಾಖಲಾಗಿರುವುದಿಲ್ಲ. ಈ ದಿಶೆಯಲ್ಲಿ ಅಯ್ಯರ್‌ರವರ ವಿಚಾರಗಳನ್ನು ಅವರ ಶೈಕ್ಷಣಿಕ ಸುಧಾರಣೆಗಳನ್ನು ದಾಖಲು ಮಾಡುವ ಒಂದು ಪ್ರಯತ್ನವಾಗಿದೆ. "ಮಾನವರ ಸೇವೆಯೇ ಮಾಧವನ ಸೇವೆ" ಎಂಬ ವಿಶಾಲ ವಿಚಾರ ದೃಷ್ಟಿಯಿಂದ ಜನಮನಕ್ಕಾಗಿ ದುಡಿದು ಚರಿತ್ರೆಯಲ್ಲಿ ಮರೆಯಾಗಿ ಉಳಿದಿರುವ ಅಯ್ಯರ್‌ರವರ ಜೀವನ ಸಾಧನೆಯ ಪರಿಚಯ ಪ್ರತಿಯೊಬ್ಬರಿಗೂ ಆದರ್ಶವಾಗಬಲ್ಲದೆಂದು ನಂಬಲಾಗಿದೆ. ಇಂತಹ ವ್ಯಕ್ತಿತ್ವವನ್ನು ಹೊಂದಿರುವ ಅಯ್ಯರ್‌ರವರನ್ನು ಮುಂದಿನ ಪೀಳಿಗೆಗೆ ಅವರ ವಿಚಾರಧಾರೆಗಳನ್ನು ಸಾಧನೆಗಳನ್ನು ತಿಳಿಸಿಕೊಡುವ ಒಂದು ಪ್ರಯತ್ನವಾಗಿದೆ. ಈ ಎಲ್ಲಾ ದೃಷ್ಟಿಕೋನ ಗಳಿಂದ ಅಯ್ಯರ್‌ರವರ ಜೀವನ ಚರಿತ್ರೆ ಸಮಕಾಲೀನ ಸಂದರ್ಭದಲ್ಲಿ ಸೂಕ್ತವೆನಿಸುತ್ತದೆ.

**ಅಧ್ಯಯನದ ವಿಧಾನ**

ಜಾಗತೀಕರಣ ಉದಾರೀಕರಣ ಹಿನ್ನೆಲೆಯಲ್ಲಿ ನಲುಗಿ ಹೋಗಿರುವ ಇಂದಿನ ಸಮಾಜದಲ್ಲಿ ಪ್ರಸ್ತುತ ಈ ಅಧ್ಯಯನವು ಮೈಸೂರು ಸಂಸ್ಥಾನದಲ್ಲಿ ಆರ್.ಗೋಪಾಲಸ್ವಾಮಿ ಅಯ್ಯರ್‌ರವರ ಚಿಂತನೆ ಮತ್ತು ಶೈಕ್ಷಣಿಕ ಕಾರ್ಯಚಟುವಟಿಕೆಗಳನ್ನು ಕೇಂದ್ರವಾಗಿಟ್ಟುಕೊಂಡು ಚಾರಿತ್ರಿಕ ವಿಧಿ-ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಅಯ್ಯರ್‌ರವರ ಸಮಕಾಲೀನ ವ್ಯಕ್ತಿಗಳ ಬೇಟಿ ಅವರ ಕುಟುಂಬದವರ ಬೇಟಿ ಮಾಡಿ ಅಯ್ಯರವರ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಹಾಗೂ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅವರ ನೆನಪುಗಳ ಧ್ವನಿಸುರುಳಿ ಮತ್ತು ಅವರ ಬಗ್ಗೆ ದೊರೆಯುವ ಮೌಖಿಕ ಆಕರಗಳ ಮೂಲಕ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಿಕೊಳ್ಳಲಾಗಿದೆ. ಹಾಗೆಯೇ ಅಯ್ಯರ್‌ರವರಿಗೆ ಸಂಬಂಧಿಸಿದ ಕಿರುಲೇಖನಗಳು ನಿಯತಕಾಲಿಕೆಗಳು ಪತ್ರಿಕೆಗಳಿಂದಲೂ ಮಾಹಿತಿ ಸಂಗ್ರಹಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಪ್ರಥಮ ವ್ಯಕ್ತಿಗಳ ಕುಟುಂಬದವರನ್ನು ಸಂದರ್ಶನ ಮಾಡಿ ಅಂದಿನ ಸಾಮಾಜಿಕ ಸ್ಥಿತಿಗಳು ಮತ್ತು ಅಯ್ಯರ್‌ರವರ ದಲಿತೋದ್ಧಾರ

ಕಾರ್ಯಗಳನ್ನು ತಿಳಿದುಕೊಳ್ಳಲು ಪ್ರಶ್ನಾವಳಿಯನ್ನು ಬಳಸಿಕೊಳ್ಳಲಾಗಿದೆ. ಹಾಗೂ ರಾಜ್ಯ ಪತ್ರಗಾರ ಇಲಾಖೆ ಸರ್ಕಾರಿ ಖಾಸಗಿ ಮತ್ತು ಸಂಘಸಂಸ್ಥೆಗಳಲ್ಲಿ ದೊರಕಿದ ಮಾಹಿತಿ ಸಂಗ್ರಹಿಸಲಾಗಿದೆ. ಹಾಗೂ ಮಾರ್ಗದರ್ಶಕರು ನೀಡಿದ ಸಲಹೆ ಮತ್ತು ಸೂಚನೆಗಳ ಮೇರೆಗೆ ಅಧ್ಯಯನಗಳನ್ನು ಕಟ್ಟಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಈ ಅಧ್ಯಯನವು ಒಟ್ಟು ೭ ಅಧ್ಯಾಯಗಳನ್ನು ಒಳಗೊಂಡಿದೆ. ಅಧ್ಯಾಯ ಒಂದು ಪ್ರಸ್ತಾವನೆಯ ಭಾಗ, ಇದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಪ್ರಾಮುಖ್ಯತೆ ಮತ್ತು ವಿಧಿ-ವಿಧಾನಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಆರ್.ಗೋಪಾಲಸ್ವಾಮಿ ಅಯ್ಯರ್‌ರವರ ಬಾಲ್ಯ ಮತ್ತು ಬದುಕು ಎನ್ನುವ ವಿಷಯ ಕುರಿತು ಚರ್ಚಿಸಲಾಗಿದೆ. ಇದರಲ್ಲಿ ಅಯ್ಯರ್‌ರವರ ಕೌಟಂಬಿಕ ಹಿನ್ನೆಲೆ, ಅವರ ಶಿಕ್ಷಣ ಮತ್ತು ಅವರ ಬದುಕನ್ನು ಕುರಿತದ್ದಾಗಿದೆ.

ಅಧ್ಯಾಯ ಮೂರರಲ್ಲಿ ಅಯ್ಯರ್‌ರವರು ಮೈಸೂರು ಸಂಸ್ಥಾನದಲ್ಲಿ ದಲಿತೋದ್ಧಾರ ಕಾರ್ಯಗಳ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ನಾಲ್ವಡಿಯವರ ಸರ್ಕಾರ ಮತ್ತು ಅಯ್ಯರ್ ಇದರಲ್ಲಿ ನಾಲ್ವಡಿಯವರು ಪಂಚಮರಿಗಾಗಿ ಸಂಸ್ಥಾನದಲ್ಲಿ ಕೈಗೊಂಡ ಕಾರ್ಯಗಳು, ಅಯ್ಯರ್‌ರವರನ್ನು ಪ್ರಜಾಪ್ರತಿನಿಧಿ ಸಭೆ ನೇಮಕ ಮತ್ತು ಅಯ್ಯರ್‌ರವರ ಕಾರ್ಯಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಐದು ವಸಾಹತುಶಾಹಿ ಕಾಲಘಟ್ಟದಲ್ಲಿ ಮೈಸೂರು ಸಂಸ್ಥಾನದಲ್ಲಿ ದಲಿತರ ಶಿಕ್ಷಣ ಎಂಬ ವಿಷಯ ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಆರು ಇದರಲ್ಲಿ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಪ್ರಥಮ ದಲಿತ ಮಹನೀಯರು ಎಂಬ ವಿಷಯ ಕುರಿತು ಚರ್ಚಿಸಲಾಗಿದೆ. ಇದರಲ್ಲಿ ಶಿಕ್ಷಣ ಪಡೆದ ಪ್ರಥಮ ವ್ಯಕ್ತಿಗಳ ಕುಟುಂಬಗಳಿಗೆ ಬೇಟಿ ನೀಡಿ ಅವರುಗಳ ಬಗ್ಗೆ ಅಧ್ಯಯನ ಮಾಡಲು ಯತ್ನಿಸಲಾಗಿದೆ.

ಅಧ್ಯಾಯ ಏಳು ರಲ್ಲಿ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ.

ಅಧ್ಯಾಯ ೮ರಲ್ಲಿ ಉಪಸಂಹಾರವನ್ನು ಕುರಿತದ್ದಾಗಿದೆ.

**ಅಡಿಟಿಪ್ಪಣಿ**

೧. ಕೆ. ಭೈರಪ್ಪ., ೨೦೦೪, ಭಾರತೀಯ ಸಮಾಜ ಪರಿಚಯ, ಸ್ವಪ್ನಬುಕ್ ಹೌಸ್, ಬೆಂಗಳೂರು, ಪು. ೨.

೩. ಚಂದ್ರಶೇಖರ ಪಾಟೀಲ (ಸಂ.) ೧೯೯೨, ಸಂಕ್ರಮಣ, ಸಂಪುಟ-೨೭, ಸಂಚಿಕೆ-೪, ಪು. ೯

೪. ಬಿ.ಎಂ. ಭಾರತಿ ಹಾದಿಗೆ, ೨೦೦೫, ಭಾರತೀಯ ಸಮಾಜ ರಚನೆ ಮತ್ತು ಬದಲಾವಣೆ, ಚೇತನ ಬುಕ್‌ಹೌಸ್, ಪು. ೩೨

೫. ಡಾ. ಚಿನ್ನಸ್ವಾಮಿ ಸೋಸಲೆ, ೨೦೦೫, ನಾಲ್ವಡಿ ಕೃಷ್ಣನ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೦

೬. Spcecher of his highness Krishnarjaa Wadeyar, Vol-1, 1902, 1920 Bangalore, Pp. 222-225

೭. ಕೆ. ವೀರತ್ತಪ್ಪ, ೧೯೭೭, ಮೈಸೂರು ಸಂಸ್ಥಾನದ ಸ್ವತಂತ್ರ ಚಳವಳ, ಬೆಂಗಳೂರು, ಪು.೭

೮. ಡಾ. ಎಸ್. ಚಂದ್ರಶೇಖರ್, ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ೧೮೮೧ ರಿಂದ ೧೯೪೦ರ ಕೆಲವು ಒಳನೋಟಗಳು, ಬೆಂಗಳೂರು.

೯. Proceding of The Government of Mysore, May 1921, P. 2

೧೦. ಡಾ. ಡಿ.ಎಸ್. ಜಯಪ್ಪಗೌಡ, ೧೯೯೪ಸ ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು, ಶುಭೋದಯ ಪ್ರಕಾಶನ, ಮೈಸೂರು, ಪು.೧೧

೧೧. ಡಾ. ಎಸ್. ಚಂದ್ರಶೇಖರ್, ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ೧೮೮೧ ರಿಂದ ೧೯೪೦ರ ಕೆಲವು ಒಳನೋಟಗಳು, ಬೆಂಗಳೂರು, ಪು.೯೧

೧೨. ಸೂರ್ಯನಾಥ ಯು. ಕಾಮತ್, (ಸಂ.) ೧೯೯೪ ಇತಿಹಾಸ ದರ್ಶನ, ಸಂಪುಟ-೯, ಕರ್ನಾಟಕದ ಇತಿಹಾಸ ಅಕಾಡೆಮಿ, ಬೆಂಗಳೂರು ಪು. ೨೨೯

೧೩. ಡಾ. ಜಿ. ಗೋಪಾಲ್, ೨೦೦೧, ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹ ಪ್ರಿಂಟರ್ಸ್, ಬೆಂಗಳೂರು, ಪು. ೬

# ಗೋಪಾಲಸ್ವಾಮಿ ಅಯ್ಯರ್‌ರ ಬಾಲ್ಯ ಮತ್ತು ಬದುಕು

**ಮಾ**ನವನ ಹುಟ್ಟು ಬದುಕು ಮತ್ತು ಸಾವು ಜಗತ್ತಿನ ಎಲ್ಲಾ ವಿಷಯಗಳಿಗಿಂತಲೂ ಜಟಿಲವಾದ ಹಾಗೂ ನಿಗೂಢವಾದ ಸಮಸ್ಯೆಗಳಾಗಿವೆ. ಅವುಗಳ ಪರಿಹಾರವಾನಾಗಲಿ ಜನನ ಮರಣ ಆದಿ ಅಂತ್ಯಗಳ ರಹಸ್ಯವನ್ನಾಗಲಿ ಅರಿಯಲು ಅಸಮರ್ಥನಾದ ಮಾನವನು ಜೀವನವನ್ನೇ ಬಹು ಜಟಿಲ ಸಮಸ್ಯೆಯೆಂದು ತಿಳಯುದಿದ್ದಾನೆ. ಮುಂದೆ ಸುಖ ದುಃಖಗಳ ಕಷ್ಟ ಕಾರ್ಪಣ್ಯಗಳ ಹಾಗೂ ಬಾಳಿನ ಹಲವಾರು ಏರುಪೇರುಗಳ ಚಕ್ರದಲ್ಲಿ ಸಿಲುಕಿ ಬದುಕುತ್ತಿದ್ದಾನೆ. ಆದರೆ ಶಾಂತಿ ಸಹನೆಗಳಿಂದ ಮತ್ತು ತನ್ನ ಸೂಕ್ಷ್ಮ ಬುದ್ಧಮತ್ತೆ ಹಾಗೂ ಸ್ಥೈರ್ಯ ಧೈರ್ಯಗಳಿಂದ ಹಸನ್ಮುಖನಾಗಿಯೇ ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಮಾನವನಿಗೆ ಹುಟ್ಟು ಬದುಕು ಸಾವು ಎಲ್ಲವು ಸದ್ಭಾವವನ್ನೇ ವ್ಯಕ್ತಪಡಿಸುತ್ತವೆ. ಈ ಸಮಸ್ಯೆಗಳಿರುವುದು ಮತ್ತು ಅವುಗಳ ಪರಿಹಾರ ದೊರೆಯುವುದು ತನ್ನಲ್ಲೇ! ಆದುದರಿಂದ ಮಾನವನಿಗೆ ಮಾನವತ್ವೇ ಹೇಗೆ ಸಮಸ್ಯೆಯಾಗಿದೆಯೇ ಅಂತಯೇ ಮಾನವತೆಯಲ್ಲಿಯೇ ಅದರ ಪರಿಹಾರವು ಇದೆ. ಇದರ ಮೂಲ ಪಾಲು ಚಿಂತನೆ ಮಾಡುವ ಅದನ್ನು ಅರಿತುಕೊಳ್ಳುವ ಮಹತ್ ಸಾಧನೆಯೇ ಜೀವನ. ಇದರ ಮೂಲ ಬದುಕಿನ ಉದ್ದೇಶ ಜೀವನದ ಮೌಲ್ಯ ಸಾಧನೆಗಳ ಒಳಮರ್ಮವನ್ನರಿಯದೆ ದಾರಿ ಕಾಣದೆ, ಮಾನವ ಜೀವನದಲ್ಲಿ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿಯೇ ಬಾಳಿ ಬಳಲಿ ಬೆಂದು ಕುರಡಾಗಿ ನರಳುತ್ತಿದ್ದಾನೆ.

ಮಾನವ ಶ್ರೇಷ್ಠ ಮಾನವ ಜನ್ಮದಲ್ಲಿ ಹುಟ್ಟಿದರೂ ಸಮಾಜದ ಕೆಲವೊಂದು ಸಾಮಾಜಿಕ ಪಿಡುಗಳಾದ ಅಂಧಶ್ರದ್ಧೆ ಮೂಢನಂಬಿಕೆ ಜಾತಿಯತೆ ಅಸ್ಪೃಶ್ಯತೆ ಮೊದಲಾದ ಭೀಕರ ಸಮಸ್ಯೆಗಳ ಮಡುವಿನಲ್ಲಿ ಬಿದ್ದು ಒದ್ದಾಡುತ್ತಿದ್ದಾನೆ. ಅಲ್ಲದೆ ಸಮಾಜದಲ್ಲಿ ಕೆಲವೊಂದು ಘಾತುಕ ದುಷ್ಟ ಶಕ್ತಿಗಳ ಮತ್ತು ಸ್ಥಾಪಿತ ಹಿತಾಸಕ್ತಿಗಳ ಮಾತ್ರವಲ್ಲ ಸಂಕುಚಿತ ಜಾತಿಯ ಮಡಿವಂತ ವರ್ಗದವರ ಬಹಿಷ್ಕಾರ ಕ್ಕೊಳಗಾಗಿ ಕೊನೆಗೆ ಜೀವನ್ಮರಣ ಹೋರಾಟದ ಅಂತಿಮ ಘಟ್ಟದಲ್ಲಿ ಅಂತ್ಯಂತ ಶೋಚನೀಯ ಪರಿಸ್ಥಿತಿಯಲ್ಲಿ ಜೀವನ ನಡೆಸುತ್ತಿರುವಾಗ ಅದನ್ನು ಅರಿತು ದಾರಿತೋರುವ ಪುಣ್ಯ ಪುರುಷರು ಸಾಧು ಸಂತರು ಜಗತ್ತಿನಲ್ಲಿ ಜನ್ಮತಾಳಿ ಕೈ ಹಿಡಿದು ನಡೆಸುತ್ತಾರೆ. ಇದು ನಮ್ಮ ಇತಿಹಾಸ.

ಮಹಾಪುರುಷರ ಜೀವನ ಸಂದೇಶಗಳು ಅವರ ಸಾಧನೆಗಳು ಕ್ರಾಂತಿಕಾರ ಸಾಮಾಜಿಕ ಸುಧಾರಣೆಗಳು ರಚನಾತ್ಮಕ ಕಾರ್ಯಗಳು ನಮ್ಮ ಕರ್ನಾಟಕದ ಇತಿಹಾಸದಲ್ಲಿ ಈ ಹಿಂದೆ ನಡೆದು ಬಂದ ಐತಿಹಾಸಿಕ ನೈಜ ಘಟನೆಗಳು. ಅಂತಹ ವ್ಯಕ್ತಿಗಳಲ್ಲಿ ಹೆಚ್ಚು ಆದರ್ಶ ಧ್ಯೇಯವಾದಿ ಮತ್ತು ಶ್ರೇಷವಿ ಮಾನವತಾವಾದಿ ಶ್ರೀಯುತ ಆರ್. ಗೋಪಾಲಸ್ವಾಮಿ ಅಯ್ಯರ್ ಒಬ್ಬರು. ಇವರೊಬ್ಬ ಇತಿಹಾಸ ಮಹಾ ಸಮಾಜ ಸುಧಾರಕರು. ಗೋಪಾಲಸ್ವಾಮಿ ಅಯ್ಯರ್‌ರವರು ಅತ್ಯಂತ ಸರಳ ಹಾಗೂ ಪರಿಶುದ್ಧ ಚಾರಿತ್ರ್ಯೆಯುಳ್ಳ ನಿರಾಡಂಬರ ವ್ಯಕ್ತಿ. ಅವರ ತ್ಯಾಗಮಯ ಜೀವನ ನಿಸ್ವಾರ್ಥ ಮಾನವೀಯ ಸೇವೆ ಮಾತ್ರವಲ್ಲ ಅವರ ಜೀವನದ ಕೊನೆಯುಸಿರಿನವರೆಗೂ ದೀನದಲಿತರ ಉದ್ಧಾರಕ್ಕಾಗಿ ಅದರಲ್ಲಿಯೂ ಶೈಕ್ಷಣಿಕ ಬೆಳವಣಿಗೆಗೆ ಅವರು ತೊಡಗಿಸಿಕೊಂಡ ಮಾರ್ಗ ಅಮೋಘವಾದುದು. ಮುಖ್ಯವಾಗಿ ಅಸ್ಪೃಶ್ಯ ಜನಾಂಗದವರ ಸರ್ವತೋಮುಖ ಅಭಿವೃದ್ಧಿಗಾಗಿ ರಚನಾತ್ಮಕವಾಗಿ ತಮ್ಮನ್ನು ತಾವು ಮರೆತು ಸಮರ್ಪಣಾ ಭಾವದಿಂದ ಅವರು ಸಲ್ಲಿಸಿದ ಪ್ರಾಮಾಣಿಕ ಸೇವೆ ತ್ಯಾಗ ಚಿಂತನೆಗಳನ್ನು ಕರ್ನಾಟಕ ಚರಿತ್ರೆಯ ಪುಟಗಳಲ್ಲಿ ಬರೆದಿಡಬೇಕಾದ ಅತ್ಯಂತ ಮಹತ್ವದ ಅಧ್ಯಾಯವಾಗಿದೆ.

**ಕೌಟುಂಬಿಕ ಹಿನ್ನೆಲೆ**

ಹಿಂದಿನ ಮದ್ರಾಸ್ ಪ್ರಾಂತ್ಯದ ತಂಜಾವೂರು ಜಿಲ್ಲೆಯ ಕುಂಭಕೋಣಂ ಸಮೀಪದಲ್ಲಿರುವ ಗಣಪತಿ ಅಗ್ರಹಾರ ಎಂಬ ಗ್ರಾಮದಲ್ಲಿ ರಾಮಸ್ವಾಮಿ ಅಯ್ಯರ್ ಮತ್ತು ಸುಬ್ಬಲಕ್ಷ್ಮೀ ಎಂಬ ಸಂಪ್ರದಾಯವಾದಿ ಬ್ರಾಹ್ಮಣ ದಂಪತಿಗಳು ವಾಸವಾಗಿದ್ದರು. ರಾಮಸ್ವಾಮಿ ಅಯ್ಯರ್ ತಮ್ಮ ತಂದೆಯ ಕಾಲದಲ್ಲೇ ಗುತ್ತಿಗೆದಾರರಾಗಿದ್ದು ನಂತರ ಮೈಸೂರು ರಾಜ್ಯದ ಕಾನೂನು ಸಲಹೆಗಾರರಾಗಿ ನೇಮಕಗೊಂಡರು. ನಂತರ ಮೈಸೂರು ಹೈಕೋರ್ಟಿನ ಸರ್ಕಾರಿ ನ್ಯಾಯವಾದಿ ಆಗಿ ವೃತ್ತಿನಿರತರಾಗಿದ್ದರು. ಇದೇ ವೇಳೆಗೆ ತಮಿಳುನಾಡಿನಲ್ಲಿ ತೀವ್ರಗೊಂಡ ಜಸ್ಟೀಸ್ ಪಾರ್ಟಿಯ ಹೋರಾಟ ಅಲ್ಲಿನ ಬ್ರಾಹ್ಮಣರಿಗೆ ಆತಂಕ ಹುಟ್ಟಿಸಿತು. ಇದರಿಂದಾಗಿ ೧೮ನೇ ಶತಮಾನದ ಅಂತ್ಯದ ವೇಳೆಗೆ ರಾಮಸ್ವಾಮಿ ಅಯ್ಯರ್‌ರವರು ತಮ್ಮ ವಾಸಸ್ಥಳವನ್ನು ಮೈಸೂರಿಗೆ ಸ್ಥಳಾಂತರಿಸಿದರು. ಕ್ರಮೇಣ ಬೆಂಗಳೂರಿನ ಚಾಮರಾಜಪೇಟೆಯ ೧೮ನೇ ಮುಖ್ಯ ರಸ್ತೆಯಲ್ಲಿರುವ ಎಲಿಫೆಂಟ್‌ಲಾಡ್ಜ್ (ಆನೆಮನೆ) ಎಂಬ ಮನೆಯಲ್ಲಿ ನೆಲೆಸಿದರು. ಆದ್ದರಿಂದ ಇವರು ವಾಸಮಾಡುತ್ತಿದ್ದ ಮನೆಯನ್ನು ಎಲಿಫೆಂಟಾಲಾಡ್ಜ್ (ಆನೆಮನೆ) ಎಂದು ಕರೆಯಲಾಗುತ್ತಿತ್ತು. ಏಕೆಂದರೆ ಈ ಮನೆಯ ಗೋಡೆಯ ಮೇಲೆ ನಾಲ್ಕು ದಿಕ್ಕುಗಳಗೂ ನಾಲ್ಕು ಆನೆಗಳನ್ನು ಮತ್ತು ಮನೆಯ ಮುಂಬಾಗದ ಗೋಡೆಯ ಮೇಲೆ ಮತ್ತೊಂದು ಆನೆಯನ್ನು ನಿರ್ಮಿಸಲಾಗಿದೆ. ಹಾಗಾಗಿ ಇವರ ಮನೆಯನ್ನು ಎಲಿಫೆಂಟಾಲಾಡ್ಜ್ ಎಂದು ಕರೆಯಲಾಗುತ್ತಿತ್ತು. ಈಗಲೂ ಸಹ ಈ ಮನೆಯಿರುವುದನ್ನು ನೋಡಬಹುದು. ಅಂದಿನ ಸಂದರ್ಭದಲ್ಲಿ ಈ ಮನೆಯು ಬೆಂಗಳೂರಿನ ಗಣ್ಯರುಗಳಾದಿಯಾಗಿ ಹೊರ ರಾಜ್ಯದ ಗಣ್ಯರುಗಳಿಗೆ ರಾತ್ರಿ ವೇಳೆ ತಂಗಲು ಎಲ್ಲೂ ಜಾಗ ಸಿಗದಿದ್ದಾಗ ಕೊನೆಯ ಪ್ರಯತ್ನದಲ್ಲಿ ಈ ವಿಶಾಲ ಮನೆಯಲ್ಲಿ ಅತಿಥ್ಯ ಸದಾ ಕಾದಿರುತ್ತಿತ್ತು.

ರಾಮಸ್ವಾಮಿ ಅಯ್ಯರ್‌ರವರದು ತುಂಬು ಕುಟುಂಬ. ಇವರಿಗೆ ಆರ್. ಗೋಪಾಲಸ್ವಾಮಿ

ಅಯ್ಯರ್, ಭೀಮಾ ಸುಬ್ರಹ್ಮಣ್ಯಂ, ಕೃಷ್ಣಾರ್ಜುನ ಸುಬ್ರಹ್ಮಣ್ಯಂ ಸ್ವಾಮಿನಾಥನ್ ನಕಲಿ ಸುಬ್ರಹ್ಮಣ್ಯಂ ಮತ್ತು ಸದಾದೇವ್ ಸುಬ್ರಹ್ಮಣ್ಯಂ ಎಂಬ ಐದು ಜನ ಗಂಡು ಮಕ್ಕಳು ಮತ್ತು ತಂಗಮ್ಮ ಎಂಬ ಹೆಣ್ಣು ಮಕ್ಕಳಿದ್ದರು. ರಾಮಸ್ವಾಮಿ ಅಯ್ಯರ್‌ರವರ ೨ನೇ ಮಗ ಭೀಮಾ ಸುಬ್ರಹ್ಮಣ್ಯಂರವರು ಎಂ.ಬಿ.ಬಿ.ಎಸ್. ಡಿ.ಪಿ.ಹೆಚ್. ಮಾಡಿ ಆರೋಗ್ಯ ಅಧಿಕಾರಿಯಾಗಿಯೂ ೩ನೇ ಮಗನಾದ ಕೃಷ್ಣಾರ್ಜುನ ಸುಬ್ರಹ್ಮಣ್ಯಂರವರು ವಕೀಲರಾಗಿಯೂ ೪ನೇಯ ಮಗ ಸ್ವಾಮಿನಾಥನ್ ನಕಲಿ ಸುಬ್ರಹ್ಮಣ್ಯಂ (ಅನಂತ ಸುಬ್ರಹ್ಮಣಂ) ರು ಮೈಸೂರು ಸರ್ಕಾರದಲ್ಲಿ ಮೈಶುಗರ್ ಕೈಗಾರಿಕಾ ಇಲಾಖೆಯ ನಿರ್ದೇಶಕರಾಗಿ ಸೇವೆ ಸಲ್ಲಿಸಿದರೆ ಕೊನೆಯವರಾದ ಸದಾದೇವ್ ಸುಬ್ರಹ್ಮಣ್ಯಂ(.ಆರ್. ಸುಬ್ರಹ್ಮಣ್ಯಂ)ರವರು ಮುದ್ರಾಸ್ ಸರ್ಕಾರದಲ್ಲಿ ಜಿಲ್ಲಾ ನ್ಯಾಯಾದೀಶರಾಗಿದ್ದರು. ಒಟ್ಟಾರೆ ಇವರದು ಒಂದು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಭವಾಗಿತ್ತು ಎಂದು ಹೇಳಬಹುದು. ಇವರ ಕುಲದೇವರು ಕುಂಭಕೋಣಂನ ಸುಬ್ರಹ್ಮಣ್ಯ ಆದ್ದರಿಂದ ತಮ್ಮ ಹೆಸರಿನ ಮುಂದೆ ಕುಲದೇವರ ಹೆಸರು ಸೇರಿಸಿಕೊಂಡಿರುವುದು ಒಂದು ವಿಶೇಷ.

**ಬಾಲ್ಯ**

ರಾಮಸ್ವಾಮಿ ಅಯ್ಯರ್‌ರವರು ಮೊದನೆಯ ಮಗನಾದ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ಮೈಸೂರಿನಲ್ಲಿ ೧೮೭೭ರ ಜೂನ್ ೩ರಂದು ಜನಿಸಿದರು. ತಂದೆಯವರ ಸಾಮಾಜಿಕ ಕ್ರಿಯೆಯು ಗೋಪಾಲಸ್ವಾಮಿ ಅಯ್ಯರ್‌ರವರ ಮೇಲೆ ಪ್ರಭಾವ ಬೀರಿತು. ಅಲ್ಲದೆ ಇವರೇ ಹಿರಿಯ ಮಗನಾದ್ದರಿಂದ ಇವರ ಬಗ್ಗೆ ಅಪಾರ ಅಭಿಮಾನವನ್ನು ಹೊಂದಿದ್ದರು. ಹಾಗಾಗಿ ಬಾಲ್ಯದಲ್ಲೇ ತಂದೆಯ ಬದುಕಿನ ತೀವ್ರ ಸೆಳೆತಕ್ಕೆ ಅಯ್ಯರ್ ಒಳಗಾದರಲ್ಲದೆ ತಂದೆಯ ಮಾನವೀಯತೆ ಪ್ರಾಮಾಣಿಕತೆ ದೂರದೃಷ್ಟಿ ಇವರ ಆತ್ಮವನ್ನು ಸೇರಿದವು.

**ವಿದ್ಯಾಭ್ಯಾಸ**

ಇವರ ಶಿಕ್ಷಣದ ಬಗ್ಗೆ ಪೂರ್ಣವಾದ ವಿವರ ದೊರೆಯದ ಕಾರಣ ದೊರಕಿರುವ ಮಾಹಿತಿಯ ಆಧಾರದ ಮೇಲೆ ಅವರ ವಿದ್ಯಾಭ್ಯಾಸದ ಬಗ್ಗೆ ಬರೆಯಲು ಪ್ರಯತ್ನಿಸಲಾಗಿದೆ. ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ವಿದ್ಯಾಭ್ಯಾಸವೆಲ್ಲ ಬೆಂಗಳೂರಿನಲ್ಲೇ ನಡೆಯಿತು. ಅಕ್ಷರ ಜ್ಞಾನ ಅಯ್ಯರ್‌ರವರಲ್ಲಿ ಸಾಮಾಜಿಕ ಕ್ರಾಂತಿಯ ಜ್ಞಾನವಾಗಿ ಅರಳತೊಡಗಿತು. ಇದೇ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ದೀನದಲಿತರ ಅಭಿವೃದ್ಧಿ ಕಾರ್ಯಚಟುವಟಿಕೆಗಳನ್ನು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಕೈಕೊಂಡಿದ್ದರು. ಹಾಗಾಗಿ ದೀನದಲಿತರ ಕಂಬನಿ ಆರ್ಥಿಕ ಅಭದ್ರತೆಗೊಳಗಾದವರ ಛಿದ್ರಗೊಂಡ ಬದುಕು ಇವೆಲ್ಲವು ಅಯ್ಯರ್‌ರವರ ಮನ ಕಲಕಿದವು. ಈ ನಡುವೆ ಇವರ ಆರೋಗ್ಯ ಕ್ಷೀಣಿಸು ತ್ತಿದ್ದರಿಂದ ಮತ್ತು ಅವರ ತಂದೆ ಮರಣ ಹೊಂದಿದ ಕಾರಣ ವಿದ್ಯಾಭ್ಯಾಸವನ್ನು ಮುಂದುವರೆಸುವುದು ಕಷ್ಟವಾಯಿತು. ಹೀಗಿದ್ದರೂ ಸಹ ತಮ್ಮ ಶಿಕ್ಷಣವನ್ನು ಮುಂದುವರಿಸಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಎಫ್.ಎ. (F.A.) ಪದವಿಯನ್ನು ಪಡೆದರು. ಆದರೆ ಮುಂದಿನ ವ್ಯಾಸಂಗಕ್ಕೆ ಮೂರ್ಛೆರೋಗ ಅಡ್ಡಿಪಡಿಸಿದ್ದರಿಂದ ಶಿಕ್ಷಣವನ್ನು ಮುಂದುವರೆಸಲು ಸಾಧ್ಯವಾಗಲಿಲ್ಲ. ಹಾಗಾಗಿ ತಮ್ಮ ವಿದ್ಯಾಭ್ಯಾಸಕ್ಕೆ ಪೂರ್ಣ ವಿರಾಮ ಹಾಕಿ ತಮ್ಮ ಕೌಟಂಬಿಕ ಜವಾಬ್ದಾರಿ ತೆಗೆದುಕೊಂಡು

ಪಂಚಮರ ಬದುಕಿನೊಳಗೆ ಪ್ರವೇಶ ಮಾಡಿದರು. ತಮ್ಮ ೩೦ನೇಯ ವಯಸ್ಸಿನ ವೇಳೆಗೆ ಅವರು ಸಂಪೂರ್ಣವಾಗಿ ಸಾರ್ವಜನಿಕ ವ್ಯಕ್ತಿಯಾಗಿ ರೂಪುಗೊಂಡರು. ವಿದ್ಯಾಭ್ಯಾಸ ತೊರೆದು ಸಾಮಾಜಿಕ ಕ್ಷೇತ್ರದಲ್ಲಿ ಕಾಲಿಟ್ಟ ಗೋಪಾಲಸ್ವಾಮಿಯವರಿಗೆ ಕಿಕ್ವಾಟ್ ಸ್ಟೇಟ್‌ನ ದಿವಾನರ ಮಗಳಾದ ಮೀನಾಕ್ಷಿಯವರೊಂದಿಗೆ ವಿವಾಹ ಮಾಡಲಾಯಿತು.

**ಕೌಟುಂಬಿಕ ಜೀವನ**

ಗೋಪಾಲಸ್ವಾಮಿ ಅಯ್ಯರ್ ಮತ್ತು ಮೀನಾಕ್ಷಿಯವರು ಉತ್ತಮ ಸತಿಪತಿಗಳಾಗಿ ಜೀವನ ನಡೆಸಿದರು. ಆದರೂ ಇವರಿಗೆ ಮಕ್ಕಳಿರಲಿಲ್ಲ. ಹೀಗಿದ್ದರೂ ಇವರ ದಾಂಪತ್ಯ ಪರಸ್ಪರ ಸ್ವಾತಂತ್ರ್ಯ ಜೀವನ ಮೌಲ್ಯಗಳಿಗೆ ಪೂರಕವಾಗಿ ಸಾಗುತ್ತಿತ್ತು. ಆದರೆ ಮೀನಾಕ್ಷಿಯವರ ಅಕಾಲಿಕ ಮರಣದಿಂದಾಗಿ ಅಯ್ಯರ್‌ರವರು ದಾಂಪತ್ಯದ ಸುಖ ಜೀವನವನ್ನು ಸಂಪೂರ್ಣವಾಗಿ ನಡೆಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಅಯ್ಯರ್‌ರವರು ಮನೆಯವರ ಒತ್ತಡಕ್ಕೆ ಮಣಿದು ಎರಡನೇ ಮದುವೆಗೆ ಒಪ್ಪಿಗೆ ಸೂಚಿಸಿ ಮೊದಲನೆಯ ಹೆಂಡತಿಯ ಸಂಬಂಧಿಕರಾದ ಸೌಂದರ್ಯವತಿಯೂ ಎತ್ತರದ ಆಕಾರವನ್ನು ಹೊಂದಿದ್ದ ರಾಧಮ್ಮಣ್ಣಿಯವರನ್ನು ವರಿಸಿದರು. ಈ ವೇಳೆಗಾಗಲೇ ಪಂಚಮೋದ್ಧಾರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಅಯ್ಯರ್ ತಮ್ಮ ಖಾಸಗಿ ಜೀವನವನ್ನು ತೀರ ಕಡಿಮೆ ಮಾಡಿದ್ದರು. ಖಾಸಗಿ ಜೀವನದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರೆ ವ್ಯಕ್ತಿಯ ವಿಕಾಸ ಅಸಾಧ್ಯ ಎಂದು ನಂಬಿದ್ದ ಅವರಿಗೆ ಯಾವುದೇ ಸರ್ಕಾರಿ ನೌಕರಿಯನ್ನು ಅಪೇಕ್ಷಿಸದೇ ಸಾರ್ವಜನಿಕ ಜೀವನದಲ್ಲಿ ಅದರಲ್ಲಿಯೂ ಪಂಚಮರ ಸೇವೆಯಲ್ಲಿ ಅಪಾರ ಆನಂದವಿತ್ತು. ಹಾಗಾಗಿ ಪಂಚಮರ ಶೈಕ್ಷಣಿಕ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯೇ ಅವರ ಖಾಸಗಿ ಜೀವನವಾಗಿತ್ತು. ಆದ್ದರಿಂದ ರಾಧಮ್ಮಣ್ಣಿಯವರು ಪತಿಯ ಈ ಕಾರ್ಯಗಳಲ್ಲಿ ಕಿಂಚಿತ್ತು ಲೋಪಬರದಂತೆ ನೋಡಿಕೊಳ್ಳುತ್ತಿದ್ದರು. ಅಲ್ಲದೆ ದಿನದಿತ್ಯವೂ ಮನೆಯ ಮುಂದೆ ಸೇರುತ್ತಿದ್ದ ಪಂಚಮ ವಿದ್ಯಾರ್ಥಿ ಬಳಗಕ್ಕೆ ಕಾಫೀ ಹಣ್ಣು ಹಂಪಲು ಕುಡಿಯುವ ನೀರು ಮೊದಲಾದಗಳನ್ನು ನೀಡಿ ಉಪಚಾರ ಮಾಡುತ್ತಿದ್ದರಲ್ಲದೆ ತಮ್ಮ ಮಕ್ಕಳಂತೆ ಬಹು ಪ್ರೀತಿಯಿಂದ ಕಾಣುತ್ತಿದ್ದರು. ಆದರೆ ಇಂತಹ ಆದರ್ಶ ದಂಪತಿಗಳಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಈ ಪಂಚಮ ವಿದ್ಯಾರ್ಥಿಗಳನ್ನು ಬಹಳ ಪ್ರೀತಿ ಗೌರವದಿಂದ ಕಾಣುತ್ತಿದ್ದರು. "ಹರಿಜನರೇ ಅವರ ಮಕ್ಕಳಾಗಬೇಕೆಂದು ಬಹುಶಃ ದೈವಾಜ್ಞೆ ಇರಬೇಕು" ಎಂದು ಅವರಿಂದ ಪ್ರೋತ್ಸಾಹಿತರಾಗಿ ಮುಂದೆ ಸರ್ಕಾರಿ ನೌಕರರಾದ ವೈ.ಸಿ. ಹೊಂಬಾಳಯ್ಯರವರು ಹೇಳಿದ್ದಾರೆ.[7]

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಮೊದಲ ಹೆಸರು ಗೋಪಾಲಧರ್ಮ ಸುಬ್ರಹ್ಮಣ್ಯಂ. ಆಗರ್ಭ ಶ್ರೀಮಂತ ಮನೆತನದಿಂದ ಬೆಳೆದುಬಂದ ಇವರಿಗೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಬೀರಿದ್ದರೂ ಸಹ ಶಿಸ್ತು ಇವರ ಮನೆತನದ ಪರಂಪರೆಯಲ್ಲಿ ಹಾಸುಹೊಕ್ಕಾಗಿತ್ತು. ಶ್ರೀಮಂತಿಕೆ ಇದ್ದರೂ ಕೂಡ ಇವರ ಸರಳತೆ ಸಜ್ಜನಿಕೆ ವಿನಯ ಸಂಪನ್ನತೆ ನೀರಾಡಂಬರ ಇವರ ಜೀವನದಲ್ಲಿ ಮನೆ ಮಾಡಿತ್ತಲ್ಲದೆ ಇತರರಿಗೂ ಮಾದರಿಯಾಗಿದ್ದಿತು. ಹಾಗಾಗಿ ಇವರಿಗೆ ಕೆಳವರ್ಗದವರ ಸೇವೆಯೇ ಪ್ರಧಾನ ಕಾರ್ಯಕ್ಷೇತ್ರವಾಯಿತು ಎಂದು ಹೇಳಬಹುದು.

೧೯೧೦ರಲ್ಲಿ ಆಫ್ರಿಕಾಕ್ಕೆ ವಿದೇಶ ಪ್ರವಾಸ ಕೈಗೊಂಡ ಮೈಸೂರಿನ ಯುವರಾಜರಾದ ಕಂಠೀರವ ನರಸಿಂಹರಾಜ ಒಡೆಯರವರು ಆ ದೇಶದ ನೀಗ್ರೋ ಜನಾಂಗದವರು ವಾಸಿಸುತ್ತಿದ್ದ ಕೊಳಚೆ ಪ್ರದೇಶಗಳನ್ನು ಬಿಳಿಯರ ದಬ್ಬಾಳಿಕೆಯನ್ನು ಕಣ್ಣಾರೆ ಕಂಡು ಗುಲಾಮಗಿರಿ ಅರೆಹೊಟ್ಟೆ ರೋಗರುಜಿನ ಮೊದಲಾದವುಗಳನ್ನು ನೋಡಿ ಮರುಕಗೊಂಡು ನಮ್ಮನಾಡಿನ ಪಂಚಮರ ಬದುಕು ಇವರಿಗಿಂತ ಉತ್ತಮವಲ್ಲ ಎಂಬ ಸತ್ಯ ಅವರಲ್ಲಿ ಅಂಕುರಿಸಿತು ಹೃದಯ ಮಿಡಿದು ಅಂದೇ ಪಂಚಮರ ಏಳಿಗೆಗಾಗಿ ಏನಾದರೂ ಮಾಡಬೇಕೆಂದು ದೃಢಸಂಕಲ್ಪ ಮಾಡಿದರು. ಅಲ್ಲದೆ ಸ್ವಾಮಿ ವಿವೇಕನಾಂದರವರ ಮಾತು ಮತ್ತು ಪತ್ರಗಳಿಂದ ಪ್ರಭಾವಿತರಾಗಿದ್ದ ಮಹರಾಜ ಮತ್ತು ಯುವರಾಜರು ಹಾಗೂ ವಿವೇಕನಾಂದ ರವರಿಗೆ ಆಶ್ವಾಸನೆ ಕೊಡುತ್ತಾ "ಮನೆಮಠ ವಸತಿ ಸೌಕರ್ಯ ಶಿಕ್ಷಣ ಮತ್ತು ಉದ್ಯೋಗದ ನೆರವಿನ ಕಾರ್ಯಭಾರವನ್ನು ನಾವೇ ವಹಿಸುತ್ತೇವೆ" ಎಂದು ಹೇಳಿದ ಮಾತನ್ನು ಉಳಿಸಿ ಕೊಳ್ಳುವುದೋಸ್ಕರ ಅಥವಾ ತಮ್ಮ ರಾಜ್ಯಭಾರದ ಅಸ್ತಿತ್ವವನ್ನು ಉಳಿಸಿಕೊಂಡು ಮುಂದುವರೆ ಯುವುದೊಕೋಸ್ಕರವಾಗಿ ಸಂಸ್ಥಾನದಲ್ಲಿ ಪಂಚಮರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆದರು. ಈ ಶಾಲೆಗಳು ಮುಂದೆ 'ಪಂಚಮಶಾಲೆ'ಗಳೆಂದು ಹೆಸರಾದವು. ಈ ಶತಮಾನದ ಪ್ರಾರಂಭದ ಹೊತ್ತಿಗೆ ಸರ್ಕಾರಿ ಶಾಲೆಗಳ ಜೊತೆಗೆ ಪಂಚಮ ಶಾಲೆಗಳ ಸ್ಥಾಪನೆಗೆ ಸರ್ಕಾರವು ದೃಢ ನಿರ್ಧಾರವನ್ನು ಮಾಡಿತು. ಈ ಮಹತ್ವದ ಕಾರ್ಯ ಸಾಧನೆಗಾಗಿ ಪೋಲೀಸ್‌ರ ನೆರವನ್ನು ಸಹ ಪಡೆಯಬೇಕಾಯಿತು. ಶೇಷಾದ್ರಿ ಅಯ್ಯರ್ ಕಾಂತರಾಜು ಅರಸು ಮಿರ್ಜಾ ಇಸ್ಮಾಯಿಲ್‌ರ ದಿವಾನ ಪದವಿಯ ಕಾಲದಲ್ಲಿ ಪಂಚಮರಿಗೆ (ಹೊಲೆಯ ಮತ್ತು ಮಾದಿಗ) ಶಿಕ್ಷಣ ಕಲಿಸುವ ಪ್ರಶ್ನೆ ಹೆಚ್ಚು ಮಹತ್ವ ಪಡೆಯಿತು. ಇದಕ್ಕಾಗಿ ಅನೇಕ ಕ್ರಮಗಳನ್ನು ಹಾಗೂ ಸೂಕ್ತ ನಿರ್ಧಾರಗಳನ್ನು ಕೈಗೊಂಡು ಪ್ರಗತಿಯುತ್ತ ಮೈಸೂರು ಸಂಸ್ಥಾನವನ್ನು ಕೊಂಡ್ಯೊಯ್ದರು. ಅಲ್ಲದೆ ಯುವರಾಜರು ೧೯೧೩ರಲ್ಲಿ 'ಮೈಸೂರು ಸಿವಿಲ್ ಆಂಡ್ ಸೋಷಿಯಲ್ ಪ್ರೊಗ್ರೆಸ್' ಎಂಬ ಸಮಿತಿಯನ್ನು ರಚಿಸಿ ಈ ಸಮಿತಿಗೆ ಸರ್ ಕೆ.ವಿ. ಪುಟ್ಟಣಚೆಟ್ಟಿಯವರನ್ನು ಅಧ್ಯಕ್ಷರನ್ನಾಗಿಯೂ ಎಂ. ಚಂಗಯ್ಯಚೆಟ್ಟಿ ಮತ್ತು ವಿ.ಎನ್. ನರಸಿಂಹ ಅಯ್ಯಂಗಾರ್‌ರವರನ್ನು ಸದಸ್ಯರನ್ನಾಗಿ ನೇಮಿಸಿ ಆ ಮೂಲಕ ವಿದ್ಯಾಭ್ಯಾಸ ಮತ್ತು ಸಮಾಜ ಸುಧಾರಣಾ ಕಾರ್ಯಕ್ರಮಗಳನ್ನು ಕೈಗೊಂಡರು. ಹಾಗೂ ಇದೇ ಸಂದರ್ಭದಲ್ಲಿ ಬೆಂಗಳೂರಿನಲ್ಲೂ ಸಮಾಜೋದ್ಧಾರಕ ಕೈಗೊಳ್ಳುವ ಅಗತ್ಯತೆಯನ್ನು ಮನಗಂಡು 'ಬೆಂಗಳೂರು ಸೋಷಿಯಲ್ ಸರ್ವಿಸ್ ಲೀಗ್'ನ್ನು ಸ್ಥಾಪಿಸಿ ಕಾಂತರಾಜೆ ಅರಸ್‌ರವರನ್ನು ಅಧ್ಯಕ್ಷರನ್ನಾಗಿ ಮತ್ತು ರಾಮನಾಥನ್‌ರವರನ್ನು ಕಾರ್ಯದರ್ಶಿಯಾಗಿ ನೇಮಿಸಿದರು. ಇದರ ಮೊದಲ ಸಮ್ಮೇಳನವು ಮೈಸೂರಿನಲ್ಲಿ ೩.೬.೧೯೧೭ ರಂದು ನಡೆಯಿತು. ಈ ಸಂದರ್ಭದಲ್ಲಿ ದಿವಾನರಾಗಿದ್ದ ಸರ್.ಎಂ. ವಿಶ್ವೇಶ್ವರಯ್ಯನವರು ಮಾತನಾಡಿ "ಅಸ್ಪೃಶ್ಯ ಜನಾಂಗದ ವಿದ್ಯಾಭ್ಯಾಸ ಅವರನ್ನು ತಲುಪುವಂತಿರಬೇಕು. ಅದಕ್ಕೆ ಮಾನವತ್ವವುಳ್ಳ ಸಂಸ್ಥೆಗಳು ಉದಯಿಸಿ ಈ ಜನರ ಅನೈತಿಕ ಅನುಕರಣೆಯನ್ನು ಹೋಗಲಾಡಿಸಬೇಕು" ಎಂದು ಹೇಳಿದರು. ಇದಾದ ನಂತರ ಮೈಸೂರಿನಲ್ಲೊಂದು 'ಡಿಪ್ರೆಸ್ಡ್‌ಕ್ಲಾಸ್ ಮಿಷನ್' ಎಂಬ ಸಂಸ್ಥೆ ಉದಯಿಸಿ ಇದರ ಸಮ್ಮೇಳನವು ಮೈಸೂರು ರಂಗಾಚಾರ್ಲು ಭವನದಲ್ಲಿ ನಡೆಯಿತು. ಸಮ್ಮೇಳನದಲ್ಲಿ ಭಾಗವಹಿಸಿ

ಮಾತನಾಡಿದ ಪುಟ್ಟಣ್ಣಚೆಟ್ಟಿಯವರು ಅಂತರ್ ಜಾತಿಯ ಬೋಜನ (ಸಹಬೋಜನ) ಕೂಟ ಏರ್ಪಾಡಾಗ ಬೇಕೆಂದು ಮತ್ತು ಮಾನವ ವೃಕ್ಷದ ಕೆಳಗಿರುವ ಬೇರುಗಳು ಕೊಳೆತರೆ ಮರ ಅರೋಗ್ಯಕರವಾಗಿ ಬೆಳೆಯಲು ಸಾಧ್ಯವಿಲ್ಲ ಎಂದು ಹೇಳಿದರು. ಈ ಮಾತಿನಲ್ಲಿ ಸತ್ಯವಿದೆ ಎನಿಸುತ್ತದೆ. ಏಕೆಂದರೆ ಅಂಬೇಡ್ಕರ್‌ರವರು ಹೇಳಿರುವಂತೆ "ಎಲ್ಲಿಯವರೆಗೆ ಅಸ್ಪೃಶ್ಯರಿಗೆ ಇತರರಿಗೆ ಸರಿಸಮಾನವಾದ ಧಾರ್ಮಿಕ ಆರ್ಥಿಕ ಮತ್ತು ಸಾಮಾಜಿಕ ಹಕ್ಕುಗಳಿರುವುದಿಲ್ಲವೋ ಅಲ್ಲಿಯವರೆಗೆ ಕೇವಲ ರಾಜಕೀಯ ಸ್ವಾತಂತ್ರದಿಂದ ಯಾವ ಪ್ರಯೋಜನವೂ ಆಗುವುದಿಲ್ಲ" ಮತ್ತು ಈ ದೇಶದ ಮೂಲ ಬೇರುಗಳಾದ ದಲಿತ ಸಮುದಾಯಗಳಿಗೆ ಶಿಕ್ಷಣ ಆರೋಗ್ಯ ಉದ್ಯೋಗ ಸಾಮಾಜಿಕ ಸಮಾನತೆಯನ್ನು ನೀಡದೆ ಹೋದರೆ ಭಾರತೀಯ ಹಿಂದು ಸಮಾಜ ಕೊಳೆತು ನಾರುತ್ತದೆ ಎಂದು ಹೇಳಿದರು. ಇದನ್ನು ಪುಟ್ಟಣ್ಣ ಚೆಟ್ಟಿಯವರು ಸೂಕ್ಷ್ಮವಾಗಿ ಅಂದೇ ಗ್ರಹಿಸಿರುವುದು ಗಮನಾರ್ಹವಾಗಿದೆ.

ಇದೇ ಸಂದರ್ಭದಲ್ಲಿ ಥಿಯಾಸಾಫಿಕಲ್ ಸೊಸೈಟಿಯು ಬೆಂಗಳೂರಿನಲ್ಲಿ ಸಮಾಜೋದ್ಧಾರ ಕಾರ್ಯಗಳನ್ನು ಕೈಗೊಂಡು 'ಸನ್ಸ್ ಆಫ್ ಇಂಡಿಯಾ' ಮತ್ತು 'ಡಾಟರ್ಸ್ ಆಫ್ ಇಂಡಿಯಾ' ಎಂಬ ಹೆಸರಿನಲ್ಲಿ ಜನರ ಸಂಘಟನೆಯಲ್ಲಿ ತೊಡಗಿತು. ೧೯೧೩ರ ವೇಳೆಗೆ ಈ ಸಂಘಟನೆಯಲ್ಲಿ ತೊಡಗಿಸಿಕೊಂಡ ಪ್ರತಿಯೊಬ್ಬರು ತಮ್ಮ ಜಾತಿ ಸಂಕೋಲೆಗಳಿಂದ ಹೊರಬಂದು ಸಮಾಜ ಸೇವೆ ಕೈಗೊಳ್ಳುತ್ತೇವೆಂದು ಪಣತೊಟ್ಟರು. ಇವರು ೧೯೧೪ರಲ್ಲಿ 'ಬ್ರದರ್ಸ್ ಆಫ್ ಸರ್ವೀಸ್' ಎಂಬ ಹೊಸ ನಾಮಾಂಕಿತದಿಂದ ಎಲ್ಲಾ ಜಾತಿಗಳ ಸಂಕೋಲೆಗಳಿಂದ  ಹೊರಬಂದರು. ಒಟ್ಟಾರೆ ಈ ಎಲ್ಲ ಪ್ರಯತ್ನಗಳು ಎಲ್ಲಿಯೂ ಸಲ್ಲದೆ ಸಮಾಜದಿಂದ ದೂರ ಸರಿದವರಾಗಿದ್ದ ಅಸ್ಪೃಶ್ಯರನ್ನು ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರು ತಮ್ಮ ಸ್ವಾರ್ಥ ಸಾಧನೆಗಾಗಿ ತಮ್ಮ ತಮ್ಮ ಕಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸಿದರು ಎಂದು ಹೇಳಬಹುದು. ಅದೇನಿದ್ದರೂ ಕೂಡ ಮೈಸೂರು ಸಂಸ್ಥಾನದಲ್ಲಿ ಪಂಚಮರ ಬಾಳಿನಲ್ಲಿ ಒಂದು ಹೊಸ ಬೆಳಕನ್ನು ತಂದಕೀರ್ತಿ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲುತ್ತದೆ. ಇದೇ ವೇಳೆಗೆ ಪಂಚಮರ ಶ್ರೇಯೋಭಿವೃದ್ಧಿಗಾಗಿ ಒಬ್ಬ ನಿಷ್ಕಳಂಕ ಸೇವಾ ನಿರತರಾದವರನ್ನು ಥಿಯೋಸಾಫಿಕಲ್ ಸೊಸೈಟಿಯ ಸದಸ್ಯರುಗಳಾದ ಜಸ್ಟೀಸ್ ಸುಬ್ರಹ್ಮಣ್ಯಂ ಅಯ್ಯರ್ ಜೆ. ಕೃಷ್ಣಮೂರ್ತಿ ಮತ್ತು ಅನಿಬೆಸೆಂಟರು ೧೯೧೫ರಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಿದರು. ಈ ವೇಳೆಗಾಗಲೇ ಥಿಯಾಸಾಫಿಕಲ್ ಸೊಸೈಟಿಯ ಸದಸ್ಯರಾಗಿದ್ದು ಎಫ್.ಎ. (F.A.) ಪದವಿಯನ್ನು ಮುಗಿಸಿ ಯಾವುದೇ ಸರ್ಕಾರಿ ಹುದ್ದೆಯನ್ನು ಬಯಸದೇ ಪಂಚಮರ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿದ್ದು ಈ ಸೇವಾ ಕಾರ್ಯಕ್ಕೆ ತಕ್ಕರಾಗಿದ್ದ ಆರ್. ಗೋಪಾಲಸ್ವಾಮಿ ಅಯ್ಯರ್‌ರವರನ್ನು ಮನಒಲಿಸಿದರು. ಇದಕ್ಕೆ ತಮ್ಮ ಸಂಪೂರ್ಣ ಬೆಂಬಲವನ್ನು ವ್ಯಕ್ತಪಡಿಸಿದ ಗೋಪಾಲಸ್ವಾಮಿ ಅಯ್ಯರ್‌ರವರು ೧೯೧೫ರಿಂದಲೇ ಅಸ್ಪೃಶ್ಯೋದ್ಧಾರಕ್ಕೆ ಕಂಕಣಬದ್ಧರಾಗಿ ನಿಂತರು. ನಂತರ ೧೯೧೭ರಿಂದ ಪೂರ್ಣಾವಧಿಯ ಸೇವೆಯಲ್ಲಿ ತನುಮನವನ್ನು ಅರ್ಪಿಸಿದ ಇವರು ಬೆಂಗಳೂರಿನ ಚಾಮರಾಜ ಪೇಟೆಯ ೧೪ನೇ ಮುಖ್ಯರಸ್ತೆಯಲ್ಲಿದ್ದ ತಮ್ಮ ನಿವಾಸ ಎಲಿಫೆಂಟ್‌ಲಾಡ್(ಆನೆಮನೆ)ನಿಂದ ದಲಿತೋದ್ಧಾರ ಕಾರ್ಯದಲ್ಲಿ ಬಾಗಿಯಾಗಿ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿದರು.

**ಅಯ್ಯರ್‌ರವರ ಬದುಕು**

ಅಯ್ಯರ್‌ರವರ ಸೇವಾ ಕ್ಷೇತ್ರ ವಿಸ್ತಾರಗೊಂಡು ಪ್ರಚಲಿತರಾದ್ದರಿಂದ ಘನ ಸರ್ಕಾರ ಮೈಸೂರು ಪ್ರಾಂತ್ಯದಾದ್ಯಂತ ಒಂಬತ್ತು ಜಿಲ್ಲೆಗಳಲ್ಲಿ ಪ್ರಯಾಣ ಮಾಡಲು ಉಚಿತ ರೈಲ್ವೆ ಪಾಸ್‌ನ್ನು ನೀಡಿತು. ಸಂಸ್ಥಾನದಲ್ಲಿ ಎಲ್ಲಿ ಯಾವಾಗಬೇಕಾದರೂ ಪ್ರಯಾಣ ಮಾಡಲು ಅನುಮತಿ ನೀಡಿತು. ಅಲ್ಲದೆ ಪಾಸಿನೊಂದಿಗೆ ಒಂದು ಸೈಕಲ್‌ನ್ನು ಸಹ ತಮ್ಮೊಂದಿಗೆ ತೆಗೆದುಕೊಂಡು ಹೋಗುವ ಸವಲತ್ತನ್ನು ೧೯೨೭ರಲ್ಲಿ ಪರವಾನಿಗೆಯನ್ನು ನೀಡಿತು. ತಮಗೆ ದೊರಕಿದ ಅಧಿಕಾರವನ್ನು ಸಮರ್ಪಕವಾಗಿ ಬಳಸಿಕೊಂಡ ಅಯ್ಯರ್ ಎಲ್ಲಿಯೂ ಸಲ್ಲದೆ ಸಮಾಜದಿಂದ ದೂರವಿದ್ದ ಪಂಚಮರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಅನೇಕಾರು ಕಾರ್ಯಗಳನ್ನು ರೂಪಿಸಿದರು.

ಯುವರಾಜ ಕಂಠೀರವ ನರಸಿಂಹರಾಜ ಒಡೆಯರು ಅಯ್ಯರ್‌ರವರ ಕ್ರೀಯಾಶೀಲತೆ ಪಂಚಮರ ಬಗ್ಗೆ ಅವರಿಗಿದ್ದ ಕಾಳಜಿ ಅವರ ಸಾಮಾಜಿಕ ಚಟುವಟಿಕೆಗಳನ್ನು ಗಮನಿಸಿ ೧೯೧೮ರಲ್ಲಿ ಪ್ರಜಾ ಪ್ರತಿನಿಧಿ ಸಭೆಗೆ ಆಯ್ಕೆ ಮಾಡಿದರು. ಅಯ್ಯರ್ ತಮ್ಮ ೪೦ನೇ ವಯಸ್ಸಿನಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಯಾದದ್ದು ಅವರ ವ್ಯಕ್ತಿತ್ವದ ಪ್ರತಿಭೆಗೆ ನಿದರ್ಶನ ಎಂದು ಹೇಳಬಹುದು. ಪರಿಣಾಮ ಇವರಿಂದ ಈ ಸಭೆಗೆ ಒಂದು ಹೊಸ ಕಾಂತಿ ರೂಪುಗೊಂಡಿತು. ಏಕೆಂದರೆ ಇವರ ಪ್ರವೇಶ ಯಾವ ಲಾಭಕಾಂಕ್ಷೆಯ ಸ್ವಾರ್ಥವಿಲ್ಲದ ಪಂಚಮರ ಧ್ವನಿಯಾಗಿತು. ಆದ್ದರಿಂದ ಅಯ್ಯರ್‌ರವರ ಮಾತುಗಳು ಪ್ರತಿನಿಧಿ ಸಭೆಗೆ ಒಂದು ಮಹತ್ವದ ಆಯಾಮವನ್ನು ಒದಗಿಸಿದವು. ಅವರ ನೇರ ನಿರ್ಭಿಡ ನಿಲುವು ಸಭೆಯ ಗಮನ ಸೆಳೆಯುತ್ತಿದ್ದವು. ಅವರಲ್ಲಿದ್ದ ಪ್ರಚಂಡ ವಿದ್ವತ್ತು ಪಂಚಮರ ಬಗ್ಗೆ ಇದ್ದ ಕಾಳಜಿಯ ಪರಿಣಾಮವಾಗಿ ಗಂಭೀರ ಸರಳತೆಯಿತ್ತು. ಅವರ ಸಜ್ಜನಿಕೆ ಮತ್ತು ಉತ್ತಮ ವಾಗ್ಮಿತನ ಎಂಥವರನ್ನು ಮಾನವೀಯತೆಯತ್ತಾ ಯೋಚಿಸುವಂತೆ ಹಾಗೂ ಮರುಳು ಮಾಡುವ ಶಕ್ತಿಯನ್ನು ಹೊಂದಿದ್ದರು. ಅವರ ವಿಚಾರಗಳು ಎಲ್ಲರ ಸಮ್ಮತಿ ಪಡೆಯಬಲ್ಲ ವೈಚಾರಿಕತೆಯನ್ನು ಹೊಂದಿದ್ದರಿಂದ ಸರ್ಕಾರವು ಪಂಚಮರ ಬಗ್ಗೆ ಗಮನ ಹರಿಸುವಂತೆ ಮಾಡಿದರು. ಅಲ್ಲದೆ ಪಂಚಮರ ಜನಸಂಖ್ಯೆಗೆ ಅನುಗುಣವಾಗಿ ಪ್ರಜಾಪ್ರತಿನಿಧಿ ಸಭೆಗೆ ಪಂಚಮ ಸದಸ್ಯರನ್ನು ಆಯ್ಕೆ ಮಾಡುವಂತೆ ಮಾಡಿ ಪಂಚಮರ ಸಂಖ್ಯೆಯನ್ನು ೭ರಿಂದ ೧೦ಕ್ಕೆ ಏರಿಸುವಂತೆ ಮಾಡಿದ್ದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

ಪ್ರಭುತ್ವ ಮತ್ತು ದಿವಾನರುಗಳ ಜೊತೆಗೆ ಸಖ್ಯ ಬೆಳೆಸಿಕೊಂಡಿದ್ದ ಅಯ್ಯರ್ ಪಂಚಮ ಜನಾಂಗದವರ ಶಿಕ್ಷಣ ಮತ್ತು ಸಾಮಾಜಿಕ ಬೆಳವಣಿಗೆಯ ಅನಿವಾರ್ಯತೆಯನ್ನು ಮನಗಂಡಿದ್ದರು. ಹಾಗಾಗಿ ಶಿಕ್ಷಣದ ಮೂಲಕ ಅಭಿವೃದ್ಧಿ ವಿವೇಕಗಳು ಪ್ರತಿಯೊಬ್ಬ ಪಂಚಮರಲ್ಲಿ ಬೆಳೆದರೆ ವ್ಯಕ್ತಿ ವಿಕಾಸ ಸಾಧ್ಯ ಎಂದು ಅವರು ನಂಬಿದ್ದರು. ಗ್ರಾಮದ ವಿಕಾಸಕ್ಕಿಂತ ಗ್ರಾಮದ ಹೊರಗೆ ಅಥವಾ ಓಣಿ ತಿಪ್ಪೆ ಹಳ್ಳಗಳಲ್ಲಿ ವಾಸ ಮಾಡುವ ಪಂಚಮ ಜನರ ವಿಕಾಸಕ್ಕೆ ಪ್ರಭುತ್ವವನ್ನು ಬಳಸಿಕೊಂಡರು. ಇವರು ಪಂಚಮರು ಸ್ಥಳೀಯ ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳುವಂತೆ ಪ್ರಾತಿನಿಧ್ಯ ಕಲ್ಪಿಸಿದ್ದು ಮಹತ್ವದ್ದಾಗಿದೆ. ಈ ಮೂಲಕ ಗಾಂದಿವಾದ ಮತ್ತು ಅಂಬೇಡ್ಕರ್‌ಗಳ ಸಂಯೋಗದಿಂದ ಹೊಸ ಗ್ರಾಮವಾದನ್ನು ಅವರು ರೂಪಿಸಿದರು.

ಶಿಕ್ಷಣ ಕೆಲವೇ ಸಮುದಾಯದ ಸ್ವತ್ತಾಗಿದ್ದ ಸಂದರ್ಭದಲ್ಲಿ ಅಯ್ಯರ್‌ರವರು ತಮಗೆ ನಾಲ್ವಡಿಯವರು ಹಳ್ಳಿಗಳ ವ್ಯವಹಾರದಿಂದ ಮಂತ್ರಿಮಂಡಲದ ವ್ಯವಹಾರಗಳವರೆಗೂ ನೀಡಿದ ವಿಶೇಷ ಅಧಿಕಾರವನ್ನು ಬಳಸಿಕೊಂಡು ಪಂಚಮರ ವಸತಿ ಶಾಲೆಗಳನ್ನು ವಿದ್ಯಾರ್ಥಿನಿಲಯಗಳನ್ನು ಆದಿ ಕರ್ನಾಟಕ ಅನುದಾನಿತ ಶಾಲೆ ಮತ್ತು ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿದರು. ವಿದ್ಯಾರ್ಥಿಗಳನ್ನು ಪಂಚಮ ಶಾಲೆ ಸರ್ಕಾರಿ ಮತ್ತು ಖಾಸಗಿ ಶಾಲೆಗಳಿಗೆ ಸೇರಿಸಿ ಉಚಿತ ಶಿಕ್ಷಣವನ್ನು ನೀಡಲು ಮುಂದಾದರು. ಎಲ್ಲೆಲ್ಲಿ ಪಂಚಮ ಶಾಲೆಗಳು ವಿದ್ಯಾರ್ಥಿನಿಲಯಗಳು ತೆರೆಯಬೇಕಾದ ಅನಿವಾರ್ಯತೆ ಇರುತ್ತದೆಯೋ ಅಲ್ಲಿ ಶಾಲೆಗಳನ್ನು ತೆರೆಯವಂಥ ಕ್ರಿಯೆಗೆ ಸರ್ಕಾರವನ್ನು ತೊಡಗಿಸಿದರು. ಇದರಿಂದಾಗಿ ಪಂಚಮ ವರ್ಗ ಅಕ್ಷರ ಸಂಸ್ಕೃತಿಗೆ ಇಳಿಯುವ ಮುಕ್ತ ವಾತಾವರಣವನ್ನು ನಿರ್ಮಿಸಿದರು. ಆ ಮೂಲಕ ಮುಂದೆ ಪಂಚಮರಲ್ಲಿ ಒಂದು ವೈಚಾರಿಕ ಕ್ರಾಂತಿ ಪ್ರಾರಂಭವಾಗಲು ಅವಕಾಶವಾಯಿತು. "ಮಗುವಿಗೆ ತಾಯಿಯ ಎದೆ ಹಾಲು ಎಷ್ಟು ಮುಖ್ಯವೋ ಹಾಗೆಯೇ ಶಿಕ್ಷಣವೂ ಪಂಚಮರಿಗೆ ಅಷ್ಟೇ ಮುಖ್ಯವಾದುದ್ದಾಗಿದು" ಎಂದು ತಿಳಿದು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಮುಖ್ಯ ನಿಲುವು ಹೊಂದಿ ಅದೇ ರೀತಿ ಕಾರ್ಯ ಪ್ರವೃತ್ತರಾಗಿ ಯಶಸ್ವಿಯಾದರು.

ಅಯ್ಯರ್‌ರವರು ಪಂಚಮರ ಎಳಿಗೆಯೊಡನೆ ದೀನದಲಿತರ ಮಕ್ಕಳನ್ನು ಶಾಲೆಗೆ ಸೇರಿಸಿ ಶಿಕ್ಷಣ ಕೊಡಿಸಿದರು. ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಸರ್ಕಾರದಲ್ಲೂ ಕಾರ್ಖಾನೆಗಳಲ್ಲಿ ನೌಕರಿ ಕೊಡಿಸಿದರು. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಹುಡುಗರ ಫಲಿತಾಂಶವನ್ನು ಎರಡು ದಿನ ಮೊದಲೇ ಕಾಗದ ಬರೆದು ತಿಳಿಸುತ್ತಿದ್ದರು. ತಮ್ಮ ಸೈಕಲ್‌ನಲ್ಲಿ ಸದಾ ಒಂದು ಬಟ್ಟೆ ಚೀಲ (ಬ್ಯಾಗ್) ನೇತಾಡುತ್ತಿತ್ತು. ಅದರಲ್ಲಿ ವಿದ್ಯಾರ್ಥಿಗಳ ವಿಳಾಸ ಓದುವ ತರಗತಿ ವಯಸ್ಸು ತಂದೆ–ತಾಯಿರ ಹೆಸರು ಯಾವ ಶಾಲೆ ಕಾಲೇಜುಗಳಲ್ಲಿ ಓದುತ್ತಿದ್ದಾನೆ ಎಂಬ ಎಲ್ಲಾ ವಿಷಯಗಳನೊಳಗೊಂಡ ದಾಖಲಾತಿ (ರಿಜಿಸ್ಟರ್) ಪುಸ್ತಕ ವಿರುತ್ತಿತ್ತು. ಅಲ್ಲದೆ ಅಂಚೆ ಕಾಗದ ಪತ್ರಗಳ ಸದಾ ತುಂಬಿರುತ್ತಿದ್ದವು. ಪರೀಕ್ಷೆಯಲ್ಲಿ ತೇರ್ಗಡೆಯಾದ ಹುಡುಗರಿಗೆ ಎಲ್ಲಿ ಎಂದೂ ತಮ್ಮನ್ನು ಕಾಣಬೇಕೆಂದು ಕಾಗದ ಬರೆದು ತಿಳಿಸುತ್ತಿದ್ದರು. ಅನುತ್ತೀರ್ಣಗೊಂಡ ವಿದ್ಯಾರ್ಥಿಗಳಿಗೆ "ನೀನು ವ್ಯಾಸಂಗ ಮುಂದುವರೆಸು ನಿನಗೆ ನಮ್ಮ ವಿದ್ಯಾರ್ಥಿನಿಲಯದಲ್ಲಿ ಸೀಟು ಕೊಡಿಸತ್ತೇನೆ. ಅನುತ್ತೀರ್ಣಗೊಂಡನೆಂದು ಧೈರ್ಯ ಗೆಡಬೇಡ ಮತ್ತೊಮ್ಮೆ ಪ್ರಯತ್ನಿಸು" ಎಂದು ಹುಡುಗರಿಗೆ ಕಾಗದ ಬರೆದು ಅವರಲ್ಲಿ ನವಚೇತನ ತುಂಬುತ್ತಿದ್ದರು. ತಮ್ಮ ಅಚ್ಚುಮೆಚ್ಚಿನ ಶಿಷ್ಯರುಗಳಿಗೆ ತಮ್ಮ ಪ್ರಯಾಣದ ವಿಷಯ ತಿಳಿಸಿ ಅಂದು ಆಯಾ ರೈಲ್ವೆ ನಿಲ್ದಾಣದಲ್ಲಿ ಕಾಯಬೇಕೆಂದು ತಿಳಿಸುತ್ತಿದ್ದರು. ಒಟ್ಟಾರೆ ಪಂಚಮ ಹುಡಗರಿಗೆ ಶಿಕ್ಷಣ ಮತ್ತು ನೌಕರಿ ಕೊಡಿಸುವುದಲ್ಲದೆ ಅವರ ಸಾಮಾಜಿಕ ಬೆಳವಣಿಗೆಯೇ ಅಯ್ಯರ್‌ರವರ ಕೆಲಸವಾಗಿತ್ತು.

ಸಾಮಾನ್ಯವಾಗಿ ಅಯ್ಯರ್‌ರವರು ಪಂಚಮ ವಿದ್ಯಾರ್ಥಿಗಳ ಮದುವೆಗೆ ಹೋಗಿ ಆಶೀರ್ವಾದ ಮಾಡಿ ಬರುತ್ತಿದ್ದರು. "ಮಾನವ ಒಮ್ಮೆ ಸಾಯುತ್ತಾನೆ ಆಗಲೂ ತಪ್ಪಿಸಿಕೊಳ್ಳಬಾರದು" ಎಂದು ಹೇಳುತ್ತಿದ್ದರು.[8] ಚಪ್ಪರದ ಮನೆಯಿಂದ ಹೊರಡುವ ಮುನ್ನ ಅಲ್ಲಿ ಸೇರುತ್ತಿದ್ದ ವಿದ್ಯಾರ್ಥಿ ಬಳಗ ಮತ್ತು ಪಂಚಮರನ್ನು ಉದ್ದೇಶಿಸಿ ವೈಭವದ ಮದುವೆ ಮಾಡಬೇಡಿ ಎಂದು ಹೇಳುತ್ತಿದ್ದರು. ಏಕೆಂದರೆ ಇರುವ ಒಂದೆರಡೆಕರೆ ಹೊಲ ಮಾರಿ ನಾಲ್ಕೂರು ದನಕರು ಕುರಿಗಳನ್ನು ಮಾರಿ ಇರುವ ಅಲ್ಪಸ್ವಲ್ಪ

ಆದಾಯದ ಮೂಲವನ್ನು ಕಳೆದುಕೊಳ್ಳುತ್ತೀರಿ ಎಂದು ಹೇಳುತ್ತಿದ್ದರು. ಜೊತೆಗೆ ಪಂಚಮರ ಸ್ಥಿತಿಗತಿಗಳನ್ನು ಚನ್ನಾಗಿ ಬಲ್ಲವರಾದ್ದರಿಂದ ಮದುವೆಗಾಗಿ ಸಾಲಗಾರರಾಗಬೇಡಿ. ಮೊದಲೇ ಜೀತಕ್ಕಿದ್ದ ಜನರು ನೀವು ಇನ್ನೇಷ್ಟು ದಿನ ಸಾಲಗಾರರಾಗಿ ಜೀತ ಮಾಡುವುದು? ಎಂದು ಹೇಳುತ್ತಿದ್ದರು. ವಿದ್ಯಾರ್ಥಿಗಳಾದ ನೀವು ಕಾಂಗ್ರೆಸ್ ಚಳವಳಿಯಲ್ಲಿ ಭಾಗವಹಿಸಬೇಡಿ. ಶಿಕ್ಷಣ ಮುಗಿಸಿದ ಮೇಲೆ ಬೇಕಾದರೆ ರಾಜಕೀಯಕ್ಕೆ ಸೇರಿಕೊಳ್ಳಿ ಈಗ ಮಾತ್ರ ಚಳವಳಿಯಲ್ಲಿ ಭಾಗವಹಿಸಬೇಡಿ ಎಂದು ಹೇಳುತ್ತಿದ್ದರು.[೪]

ಕಂಠೀರವ ನರಸಿಂಹರಾಜ ಒಡೆಯರು ಅವರ್ಣರೆಂದು ಮುಟ್ಟಲು ಕೂಡ ಯೋಗ್ಯರಲ್ಲವೆಂದು, ಪಂಚಮರೆಂದು ಕರೆದು ಆಚೆಗೆ ತಳ್ಳಲ್ಪಟ್ಟಿದ್ದ ಜನತೆಯ ಉದ್ಧಾರಕ್ಕಾಗಿ ೧೯೧೪ರಲ್ಲಿ ಬೆಂಗಳೂರಿನಲ್ಲಿ 'ಸಿವಿಕ್ ಸಂಘ'ವನ್ನು ಸ್ಥಾಪಿಸಿದರು. ಈ ಹಿನ್ನಲೆಯಲ್ಲಿ ಅಸ್ಥಿತ್ವಕ್ಕೆ ಬಂದ ಸಂಘ ಆ ನಿಟ್ಟಿನಲ್ಲೆ ಪ್ರಯತ್ನ ಪಟ್ಟು ಅವರಿಗೆ ಸಮಾಜದಲ್ಲಿ ಮನ್ನಣೆಯ ಸ್ಥಾನವನ್ನು ದೊರಕಿಸಲು ಮೊದಲು ಪ್ರಯತ್ನಿಸಿದೇ ಸಿವಿಕ್ ಸಂಘ. ಇದೊಂದೆ ಕೆಲಸಕ್ಕಾದರೂ ಸಂಘ ಜನ್ಮವೆತ್ತಿದುದು ಸಾರ್ಥಕ ಎಂದು ಒಪ್ಪಬೇಕು. ಈ ಸಂಘವೇ ಪಂಚಮರಿಗಾಗಿ ಕೆಲವು ಸಹಕಾರ ಸಂಘಗಳನ್ನು ತೆರೆದು ಆ ಸಂಘಗಳಿಗೆ ಸದಸ್ಯರಾಗುವಂತೆ ಪ್ರೇರಿಪಿಸಿತು. ಒಟ್ಟಾರೆ "ಸಿವಿಕ್ ಸಂಘ ಪಂಚಮರ ಏಳಿಗೆಗಾಗಿ ಕೈಗೊಂಡ ಕಾರ್ಯಕ್ಕೆಲ್ಲ ಗೋಪಾಲಸ್ವಾಮಿ ಅಯ್ಯರ್‌ರವರೇ ಜೀವಾಗಿದ್ದರು" ಎಂದು ಡಾ. ಬಿ.ಸಿ. ರಾಧಾಕೃಷ್ಣರವರು ಹೇಳಿದ್ದಾರೆ.[೫]

ಅಯ್ಯರ್ ತಮ್ಮ ಕೊಠಡಿಯಲ್ಲಿ ಎರಡು ಕಪಾಟು(ಅಲ್‌ಮೈರಾ)ಗಳಿದ್ದು ಒಂದರಲ್ಲಿ ಅನೇಕ ಗಣ್ಯವ್ಯಕ್ತಿಗಳ ಪುಸ್ತಕಗಳು ಬರೆದಿಟ್ಟ ಟಿಪ್ಪಣಿಗಳು ವಿದ್ಯಾರ್ಥಿಗಳ ವಿಳಾಸ ವೃತ್ತಿ ಮೊದಲಾದವುಗಳಿದ್ದವು. ಯಾವುದೇ ಅಧಿಕಾರಿಗಳನ್ನು ಭೇಟಿ ಮಾಡಬೇಕಾದಾಗ ಭಾಷಣ ಮಾಡಬೇಕಾದಾಗ ಪಂಚಮ ಜನಾಂಗಕ್ಕೆ ಸಂಬಂಧಪಟ್ಟ ಸರ್ಕಾರದ ಆಜ್ಞೆಗಳಿದ್ದರೆ ಮತ್ತೊಂದರಲ್ಲಿ ಈ ಜನರಿಗೆ ಸಂಬಂಧಪಟ್ಟ ಕಡತಗಳು, ದಾಖಲು ಪತ್ರಗಳನ್ನಿಟ್ಟಿದ್ದರು. ಗೋಡೆಗೆ ಹೊಂದಿಕೊಂಡಂತೆ ಇದ್ದ ಬೀರುವಿನಲ್ಲಿ ಅವರ ಸ್ವಚ್ಛವಾದ ಬಟ್ಟೆಗಳು ಶೂಟ್ಸ್ ಟೈಗಳಿದ್ದವು. ಇವುಗಳನ್ನು ಅವರ ಹೆಂಡತಿ ರಾಧಮ್ಮಣ್ಣಿಯವರು ಸ್ವಚ್ಛವಾಗಿಡುತ್ತಿದ್ದರು. ಕಪಾಟುವಿನಲ್ಲಿದ್ದ ಸರ್ಕಾರಿ ಆಜ್ಞೆಗಳನ್ನು ನೀವು ತೆಗೆದುಕೊಂಡು ಜೋಪಾನವಾಗಿ ಇಟ್ಟು ಕೊಳ್ರಯ್ಯ ನಮ್ಮ ಮನೆಯಲ್ಲಿದ್ದರೆ ಮುಂದೆ ನನ್ನ ತಮ್ಮನ ಮಕ್ಕಳು ಮಿಠಾಯಿ ಅಂಗಡಿಗೆ ಕೊಡುತ್ತಾರೆ. ಪಕೋಡ ಜಿಲೇಬಿ ತಿಂದು ಜನ ಕೈಬಾಯಿ ಒರೆಸಿ ಬಿಸಾಡುತ್ತಾರೆ ಎಂದು ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು. ನಿವೆಲ್ಲಾ ಬೂಕರ್ ಟಿ. ವಾಷಿಂಗ್‌ಟನ್ ಲೆನಿನ್ ಕಾರ್ಲ್‌ಮಾರ್ಕ್ಸ್ ಬಗ್ಗೆ ಓದಿ ಅವರು ನೀಗ್ರೋ ಜನಾಂಗವನ್ನು ಮುಂದೆ ತಂದಂತೆ ನೀವು ನಿಮ್ಮ ಜನಾಂಗವನ್ನು ಸಮಾಜದಲ್ಲಿ ಮೇಲೆತ್ತುವ ಪ್ರಯತ್ನಮಾಡಿ ಎಂದು ಹೇಳುತ್ತಿದ್ದರು. ಮುಂದುವರೆದು ಭಗವದ್ಗೀತೆ ಬೈಬಲ್‌ಗಳನ್ನು ಓದಿ ಅರ್ಥ ಮಾಡಿಕೊಳ್ಳಿ ಆಗ ನಿಮಗಾಗಿರುವ ಅನ್ಯಾಯ ತುಳಿತದ ಬಗ್ಗೆಯಲ್ಲದೆ ಆ ಧರ್ಮದ ಬಗ್ಗೆ ಅರ್ಥವಾಗುತ್ತದೆ. ನಿಮ್ಮಲ್ಲಿ ಧೈರ್ಯ ಬರುತ್ತದೆ. ಸಂಘಟನೆ ಯಾಗುತ್ತೀರಿ, ವಾಗ್ಮೀಗಳಾಗುತ್ತೀರಿ 'ಅರ್ಧಜ್ಞಾನ ಸದಾ ಅಪಾಯ' ಎಂದು ಉದೇಶಿಸುತ್ತಿದ್ದರು. ನನಗೆ ನಾಟಕ ಸಂಗೀತ ಸಿನೆಮಾಗಳಲ್ಲಿ ಅಭಿರುಚಿಯಿಲ್ಲ. ನೀವು ನನ್ನ ಹಾಗೆ ಆಗಬೇಡಿ ಓದುವಾಗ ಓದಿ

ಆಟವಾಡುವಾಗ ಆಟಗಳನ್ನಾಡಿ ಆದರೆ 'Eat Ragi ball and play valy ball'[೬] ಮಾತ್ರ ಆಗಬಾರದು. ಇಲ್ಲಿ 'ದಡ್ಡನಿಗೆ ದೊಣ್ಣೆ ಪೆಟ್ಟು ಜಾಣನಿಗೆ ಮಾತಿನ ಪೆಟ್ಟು' ಎನ್ನುವ ಮಾತಿನಂತೆ ವಿದ್ಯಾರ್ಥಿಗಳಿಗೆ ಎಚ್ಚರಿಕೆ ನೀಡುವಂತೆಯೂ ವಿಡಂಬನಾತ್ಮಕವಾಗಿಯೂ ಮಾತನಾಡುತ್ತಿದ್ದರು ಎಂಬುದು ತಿಳಿದುಬರುತ್ತದೆ. ಇವರು ನಿಷುವಿರವಾದಿಯಾದರೂ ಮೃದುಧೋರಣೆ ಹೊಂದಿದರೆಂಬುದಕ್ಕೆ ಹೇಳುವುದಾದರೆ ಯಾರಾದರೂ ತಪ್ಪು ಮಾಡಿದರೆ ಅದನ್ನೆ ಮನಸ್ಸಿನಲ್ಲಿಟ್ಟು ಕೊಳ್ಳಬಾರದು. ಈರುಳ್ಳಿ ಎಲ್ಲಿ ತಿಂದರೂ ಅದರ ವಾಸನೆ ಬಿಡುವುದಿಲ್ಲ. ಆದ್ದರಿಂದ ನಿಮ್ಮ ವಿಷಯದಲ್ಲೂ ಹಾಗಾಗಬಾರದು ಎಂದು ವಿದ್ಯಾರ್ಥಿಗಳನ್ನು ಕುರಿತು ಹೇಳುತ್ತಿದ್ದರು.

"Sentiment and tradition must stand the test of hanest critsim and should have the good grace of Change for the better when reason dictes it". ಒಳ್ಳೆಯ ಕೆಲಸ ಮಾಡಬೇಕಾಗಿ ಬಂದಾಗ ಎತಕ್ಕೆ ಮಾಡಬೇಕು? ಎನ್ನುವ ಬದಲು ಏಕೆ ಮಾಡಬಾರದು? ಎಂದು ತಿದ್ದುಕೊಳ್ಳಿ. ನಾವು ಕ್ಷಮಿಸುವುದನ್ನು ಕೆಟ್ಟ ವಿಷಯಗಳನ್ನು ಮರೆತು ಬಿಡುವುದನ್ನು ಕಲಿಯಬೇಕು. ಅರ್ಧಜ್ಞಾನ ಸದಾ ಅಪಾಯಕಾರಿ. ದೊಡ್ಡ ವ್ಯಕ್ತಿಗಳ ಬಗ್ಗೆ ಓದಿ ಇತರರಿಗೂ ತಿಳಿಸಿ ಅದರಂತೆ ನೀವು ಆಗಬೇಕೆಂಬ ಧ್ಯೇಯ ಸಂಪಾದಿಸಿಕೊಳ್ಳಿ" ಹೀಗೆ ಅಜ್ಞಾನದಲ್ಲಿದ್ದ ಪಂಚಮ ವಿದ್ಯಾರ್ಥಿಗಳಿಗೆ ಹೃದಯಾಂತರಾಳದಿಂದ ಬುದ್ಧಿವಾದ ಹೇಳುತ್ತಿದ್ದರು.

ಪಂಚಮ ಹುಡುಗರ ಜ್ಞಾನ ಭಂಡಾರ ವೃದ್ಧಿಸಲೆಂದು ನರಸಿಂಹರಾಜ ವಿದ್ಯಾರ್ಥಿಗಳನ್ನು ಬಿನ್ನಿ ಮಿಲ್ಸ್ ರಾಜಾಮಿಲ್ಸ್ ಪೋರ್ಸ್ ಲೈನ್ ಫ್ಯಾಕ್ಟರಿ ಗಾಜಿನ ಕಾರ್ಖಾನೆ, ಥಿಯೋಸಾಫಿಕಲ್ ಸೊಸೈಟಿ ರಾಮಕೃಷ್ಣ ಆಶ್ರಮಗಳಿಗೆ ಹುಚ್ಚರ ಆಸ್ಪತ್ರೆ ಸೆಂಟ್ರಲ್‌ಜೈಲ್ ಮತ್ತು ಪ್ರಜಾಪ್ರತಿನಿಧಿಸಭೆಗೆ ಕರೆದೊಯ್ಯು ತ್ತಿದ್ದರು. ಇದರ ಹಿನ್ನೆಲೆಯನ್ನು ಗಮನಿಸಿದಾಗ ಬದುಕಿನ ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳಲಿ ಎಂಬ ಉದ್ದೇಶದಿಂದ ಮತ್ತು ನೈತಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಲಿ ಎಂಬ ಕಾರಣದಿಂದ ಕರೆದೊಯ್ಯು ತ್ತಿರಬಹುದು. ಸುಮಾರು ನಾಲ್ಕು ಭಾಷೆಯನ್ನು ಬಲ್ಲವರಾಗಿದ್ದ ಇವರು ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಕಲಿಯುವಂತೆ (ಇಂದಿನ ಜಾಗತೀಕರಣದ ಹಿನ್ನೆಲೆಯಲ್ಲಿ ಇಂಗ್ಲಿಷ್ ಭಾಷೆ ಕಲಿಯುವುದು ಅನಿವಾರ್ಯವಾಗಿದೆ) ಮತ್ತು ಜ್ಞಾನವನ್ನು ಉತ್ತಮ ಪಡಿಸಿಕೊಳ್ಳಲು ಬೈಬಲ್‌ನ್ನು ಓದಬೇಕೆಂದು ಹುಡುಗರಿಗೆ ತಿಳಿಸಿ ಅನುಷ್ಠಾನ ಗೊಳಿಸಿದರು. "ಅಯ್ಯರವರಿಗೆ ಕನ್ನಡ ಬರುತ್ತಿದ್ದರೂ ಅವರ ಬಾಯಲ್ಲಿ ಕನ್ನಡ ಸುಲಭವಾಗಿ ತಿರುಗುತ್ತಿರಲಿಲ್ಲ. ಸಾಮಾನ್ಯವಾಗಿ ಅವರು ಇಂಗ್ಲಿಷ್‌ನಲ್ಲಿಯೇ ಮಾತನಾಡು ತ್ತಿದ್ದರು".[೭]

ಪಂಚಮ ಜನರ ಮೂಢನಂಬಿಕೆಗಳನ್ನು ನೀಗಿ ವೈಚಾರಿಕವಾದವನ್ನು ಬೆಳೆಸುವ ಕೆಲಸ ಮಾಡಿದ್ದಾರೆ. ಕರ್ನಾಟಕದ ಸಾಮಾಜಿಕ ಸಂದರ್ಭದಲ್ಲಿ ಸಾಂಸ್ಕೃತಿಕವಾದ ಮಹತ್ವದ ಕೆಲಸವನ್ನು ಇವರು ಆ ಕಾಲದಲ್ಲಿಯೇ ಮಾಡಿದ್ದಾರೆ. ಧರ್ಮದ ವಿಷಯವಾಗಿ ಅವರು ತಟಸ್ಥ ನಿಲುವನ್ನು ಹೊಂದಿದ್ದರೆಂಬುವುದಕ್ಕೆ ಹೇಳವುದಾದರೆ ಇವರಿಗೆ ಯಾವ ಧರ್ಮ ಜಾತಿ ಮತ ಪಂಗಡಗಳ ಬಗ್ಗೆ ಒಲವಿರಲಿಲ್ಲ. ಧರ್ಮದಲ್ಲಿದ್ದ ಅಸಮಾನತೆ ಅನೈತಿಕತೆ ತಾರತಮ್ಯ ಪಕ್ಷಪಾತ ಮೇಲು-ಕೀಳು ಎಂಬ ಭಾವನೆಗಳು ಹಿಂದೂಧರ್ಮದಲ್ಲಿ ಇದ್ದುದರಿಂದ ಈ ನಿರ್ಧಾರಕ್ಕೆ ಬಂದಿರಬಹುದು. ಬುದ್ಧನ

ಮಾದರಿಯಲ್ಲಿಯೇ ಪಂಚಮರು ಹೆಂಡ ಕುಡಿಯುವ ವಿಚಾರವಾಗಲಿ ಅಥವಾ ಗೋಮಾಂಸ ತಿನ್ನುವ ವಿಚಾರವಾಗಿ ಹೆಚ್ಚು ಮಾತನಾಡುತ್ತಿರಲಿಲ್ಲ ಎಂದು ವೈ.ಸಿ. ಹೊಂಬಾಳಯ್ಯ ಹೇಳಿದ್ದಾರೆ. ಬಹುಶಃ ಸವರ್ಣೀಯರು ಮನೆ ಹೋಟೆಲ್ ಕ್ಲಬ್‌ಗಳಲ್ಲಿ ಕುಡಿದು ಮಾಂಸ ತಿನ್ನುತ್ತಿದ್ದರಿಂದ ಇರಬಹುದು. ಈ ಕಾರಣದಿಂದಾಗಿಯೇ ಪಂಚಮರನ್ನು ಅರಮನೆಗೆ ಪ್ರವೇಶ ಮಾಡಲು ಕೆಂಪರಾಜಮ್ಮಣ್ಣಿಯವರು ಬಿಡುತ್ತಿರಲಿಲ್ಲ. ಈ ವಿಷಯವನ್ನು ಅಯ್ಯರ್‌ರವರು ಯುವರಾಜರಿಗೆ ತಿಳಿಸಿದಾಗ ರಾಣಿಯ ಮನವಲಿಸಿ ಪಂಚಮರ ಪ್ರವೇಶಕ್ಕೆ ಒಪ್ಪಿಸುವಂತೆ ಮಾಡಿದರು.

ಅಯ್ಯರ್‌ರವರು ಸ್ವಾಭಿಮಾನದ ವ್ಯಕ್ತಿತ್ವವನ್ನು ಹೊಂದಿದ್ದರೆಂಬುದಕ್ಕೆ ಅವರ ಸ್ವಂತ ತಮ್ಮ ಅನಂತ ಸುಬ್ರಹ್ಮಣ್ಯಂಅಯ್ಯರ್ ಮೈಸೂರಿನ ಮೈ ಶುಗರ್ ಕಾರ್ಖಾನೆಯ ಅಧ್ಯಕ್ಷರಾಗಿದ್ದು ಅಲ್ಲೇ ವಾಸವಾಗಿದ್ದರು. ಆದರೂ ಮೈಸೂರಿಗೆ ಹೋದಾಗ ತಮ್ಮನ ಮನೆಗೆ ಎಂದೂ ಸಹ ಹೋಗುತ್ತಿರಲಿಲ್ಲ. ಕಾರಣ ಪಂಚಮೋದ್ಧಾರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ ಅವರನ್ನು ಮನೆಗೆ ಸೇರಿಸುತ್ತಿರಲಿಲ್ಲ. ಹಾಗೂ ಪರೆಯರನ್ನೆಲ್ಲಾ ಮನೆಗೆ ಸೇರಿಸಿಕೊಳ್ಳುತ್ತಿಯಾ ನಮ್ಮ ಮನೆಗೆ ಬರಬೇಡ್ವ ಎಂದು ಹೇಳಿದ್ದರು. ಇಲ್ಲಿ ಅನಂತ ಸುಬ್ರಹ್ಮಣ್ಯಂರವರಿಗೆ ಪಂಚಮರ ಬಗ್ಗೆ ಇದ್ದ ಮನೋಭಾವನೆ ವ್ಯಕ್ತವಾಗುತ್ತದೆ. ಇದಕ್ಕೆ ಉತ್ತರವಾಗಿ "ಪಂಚಮರ ಸೇವೆಯ ಮಾಧವನ ಸೇವೆ" ಎಂದು ನಂಬಿದ್ದ ಅಯ್ಯರ್ "ಹಾಗೆಲ್ಲಾ ಅವರುಗಳನ್ನು ತೆಗಳಬಾರದು. ನಿನಗೇನು ಆಸ್ತಿಬೇಕೆ ನನ್ನ ಸರ್ವ ಆಸ್ತಿಯನ್ನು ನಿನಗೆ ಈಗಲೇ ಬರೆದುಕೊಡುತ್ತೇನೆ. ನೀನು ಕರೆದರೂ ನಿನ್ನ ಮನೆಗೆ ಬರಲಾರೆ" ಎಂದು ಹೇಳಿ ತಮ್ಮ ಜೀವಿತದ ಕೊನೆಯತನಕ ಅವರ ಮನೆಗೆ ಹೋಗದೆ ಮೈಸೂರಿಗೆ ಬಂದಾಗಲೆಲ್ಲ ಮಹಾರಾಜ ಕಾಲೇಜಿನಲ್ಲಿ ಗಣಿತ ಅಧ್ಯಾಪಕರಾಗಿದ್ದ ಕೆ.ಬಿ. ಮಾಧವರವರ ಮನೆಯಲ್ಲೇ ಉಳಿದುಕೊಳ್ಳುತ್ತಿದ್ದರು.

ಕಾಲದ ಮಹತ್ವವನ್ನು ಚನ್ನಾಗಿ ಅರಿತವರಾಗಿದ್ದ ಅಯ್ಯರ್ ಯಾರಾದರು ಏನ್ ಸಾರ್ ಚನ್ನಾಗಿದ್ದೀರಲ ಎಂದು ಯೋಗಕ್ಷೇಮ ವಿಚಾರಿಸಿದರೆ ನಿನಗೆ ಅದೆಲ್ಲಾ ಯಾಕಯ್ಯ? ವೃಥಾ: ವಿಷಯಗಳಲ್ಲಿ ಕಾಲ ಕಳೆಯಬೇಡ ನೀನು ನಿನ್ನ ಕೆಲಸಕ್ಕೆ ಹೋಗು ಎಂದು ಹೇಳುತ್ತಿದ್ದರು ಎಂದು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಅವರ ತಮ್ಮನ ಮಗಳಾದ ಮುತ್ತುಲಕ್ಷ್ಮೀಯವರು ತಿಳಿಸಿರುತ್ತಾರೆ. "ಅಯ್ಯರ್ ಅವರು ನಾನು ಸಾಯುವುದಕ್ಕಿಂತ ಮುಂಚೆ ಐದು ನಿಮಿಷ ಸಮಯ ಸಿಕ್ಕರೆ ನಮ್ಮ ಮನೆಯಿಂದ ಸ್ಮಶಾನಕ್ಕೆ ಸೈಕಲ್ ಮೇಲೆ ಹೋಗಿ ಸಾಯುವ ಅಪೇಕ್ಷೆ ನನಗಿದೆ" ಎಂದು ಹೇಳುತ್ತಿದ್ದ ಅಯ್ಯರ್ "ಓ ದೇವರೆ ನಾನು ಇರುವ ಹಾಗೆ ನನ್ನನ್ನು ಕರೆದುಕೊ. ನಿನ್ನ ಅಭಿಲಾಷೆಯಂತೆ ನನ್ನನ್ನು ಉಪಯೋಗಿಸು. ಮುಂದೆ ಹೆಣ್ಣೊ ಗಂಡೊ ಒಟ್ಟಿನಲ್ಲಿ ಮಾನವನನ್ನಾಗಿ ಮಾಡು. ಅವರ ಸೇವೆಗಾಗಿ ನನ್ನನ್ನು ಮುಡುಪಾಗಿಡು" ಎಂದು ಪ್ರಾರ್ಥಿಸುತ್ತಿದ್ದರೆಂದು ಡಾ. ಜಿ. ಗೋಪಾಲ್ ಹೇಳಿದ್ದಾರೆ. ಕಾಲದ ಮಹತ್ವಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ. ಒಂದು ದಿನ ಅಯ್ಯರ್‌ರವರು ಬಿ. ಪುಟ್ಟಯ್ಯನವರ ಮನೆಗೆ ಹೋಗಿದ್ದರು. ಆ ದಿನ ಅಯ್ಯರ್ ತೀರ ಅವಸರವಸರ ವಾಗಿ ಬಂದರು. ಪುಟ್ಟಯ್ಯನವರು ಒಳಗೆ ಸ್ನಾನ ಮಾಡುತ್ತಿದ್ದರಿಂದ ಅಲ್ಲಿಯೇ ರೂಮಿನಲ್ಲಿ ಓದುತ್ತಾ ಕುಳಿತ್ತಿದ್ದ ಅವರ ಮಗನ ಹತ್ತಿರ ಬಂದು "Tell your father to meet me at the lunati Assylum" ಎಂದು ಹೇಳಿ ಹೋದರಂತೆ.[೮] ಒಟ್ಟಾರೆ ಅಯ್ಯರ್‌ರವರು ಮೈಸೂರು ಸಂಸ್ಥಾನದಲ್ಲಿ

ಎಲ್ಲರಿಗೂ ಬೇಕಾದವರಾಗಿದ್ದರು. ದಿವಾನರಿಂದ ಹಿಡಿದು ಜವಾನನವರಗೆ ಎಲ್ಲರ ಮನೆಯಲ್ಲೂ ಅವರಿಗೆ ಸ್ವಾಗತವಿತ್ತು.[೯]

ಅಯ್ಯರ್ ಅವರು ಜಾತಿ ಪದ್ಧತಿ ರೂಢಿ ಸಂಪ್ರದಾಯ ಆಚಾರ ವಿಚಾರಗಳನ್ನು ವಿರೋಧಿಸುತ್ತಿದ್ದರು. ಬೆಂಗಳೂರಿನ ಬಸವನಗುಡಿ ಬಡಾವಣೆಯಲ್ಲಿರುವ ಗಣೇಶನು ಅಯ್ಯರ್‌ರವರ ಮನೆದೇವರಾಗಿದ್ದಿತು. ಹಾಗಾಗಿ ಈ ಗಣೇಶನ ದೇವಾಲಯಕ್ಕೆ ಅಗಾಗ್ಗೆ ಹೋಗುತ್ತಿದ್ದರಲ್ಲದೆ ನರಸಿಂಹರಾಜ ವಿದ್ಯಾರ್ಥಿನಿಲಯದ ಪಂಚಮ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗುತ್ತಿದ್ದರು. ಅರ್ಚಕರಿಂದ ಪೂಜೆ ಮಾಡಿಸಿ ಪ್ರಸಾದ ಕೊಡಿಸಿದ ನಂತರ ಅರ್ಚಕರಿಗೆ ಪರಿಚಯಿಸುತ್ತಾ "ಈ ಹುಡುಗರು ಹೊಲೆಯ ಮಾದಿಗರು ನಮ್ಮ ವಿದ್ಯಾರ್ಥಿನಿಲಯದಲ್ಲೇ ಓದುತ್ತಿದ್ದಾರೆ. ಮುಂದೆ ಇವರೆಲ್ಲಾ ದೊಡ್ಡ ದೊಡ್ಡ ಅಧಿಕಾರಿಗಳಾಗುತ್ತಾರೆ" ಎಂದಾಗ ಅರ್ಚಕರು ಬೆಚ್ಚಿಬಿದ್ದರು. ಈ ಘಟನೆಯ ೧೯೩೫ರಲ್ಲಿ ನಡೆಯಿತು.[೧೦] ಆದರೆ ಇನ್ನೂ ಅಸ್ಪೃಶ್ಯತಾ ನಿಷೇಧ ಕಾಯಿದೆ ಜಾರಿಗೆ ಬರುವುದಕ್ಕೆ ಮುನ್ನವೇ ಪಂಚಮರನ್ನು ತಿರಸ್ಕರದಿಂದ ಕಾಣುತ್ತಿದ್ದ ಕಾಲದಲ್ಲಿಯೇ ಅಯ್ಯರ್ ಈ ಕಾರ್ಯವನ್ನು ಯಶಸ್ವಿಗೊಳಸಿದ್ದಾರೆ ಎಂದರೆ ಇಲ್ಲಿ ಅವರ ಎದೆಗಾರಿಕೆ, ಧೈರ್ಯವನ್ನು ಮೆಚ್ಚುತ್ತಕ್ಕಂಥದ್ದು. ಅವರಲ್ಲಿದ್ದ ವೈಚಾರಿಕತೆ ಈ ಬಗೆಯ ಕಾರ್ಯಚಟುವಟಿಕೆ ಕೈಗೊಳ್ಳಲು ಸಾಧ್ಯವಾಯಿತ್ತೆನ್ನಬಹುದು. ಅಲ್ಲದೆ ಅಯ್ಯರ್ ಕಾರ್ಯಗಳಿಗೆ ನಾಲ್ವಡಿಯವರು ಸಂಪೂರ್ಣ ಸಹಕಾರ ಮತ್ತು ಸ್ಫೂರ್ತಿ ನೀಡುತ್ತಿದ್ದರಿಂದ ಇಂತಹ ಕಾರ್ಯಗಳನ್ನು ಯಾರು ಪ್ರಶ್ನೆ ಮಾಡುವಂತಹ ಸಾಹಸಕ್ಕೆ ಹೋಗುತ್ತಿರಲಿಲ್ಲ. ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಕಂಡುಬಂದಂತಹ ವಿಷಯವೆಂದರೆ 'ಗಾಂಧೀಜಿಗಿಂತಲೂ ಮೊದಲೇ ಅಯ್ಯರ್ ಅವರು 'ಹರಿಜನ' ಎಂಬ ಪದವನ್ನು ಬಳಸಿದ್ದರು' ಎಂದು ಅವರ ತಮ್ಮನ ಮಗಳಾದ ಮುತ್ತುಲಕ್ಷ್ಮೀಯವರು ತಿಳಿಸಿರುತ್ತಾರೆ. ಆದರೆ ಈ ಪದವನ್ನು ಯಾರು ಮೊದಲು ಬಳಸಿದರು ಎಂಬುದು ಚರ್ಚೆಯ ವಿಷಯ.

ಐದು ಅಡಿ ಮೂರು ಅಂಗಲ ಎತ್ತರವಿದ್ದ ಅಯ್ಯರ್‌ರವರ ದಿನಚರಿ ಎಂದರೆ ಬೆಳಗ್ಗೆ ಐದು ಗಂಟೆಗೆ ಎದ್ದು ಎಂಟು ಗಂಟೆಯವರೆಗೆ ಅಧ್ಯಯನ ಮಾಡುತ್ತಿದ್ದರು. ಎಂಟರಿಂದ ಹತ್ತು ಗಂಟೆಯವರೆಗೆ ವಿದ್ಯಾರ್ಥಿನಿಲಯಗಳಿಗೆ ಗ್ರಂಥಾಲಯಗಳಿಗೆ ಭೇಟಿನೀಡುತ್ತಿದ್ದರು. ನಂತರ ಒಂದು ಗಂಟೆಯವರೆಗೆ ಮಿತ್ರರನ್ನು ಭೇಟಿಮಾಡಿ ಬರುತ್ತಿದ್ದರು. ನಂತರ ಸಂಜೆ ಐದು ಗಂಟೆಯವರೆಗೆ ಕಛೇರಿಗಳಲ್ಲಿ ಪಂಚಮ ಜನಾಂಗದ ಬಗೆಗಿನ ಕಾಗದ ಪತ್ರಗಳ ತಪಾಸಣೆ ವಿಲೇವಾರಿ ವಿದ್ಯಾರ್ಥಿಗಳಿಗೆ ಶಿಷ್ಯಾವೇತನ ಕೊಡಿಸುವುದು ಕೆಲಸವಿಲ್ಲದವರಿಗೆ ಕಾರ್ಖಾನೆಗಳಲ್ಲಿ ಸರ್ಕಾರಿ ಖಾಸಗಿ ಕಛೇರಿಗಳಲ್ಲಿ ನೌಕರಿ ಕೊಡಿಸುವುದು. ರಾತ್ರಿ ಒಂಬತ್ತರಿಂದ ಹನ್ನೊಂದು ಗಂಟೆಯವರೆಗೆ ಊಟ ಅಧ್ಯಯನ ಮತ್ತು ದಿನಚರಿ ಬರೆಯುತ್ತಿದ್ದರು. ಪ್ರತಿಶುಕ್ರವಾರ ತಮ್ಮ ಮನೆ ದೇವರಾದ ಗಣೇಶನ ದೇವಾಲಯಕ್ಕೆ ಹೋಗಿ ದೇವರ ದರ್ಶನ ಮಾಡುತ್ತಿದ್ದರು. ಅಯ್ಯರ್ ಒಂದು ದಿವೂ ತಲೆನೋವು ಜ್ವರ ಕಂಡವರಲ್ಲ. ಒಟ್ಟಿನಲ್ಲಿ ಗಟ್ಟಿಮುಟ್ಟಾದ ದೇಹ ಎಂದು ಹೇಳಬಹುದು. ಇವರು ಯಾವ ವಿಸಿಟಿಂಗ್ ಕಾರ್ಡ್ ಇಲ್ಲದೆ ಆಯಾ ದಿನದ ಎಲ್ಲಾ ಕೆಲಸ ಕಾರ್ಯಗಳನ್ನು ಕ್ರಮಬದ್ಧವಾಗಿ ಸಕಾಲಕ್ಕೆ ನಡೆಸುತ್ತಿದ್ದರು. ಯಾವುದೇ ಒಂದು ಸಭೆ ಸಮಾರಂಭಕ್ಕೆ ಬರುತ್ತೇನೆಂದು ಹೇಳಿದರೆ ನಿಗದಿತ ದಿನ ಮತ್ತು ಸಮಯಕ್ಕೆ

ತಪ್ಪದೆ ಹಾಜರಾಗುತ್ತಿದ್ದರು. ಇದಕ್ಕಾಗಿಯೇ ಒಂದು ಪ್ರತ್ಯೇಕ ದಿನಚರಿ ಪುಸ್ತಕದಲ್ಲಿ ಬರೆದಿಡುತ್ತಿರಲಿಲ್ಲ. ಎಲ್ಲವನ್ನು ತಮ್ಮ ಮನಸ್ಸಿನಲ್ಲಿಯೇ ಇಟ್ಟುಕೊಳ್ಳುತ್ತಿದ್ದರು. "ಅವರು ನೋಡಲು ಸುಂದರರಾಗೇನು ಇರಲಿಲ್ಲ. ಅವರದು ಯಾವಾಗಲೂ ಸಿಡುಕು ಮೊರೆ ಅವರು ನಕ್ಕುದನ್ನು ನಾನು ನೋಡಿದ ನೆನಪಿಲ್ಲ."[೧೧] "ಹೀಗಿದ್ದರೂ ಸಹ ಅವರು ಹೆಚ್ಚಿನ ನೆನಪಿನಶಕ್ತಿವುಳ್ಳವರಾಗಿದ್ದರು. ಈ ಎಲ್ಲಾ ದಿನನಿತ್ಯದ ಕಾರ್ಯಗಳು ಸೈಕಲ್ ಮೇಲೆ ನಡೆಯುತ್ತಿದ್ದವು. ಶುದ್ಧ ಸಸ್ಯಹಾರಿಗಳಾಗಿದ್ದ ಇವರಿಗೆ ಯಾವುದೇ ಬೇರೆ ಕೆಟ್ಟ ಚಟಗಳಿರಲಿಲ್ಲ. ಬಿಸಿಬಿಸಿ ಕಾಫೀ ದಿನಕ್ಕೆ ಎರಡು ಬಾರಿ ಬೇಕೆ ಬೇಕಾಗಿತ್ತು ಎಂದು ಕ್ಷೇತ್ರಕಾರ್ಯ ಕೈಗೊಂಡ ವೇಳೆಯಲ್ಲಿ ತಿಳಿದುಕೊಳ್ಳಲಾಯಿತು. ಹಾಗೂ ಇದೇ ವಿಚಾರವನ್ನು ಡಾ. ಜಿ. ಗೋಪಾಲ ಅವರು ತಮ್ಮ ಕೃತಿಯಲ್ಲಿ ಹೇಳಿದ್ದಾರೆ.

**ರೋಗಿಗಳ ಅಯ್ಯರ್**

ಅಯ್ಯರ್‌ರವರು ಮಾಡಿದ ಮತ್ತೊಂದು ಶ್ಲಾಘನೀಯ ಕೆಲಸವೆಂದರೆ ಹುಚ್ಚರ ಆಸ್ಪತ್ರೆ ಕುಷ್ಠವಿರೋಗಿಗಳ ಆಸ್ಪತ್ರೆಯ ಸದಸ್ಯರಾಗಿ ೧೯೨೨ರಿಂದ ೧೯೩೮ರವರೆಗೆ ಸೇವೆ ಸಲ್ಲಿಸಿದರು. ಅವರು "Iam for bad, for the mad and for the sad" ಎನ್ನುತ್ತಿದ್ದರೆಂದು ಆದರೆ ಇತರ ಕೆಲಸಗಳಿಗಿಂತ ಅಸ್ಪೃಶ್ಯರ ಬಗ್ಗೆ ಅವರ ಕಾಯಕ ಕೇಂದ್ರಿಕೃತವಾಗಿತ್ತೆಂದು ವೈ.ಸಿ. ಹೊಂಬಾಳಯ್ಯ ಹೇಳುತ್ತಾರೆ.[೧೨] ಆಸ್ಪತ್ರೆಗಳಿಗೆ ವಿಸಿಟಿಂಗ್ ಸದಸ್ಯರಾಗಿ ಸೇವೆ ಸಲ್ಲಿಸಿ ೧೯೨೫ರಲ್ಲಿ "ರೋಗಿಗಳಿಗೆ ಹೆಚ್ಚಿನ ಸೌಕರ್ಯಗಳನ್ನು ಒದಗಿಸಬೇಕು. ರೋಗದಿಂದ ಗುಣಮುಖರಾಗಿ ಊರಿಗೆ ಹಿಂದಿರುಗಿ ಹೋಗುವಾಗ ಪ್ರಯಾಣದ ಖರ್ಚಿಗಾಗಿ ಹಣ ಒದಗಿಸಬೇಕು ಎಂದು ಸರ್ಕಾರಕ್ಕೆ ಸಲಹೆ ಮಾಡಿದರು".

**ಖೈದಿಗಳ ಅಯ್ಯರ್**

ಅಯ್ಯರ್‌ರವರು ರೆವೆರೆಂಡ್ ಎ.ಆರ್. ಫುಲ್ಲರ್‌ರವರ ಜೊತೆಗೂಡಿ ಬೆಂಗಳೂರಿನ ಕೇಂದ್ರ ಕಾರಾಗೃಹ ಸದಸ್ಯರಾಗಿ ೧೯೨೫ರಲ್ಲಿ ಅಪರಾಧಿಗಳಿಗೆ ಉಡುಪು ಹಾಸಿಗೆ ಊಟ ನೀರು ಸರಬರಾಜು ಮುಂತಾದ ಸುಧಾರಣೆಗಳ ಬಗ್ಗೆ ಶ್ರಮಿಸಿದರು. ಅಯ್ಯರ್ ಮತ್ತು ಜೆ.ಎಸ್. ಕಾಕ್ಸ್ ಬಿ. ಆಸ್ಮಾನ್‌ರವರ ಸಲಹೆ ಮೇರೆಗೆ ಸರ್ಕಾರ ದಿನಾಂಕ ೦೫.೦೮.೧೯೨೬ರಲ್ಲಿ ಹೆಚ್ಚು ಕೆಲಸ ಮಾಡಿದ ಖೈದಿಗಳಿಗೆ ಹೆಚ್ಚು ಹಣ ಕೊಡಲು ಹುಕ್ಕುಂ ಹೊರಡಿಸಿತು. ಜೈಲು ಸುಧಾರಣಾ ಸಮಿತಿಯ ಸದಸ್ಯರಾಗಿದ್ದ ಅಯ್ಯರ್‌ರವರು "ಮದ್ರಾಸ್ ಪ್ರಾಂತ್ಯದಲ್ಲಿ ಜೈಲುಗಳಿಂದ ಬಿಡುಗಡೆಯಾದ ಖೈದಿಗಳನ್ನು ಸರ್ಕಾರದ ಕೆಲಸಕ್ಕೆ ನೇಮಿಸಿಕೊಳ್ಳುವ ಅವಕಾಶವಿದೆ. ಅದರಂತೆ ಮೈಸೂರು ಸಂಸ್ಥಾನದಲ್ಲಿ ಕಾನೂನು ಆಗಬೇಕು" ಎಂಬ ಅಗತ್ಯತೆಯನ್ನು ತಿಳಿಸಿದ್ದರು.[೧೩]

ಒಟ್ಟಾರೆ ಇವರ ಪ್ರಯತ್ನದಿಂದಲೇ ಹುಚ್ಚರ ಆಸ್ಪತ್ರೆಯ ಹೊಸ ಕಟ್ಟಡ ಕುಷ್ಠರೋಗಿಗಳ ಆಸ್ಪತ್ರೆಯ ಬಡಾವಣೆ ನಿರ್ಮಾಣವಾಯಿತು. ಅಲ್ಲದೆ ರಾಜ್ಯದ ಖೈದಿಗಳ ಹುಚ್ಚರ ಕುಷವಿರೋಗಿಗಳ ವಿಳಾಸಗಳು ಅಯ್ಯರ್‌ರವರಲ್ಲಿ ದೊರಕುತ್ತಿದ್ದವು. ಸಾರ್ವಜನಿಕ ಗ್ರಂಥಾಲಯ ವೈ.ಎಂ.ಸಿ.ಎ. (Y.M.C.A.) ಬೌರಿಂಗ್ ಸಂಸ್ಥೆ ಥಿಯೋಸಾಫಿಕಲ್ ಸೊಸೈಟಿ ಮೊದಲಾದ ಸಂಸ್ಥೆಗಳ ಸದಸ್ಯರಾಗಿದ್ದ ಇವರು ಗ್ರಂಥಾಲಯಕ್ಕೆ ಯಾವುದೇ ಹೊಸ ಪುಸ್ತಕ ಬಂದರೆ ಅದನ್ನು ಮೊದಲು ತೆಗೆದುಕೊಂಡು ಓದುತ್ತಿದ್ದರು. ಸಮಾಜ

ಸುಧಾರಣೆ ಮಾನವನ ಉಗಮಶಾಸ್ತ್ರ ಸೈಕೋ ಅನಾಲಿಸಿಸ್ ಅಪರಾಧಶಾಸ್ತ್ರ ಜೈಲಿನ ಸುಧಾರಣೆ ವ್ಯಾಗಬಾಂಡ್ ಹ್ಯೂಮನ್ ಬ್ರೈನ್ ನೀಗ್ರೋ ಪ್ರಾಬ್ಲಮ್ಸ್ ಭಾರತೀಯ ಜಾತಿ ಮತ್ತು ಬುಡಕಟ್ಟು ಆಧುನಿಕ ವೈದ್ಯಕೀಯ ನಿಯತಕಾಲಿಕೆಗಳು ಮೊದಲಾದವುಗಳ ಬಗ್ಗೆ ಅಧ್ಯಯನ ಮಾಡುತ್ತಿದ್ದರು. ಸಮಾಜ ಸುಧಾರಣೆಯ ಬಗೆಗಿನ ಮುಖ್ಯ ವಿಷಯಗಳನ್ನು ಟಿಪ್ಪಣಿ ಮಾಡುತ್ತಿದ್ದರು. ಯಾವುದೇ ಕ್ಲಿಷ್ಟ ಸಮಸ್ಯೆಯನ್ನಾಗಲಿ ಆಧಾರಸಹಿತವಾಗಿ ತಮ್ಮ ಮಾತಿನಲ್ಲಿ ಧೃಡೀಕರಿಸುತ್ತಿದ್ದರು. ಅಯ್ಯರ್‌ರವರು ಸಮಾಜ ಸುಧಾರಕರ ಬಗ್ಗೆ ಕುರಿತು ಅಗಾಗ್ಗೆ ಹೇಳುತ್ತಿದ್ದ ಒಂದು ಮಾತೆಂದರೆ "A Social worker should know something of everything. Social worker should speak with facts and figures."[೧೪]

ಅಯ್ಯರ್ ಇಷ್ಟೇಲ್ಲಾ ಕಾರ್ಯಗಳ ನಡುವೆಯೂ ಹಳ್ಳಿಗಳಲ್ಲಿ ಸವರ್ಣೀಯರು ಮತ್ತು ಪಂಚಮರ ನಡುವೆ ಸಂಘರ್ಷಗಳಾದರೆ ಸಂಬಂಧಪಟ್ಟ ಅಧಿಕಾರಿಗಳ ಜೊತೆ ಹಳ್ಳಿಗೆ ಹೋಗಿ ಅಲ್ಲಿನ ಮುಖಂಡರುಗಳೊಂದಿಗೆ ಚರ್ಚಿಸಿ ನ್ಯಾಯ ತೀರ್ಮಾನ ಮಾಡುತ್ತಿದ್ದರು. ಗ್ರಾಮದಲ್ಲಿನ ಗಲಭೆಗಳನ್ನು ಇವರು ತಮ್ಮ ನಿಷ್ಪಕ್ಷಪಾತವಾದ ನ್ಯಾಯದ ಮೂಲಕ ನಿಯಂತ್ರಸುತ್ತಿದ್ದರು. ಅಲ್ಲದೆ ಸವರ್ಣೀಯರ ಮನವಲಿಸುತ್ತಿದ್ದರು.

**೭೦ನೇ ವರ್ಷದ ಜಯಂತಿ**

ಹೀಗೆ ಮೈಸೂರು ಒಡೆಯರ ಆಳ್ವಿಕೆಯ ಕಾಲದಲ್ಲಿ ಸರ್ವ ಪ್ರಜಾಪರಿಪಾಲನೆಯಲ್ಲಿನ ಮುಕುಟ ಮಣಿಯಾಗಿ ರಾರಾಜಿಸಿದ ಅಯ್ಯರ್‌ರವರಿಗೆ ತಾರಿಖು ೩೧.೧೦.೧೯೩೮ರಲ್ಲಿ ಮೈಸೂರು ಆಧಿಕರ್ನಾಟಕ ಅಭಿವೃದ್ಧಿ ಸಂಘ ಮತ್ತು ಬೆಂಗಳೂರಿನ ಹರಿಜನ ಬಂಧುಗಳು ಮೈಸೂರು ರಂಗಚಾರ್ಲು ಪುರಭವನದಲ್ಲಿ ಒಂದು ಸಮಾರಂಭವೇರ್ಪಡಿಸಿ ಅಯ್ಯರ್‌ರವರ ೭೦ನೇ ವರ್ಷದ ಜಯಂತೋತ್ಸವವನ್ನು ಆಚರಿಸಿದರು. ಈ ಸಭೆಯಲ್ಲಿ ರಾಜಕಾರ್ಯ ಪ್ರಮೀಣ ಶ್ರೀ ಎಸ್.ಎಸ್. ಸುಬ್ಬರಾಯರು ಅಗ್ರಾಸ್ಥಾನವನ್ನು ವಹಿಸಿ ಮೂರು ದಶಕಗಳಿಂದ ಅಯ್ಯರ್‌ರವರು ಪಂಚಮರಿಗಾಗಿ ಮಾಡುತ್ತಿರುವ ನಿಸ್ವಾರ್ಥ ಸೇವೆಯನ್ನು ಪ್ರಶಂಸಿದರು. ಇದಕ್ಕಾಗಿ ಅಯ್ಯರ್‌ರವರು ತಮ್ಮ ಕೃತಜ್ಞತೆಯನ್ನು ಸೂಚಿಸಿದರು. ಈ ದಿನದ ನೆನಪಿಗಾಗಿ ಆ॥ವಿ॥ಬಿ. ದೇವೇಂದ್ರಪ್ಪನವರಿಂದ ಸಂಗೀತ ಕಾರ್ಯಕ್ರಮವನ್ನು ನಡೆಸಿಕೊಡ ಲಾಯಿತು.[೧೫]

**೭೫ನೇ ವರ್ಷದ ಜಯಂತಿ**

ಇಂತಹದೆ ಮತ್ತೊಂದು ಸಮಾರಂಭವನ್ನು ಮೈಸೂರು ಸಂಸ್ಥಾನದ ಆದಿಕರ್ನಾಟಕ ಅಭಿವೃದ್ಧಿ ಸಂಘದವರು ತಾರೀಖು ೨೨.೦೭.೧೯೪೨ರಲ್ಲಿ ತಮ್ಮ ಸರ್ವತೋಮುಖ ಉದ್ಧಾರಕನಿಗೆ ೭೫ನೇ ಜಯಂತೋತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ಮೈಸೂರಿನ ರಂಗಚಾರ್ಲು ಭವನದಲ್ಲಿ ಆಚರಿಸಿದರು. ಸಂಸ್ಥಾನದ ಇಡೀ ಒಂಬತ್ತು ಜಿಲ್ಲೆಗಳಿಂದಲೂ ಆದಿಕರ್ನಾಟಕ ಜನಾಂಗದವರು ಸಾವಿರಾರು ಸಂಖ್ಯೆಯಲ್ಲಿ ತಂಡೋಪತಂಡವಾಗಿ ಕಾಲ್ನಡಿಗೆಯಲ್ಲಿ ಸೈಕಲ್‌ಗಳಲ್ಲಿ ಬಂಡಿಗಳಲ್ಲಿ ರೈಲಿನಲ್ಲಿ ಪ್ರಯಾಣ ಮಾಡಿ ಬಂದು ಕಾರ್ಯಕ್ರಮದಲ್ಲಿ ಪಾಲ್ಗೊಂಡರು. ರಂಗಚಾರ್ಲು ಭವನ ತುಂಬಿ ಭವನದ ಮುಂದೆ ಇದ್ದ ಹುಲ್ಲಿನ ಮೈದಾನದಲ್ಲಿ ಪಂಚಮರು ತುಂಬಿದ್ದರು. ಈ ದೃಶ್ಯವನ್ನು ಕಣ್ಣಾರೆ ಕಂಡ ಶ್ರೀಯುತ

ಡಾ. ಜಿ. ಗೋಪಾಲ್‌ರವರು ಅತ್ಯಂತ ಬಿಗುಮಾನದಿಂದ ಹೆಮ್ಮೆಯಿಂದ ಪಂಚಮೋದ್ಧಾರಕನಿಗೆ ಭಕ್ತಿ ನಮ್ರತೆಯಿಂದ ಶುಭಾಶಯಗಳನ್ನು ಕೋರಿದರು ಎಂದು ಹೇಳಿದರು. ಈ ಸಮಾರಂಭದ ಅಧ್ಯಕ್ಷತೆಯನ್ನು ಅಂಬಳೆ ಅಣ್ಣಯ್ಯ ಪಂಡಿತರ ಮಕ್ಕಳಾದ ಅಂಬಳೆ ಸುಬ್ರಹ್ಮಣ್ಯಂ ಅಯ್ಯರ್‌ರವರು ವಹಿಸಿದ್ದರು. ಕೆ.ವಿ. ಅನಂತರಾಮನ್ ರಾವ್‌ಬಹದ್ದೂರ್ ರಾಮಸ್ವಾಮಿ ಕೆ. ಶೇಷಾದ್ರಿ ಮೊದಲಾದ ಪ್ರಮುಖ ಗಣ್ಯರು ಭಾಗವಹಿಸಿದ್ದರು. ಕೆ. ಶೇಷಾಸದ್ರಿಯವರು ಮಾತನಾಡಿ "ಪಂಚಮರ ಸರ್ವತೋ ಮುಖ ಬೆಳವಣಿಗೆಗೆ ಅದರಲ್ಲೂ ವಿದ್ಯಾಭಿವೃದ್ಧಿ ಕ್ಷೇತ್ರದಲ್ಲಿ ಮೂರು ದಶಕಗಳ ಕಾಲ ಆರ್. ಗೋಪಾಲ ಸ್ವಾಮಿಅಯ್ಯರ್‌ರವರು ಮಾಡಿದ ಸೇವಾಕಾರ್ಯವನ್ನು ಪ್ರಶಂಸಿಸಿದರು". ನೂರಾರು ಸಂಘಸಂಸ್ಥೆಗಳಿಂದ ಅಯ್ಯರ್‌ರವರಿಗೆ ಮಾಲಾರ್ಪಣೆ ಮಾಡಲಾಯಿತು. ಮೈಸೂರಿನ ಅಶೋಕಪುರಂನ ಜೆ. ಲಿಂಗಯ್ಯ ಮರಿದಂಡಯ್ಯ ರಾಮಕೃಷ್ಣಯ್ಯ ಆದಿಕರ್ನಾಟಕ ಅಭಿವೃದ್ಧಿ ಸಂಘದ ಕೊನೆಯ ಅಧ್ಯಕ್ಷರಾಗಿದ್ದ ಪಿ.ಜಿ.ಡಿ. ಸೌಜ ಅರ್. ಭರಣಯ್ಯ ಬಿ. ಬೊಮ್ಮಯ್ಯ ರಾಮನಿಂಗಯ್ಯ ಕೆ.ವಿ. ರಾಮಸ್ವಾಮಿ ಜಿ. ವೆಂಕಟಯ್ಯ ಬಿ. ರಾಚಯ್ಯ ಡಿ. ವೆಂಕಟ್ಯ ಡಿ. ನಂಜುಂಡಪ್ಪ ಎಂ. ಮಾದಯ್ಯ ಜಿ. ಲಿಂಗಯ್ಯ... ಅನೇಕಾನೇಕ ಶಿಷ್ಯವೃಂದದಿಂದ ಸಭಾಂಗಣ ಕಿಕ್ಕಿರಿದಿತ್ತು. ಅಯ್ಯರ್‌ರವರು ಮಾತನಾಡಿ ಸವರ್ಣೀಯರಿಗೆ ಉತ್ತರಕೊಡುತ್ತಾ "ನನ್ನನ್ನು ಪಂಚಮರ ಗೋಪಾಲಸ್ವಾಮಿ ಅಂತ ಸವರ್ಣೀಯರು ಕರೆಯುತ್ತೀರಿ ಆ ನಾಮಾಂಕಿತ ಶೇಕಡ ನೂರಷ್ಟು ಅನ್ವರ್ಥ. ನನಗೆ ಮಕ್ಕಳಿಲ್ಲ ಎಂದು ಬುದ್ಧಿಯಿಲ್ಲದ ಜನರು ಹೇಳುತ್ತಾರೆ. ಆದರೆ ನನಗೆ ಹದಿನಾಲ್ಕು ಸಾವಿರ ಮಕ್ಕಳಿದ್ದಾರೆ. ಅವರೇ ನನ್ನ ಅಸ್ಪೃಶ್ಯ ಜನಾಂಗ" ಎಂದು ಹೇಳಿದಾಗ ಇಡೀ ಸಭಾಂಗಣವೇ ಹರ್ಷೋದ್ಗಾರ ಮಾಡಿ, ಅನೇಕ ಮಂದಿ ಸಂತೋಷದಿಂದ ಕಣ್ಣೀರು ಹಾಕಿದರು. ಇಂತಹ ಮಾನವತಾವಾದಿ ಅಯ್ಯರ್‌ರವರನ್ನು ನೆರದಿದ್ದ ಜನಸ್ತೋಮವು ತನುಮನವನ್ನರ್ಪಿಸಿ ಹೃದಯಾಂತಾರಳದಿಂದ ಕೊಂಡಾಡಿತು".[೯೩]

ಮೈಸೂರು ಅರಸರ ಜೊತೆ ನಿಕಟ ಸಂಬಂಧ ಕಾಪಾಡಿಕೊಂಡು ಬಂದ ಇವರು ಮುತ್ಸದ್ಧಿ ಹಾಗೂ ಸಾತ್ವಿಕತೆಯ ಒಬ್ಬ ಪ್ರತಿಭಾವಂತ ಸಮಾಜ ಸುಧಾರಕರಾಗಿದ್ದರು ಎಂದರೆ ತಪ್ಪಾಗಲಾರದು. ಪಂಚಮರಿಗಾಗಿಯೇ ಹುಟ್ಟಿದ ಅವಧೂತನಂತೆ ಮೈಸೂರು ಸಂಸ್ಥಾನದ ಜನಮನದಲ್ಲಿ ಗುರುತಿಸಿ ಕೊಂಡಿದ್ದಾರೆ. ಇದು ಅವರ ಮಹಾನ್ ಮಾನವತಾವಾದ ನಿದರ್ಶನವಾಗಿದೆ.

**ಅಂತಿಮ ದಿನಗಳು**

ಪುಣೆಯಲ್ಲಿ ಕಾನೂನು ಶಿಕ್ಷಣ ಮುಗಿಸಿ ಪದವೀದರರಾಗಿ ಬಂದ ಅಯ್ಯರ್ ೧೯೪೨ರ ಕೊನೆಯ ವೇಳೆಗೆ ಅನಾರೋಗ್ಯದಿಂದ ಹಾಸಿಗೆ ಹಿಡಿದರು. ಈ ಸಂದರ್ಭದಲ್ಲಿ ತಮ್ಮನ್ನು ಗೆಜೆಟೆಡ್ ಹುದ್ದೆಗೆ ನೇಮಿಸಬೇಕೆಂದು ದಿವಾನರಿಗೆ ಅಯ್ಯರ್‌ರವರು ಪತ್ರ ಬರೆದಿದ್ದರೆಂದು ಹೊಂಬಾಳಯ್ಯ ತಿಳಿಸಿದ್ದಾರೆ.[೯೪] ಅಲ್ಲದೆ ಅಸ್ಪೃಶ್ಯರಿಗೆ ಸವಲತ್ತು ನೀಡುವ ಬಗೆಗಿನ ಎಲ್ಲಾ ಸರ್ಕಾರಿ ಕಾನೂನು ನಿಯಮ ಆಜ್ಞೆಗಳ ಒಂದು ಸಂಗ್ರಹವೇ ಸದಾಕಾಲ ಅವರಲಿದ್ದು ಕಾಲಕಾಲಕ್ಕೆ ತಾವು ಬೇಟಿಮಾಡುತ್ತಿದ್ದ ಅಧಿಕಾರಿಗಳ ಗಮನಕ್ಕೆ ಅವರು ತರುತ್ತಿದ್ದರು.[೯೫] ಹೀಗಿರಬೇಕಾದರೆ ಅಗಾಗ್ಗೆ ಅತಿ ಆಯಾಸಕ್ಕೊಳಗಾಗುತ್ತಿದ್ದ ಅಯ್ಯರ್ ಸಂಜೆಯ ವೇಳೆಗೆ ಜ್ವರ ಕೆಮ್ಮುನಿಂದ ಬಳಲುತ್ತಿದ್ದರು. ಇದರಿಂದಾಗಿ ಅವರ ಆಹಾರ ಸೇವನೆಯಲ್ಲಿ ಎಂದಿನಂತೆ ಲವಲವಿಕೆಯಿಲ್ಲದಂತಾಗಿ ಆರೋಗ್ಯ ಕ್ಷೀಣಿಸತೊಡಗಿತು. ಇದರಿಂದ ಆಘಾತಕ್ಕೊಳಗಾದ

ಶಿಷ್ಯಾವೃಂದ ವೈದ್ಯರಲ್ಲಿಗೆ ಹೋಗೋಣ ಸಾರ್ ಎಂದರೆ 'ನನಗೇನಾಗಿದೆ ಅಂತೀದ್ದಿರ್ರಯ್ಯ ಎಲ್ಲಾ ಸರಿಹೋಗುತ್ತದೆ' ಎಂದು ಹೇಳುತ್ತಿದ್ದರು ಎಂದು ಡಾ. ಜಿ. ಗೋಪಾಲ್‌ರವರು ತಿಳಿಸಿದರು. ಹಾಸಿಗೆ ಹಿಡಿದ ಅಯ್ಯರ್‌ರವರನ್ನು ವಿಕ್ಟೋರಿಯಾ ಆಸ್ಪತ್ರೆಗೆ ದಾಖಲು ಮಾಡಲಾಗಿ ಅವರಿಗೆ 'ಪ್ಲೊರೆಸಿ' ಖಾಯಿಲೆ ಇದೆ ಎಂದು ತಿಳಿದು ಬಹಳ ಮುತುವರ್ಜಿತನದಿಂದ ಔಷದೋಪಾಚಾರ ನೀಡಲಾಯಿತು. ಶಿಷ್ಯವೃಂದ ಅವರಿಗೆ ಕಾಲಿಂಡುವುದು ಸ್ನಾನ ಮಾಡಿಸುವುದು ಔಷಧ ಕುಡಿಸುವುದರಿಂದ ಹಿಡಿದು ಎಲ್ಲಾ ಸೇವೆಯಲ್ಲೂ ನಿರತರಾಗಿದ್ದರು. ಹೀಗಿದ್ದರೂ ಸಹ ಆಸ್ಪತ್ರೆಯಲ್ಲಿ ಇದ್ದುಕೊಂಡೇ ತಮ್ಮ ಶಿಷ್ಯರಿಗೆ ಸರ್ಕಾರಿ ಹುದ್ದೆಗಳಿಗೆ ಸೇರಲು ಶಿಫಾರಸ್ಸು ಮಾಡುತ್ತಿದ್ದರು. ಹಾಗೆ ಶಿಫಾರಸ್ಸು ಪಡೆದು ಸಹಾಯಕ ಆಯಕ್ತ ಹುದ್ದೆ ಪಡೆದವರೇ ವೈ.ಸಿ. ಹೊಂಬಾಳಯ್ಯ. ತಮ್ಮ ಜೀವಿತದ ಕೊನೆಯ ವೇಳೆಯಲ್ಲೂ ತನ್ನ ಮಕ್ಕಳ (ಪಂಚಮ) ಜನಾಂಗದ ಸೇವೆ ಮಾಡಿದ್ದಾರೆ ಎಂದರೆ ಅವರಿಗೆ ಪಂಚಮರ ಮೇಲಿದ್ದ ಅಭಿಮಾನ ಮತ್ತು ಕಾಳಜಿ ಎಂಥದ್ದು ಎಂಬುದು ಸ್ಪಷ್ಟವಾಗುತ್ತದೆ.

ಮೂರು ದಶಕಗಳ ಕಾಲ ಪಂಚಮರ ಸರ್ವತೋಮುಖ ಅಭಿವೃದ್ಧಿಗೆ ತಮ್ಮ ಜೀವನವನ್ನೆ ಮುಡುಪಾಗಿಟ್ಟ ಅಯ್ಯರ್ ಸಾಮಾಜಿಕ ಆರ್ಥಿಕ ಸಾಂಸ್ಕೃತಿಕವಾಗಿ ಅದರಲ್ಲಿಯೂ ಶೈಕ್ಷಣಿಕ ಕ್ಷೇತ್ರದಲ್ಲಿ ಹೊಸ ಬದಲಾವಣೆಗೆ ನಾಂದಿ ಹಾಡಿ ಪಂಚಮರಿಗೆ ಹೊಸ ಬದುಕನ್ನು ಕಲ್ಪಿಸಿಕೊಟ್ಟು ಸಮಾಜದ ಮುಖ್ಯವಾಹಿನಿಗೆ ಕರೆತಂದರು. ಮೈಸೂರು ಸಂಸ್ಥಾನದಲ್ಲಿ ಪಂಚಮರ ಬಾಳಿನ ಜ್ಯೋತಿಯಂತೆ ಬೆಳಗಿದ ಮಹಾನ್ ಮಾನವತಾವಾದಿ ಮತ್ತು ಸಮಾಜ ಸುಧಾರಕ ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ ೧೯೪೩ ಮಾರ್ಚ್ ೧೯ರಂದು ಬಾಳ ಪರದೆಯ ಹಿಂದೆ ಸರಿದು ಅಮರರಾದರು. ಹಾಗಾಗಿ ಮಾರ್ಚ್ ೧೯ ಪಂಚಮರ ಬಾಳಿನ ಕರಾಳ ದಿನ ಎಂದು ಹೇಳಬಹುದು.

ಮರಣದ ವಾರ್ತೆ ಸಂಸ್ಥಾನದಲ್ಲಿ ಮಿಂಚಿನಂತೆ ಹರಡಿ ಅಗಲಿದ ತಮ್ಮ ನಾಯಕನ ಅಥವಾ ದೇವರ ಅಂತಿಮ ದರ್ಶನಕ್ಕೆ ಎಲ್ಲಾ ಪಂಚಮ ವಸತಿಶಾಲೆಯ ವಿದ್ಯಾರ್ಥಿಗಳು ಅನುದಾನಿತ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳು ಅಸ್ಪೃಶ್ಯ ಜನಾಂಗದ ಸಂಘ ಸಂಸ್ಥೆಗಳ ಕಾರ್ಯಕರ್ತರು ದೀನ ಸೇವಾ ಸಂಘ ಹರಿಜನ ಸಹಕಾರ ಸಂಸ್ಥೆಗಳಿಂದ, ಕಾಲೇಜು ಕಛೇರಿಗಳಿಂದ ಸಹಸ್ರಾರು ಪಂಚಮರು ಎಲಿಫೆಂಟ್ ಲಾಡ್ಜ್ (ಆನೆಮನೆ) ಮುಂದೆ ಸೇರಿದರು. ಶರಣರ ಸಾವನ್ನು ಮರಣದಲ್ಲಿ ಕಾಣ್ಬು ಎಂಬ ಮಾತಿನಂತೆ ಆಗಲಿದ ಪಂಚಮ ದೇವರಿಗೆ ಶ್ರದ್ಧಾಂಜಲಿ ಸಲ್ಲಿಸಲು ಇಡೀ ಶಿಷ್ಯವೃಂದವೇ ಸಮರೋಪಾದಿಯಲ್ಲಿ ಬಂದು ಸೇರಿತು. ಆ ದಿನ ರಾತ್ರಿ ಬ್ರಾಹ್ಮಣ ಪದ್ಧತಿಯಂತೆ ಹೊರ ಹಾಕಿದ ಶವದ ಮುಂದೆ ಕುಳಿತು ಡಿ. ಗೋವಿಂದದಾಸರು ರಚಿಸಿದ ನಿಧನ ಗೀತೆಯಾದ

ಹರಿಜನ ಗುರುವರ ಹಾರಿದೆಯಾ, ಹರಿಪಾದವ ನೀ ಸೇರಿದೆಯಾ
ಮರೆಮಾಚುತೆ ಕಣ್ಮೆರೆಯಾದೆಯಾ,
ನೆರಶೋಕಗೈವ ಪರಿ ಮಾಡಿದೆಯಾ
ಇನ್ನಾರೆಮ್ಮನು ಕರೆಯುವರು
ಬನ್ನಿರಿಲ್ಲೆಂದೊರಲುವರು ॥ಪ॥

ಎಂಬ ಭಜನೆಯನ್ನು ಹಾರ್ಮೋನಿಯಂ ತಬಲ ತಾಳ ಸಮೇತ ಹಾಡಿ ಗೋಳಿಟ್ಟರು.

ಹೊರ ಹಾಕಿದ ಶವವನ್ನು ಯಾರು ಶವ ಸಂಸ್ಕಾರ ಮಾಡಬೇಕೆಂಬ ಪ್ರಶ್ನೆ ಉದ್ಭವಿಸಿತು. ರಕ್ತ ಹಂಚಿಕೊಂಡು ಹುಟ್ಟಿದ ತಮ್ಮಂದಿರು ತಮ್ಮ ಸಂಬಂಧವನ್ನು ಕಳಚಿ ಮನೆಯೊಳಗೆ ಸೇರಿ ಬಾಗಿಲು ಹಾಕಿಕೊಂಡರು. ಬ್ರಾಹ್ಮಣರ ಸಂಪ್ರದಾಯದಂತೆ ಹೆಣಕ್ಕೆ ಯಾವ ಗೌರವ ಸಲ್ಲುವುದಿಲ್ಲ. ಅದು ಈ ಜನರಿಗೆ ನಿಕೃಷ್ಟವಾದುದ್ದು ಎಂಬ ಭಾವನೆ ಇಂದಿಗೂ ಮುಂದುವರೆದುಕೊಂಡು ಬಂದಿದೆ. ಜೀವಿತದ ಕೊನೆಯವರೆಗೂ ಅನ್ಯೂನ್ಯವಾಗಿದ್ದವರು ವ್ಯಕ್ತಿ ಸತ್ತ ಕ್ಷಣವೇ ನಿಕೃಷ್ಟವಾಗುವುದಾದರು ಹೇಗೆಲ ಬದುಕಿದಷ್ಟು ದಿನವೂ ಸ್ನಾನ ಮಡಿ ಪೂಜೆ ಮಂತ್ರ ಪಠಣೆಯಲ್ಲಿ ಕಾಲಕಳಯುವ ಈ ಜನಾಂಗ ವ್ಯಕ್ತಿ ಸತ್ತ ಕ್ಷಣದಲ್ಲಿ ಹುಲ್ಲುಕಡಿಗೆ ಸಮಾನವಾಗಿ ಕಂಡು ನಾಲ್ಕು ಜನ ಚಟ್ಟದ ಮೇಲಿಟ್ಟ ದೇಹವನ್ನು ಸುಡುತ್ತಾರೆ. ಹೆಣ ಸುಟ್ಟ ನಂತರ ಒಂಬತ್ತನೇ ದಿನದಲ್ಲಿ ಹಾಲುತುಪ್ಪ ಬಿಡುವುದು ತಿಂಗಳ ತಿಥಿ ವರ್ಷ ತಿಥಿ ಗೋವುದಾನ ಇತ್ಯಾದಿಗಳನ್ನು ಮಾಡುವ ಬ್ರಾಹ್ಮಣ ಧರ್ಮ ಭಾರತದಲ್ಲಿ ಶ್ರೇಷ್ಠ ಧರ್ಮವಾದದ್ದರೂ ಹೇಗೆಂಬುದು ಪ್ರಶ್ನೆಯಾಗಿಯೇ ಉಳಿದಿದೆ.

ಕೊನೆಗೆ ಪಂಚಮರ ಪದ್ಧತಿಯಂತೆ ಶವಸಂಸ್ಕಾರ ನೆಡೆಸಬೇಕು ಎಂದು ತೀರ್ಮಾನಿಸಿ ಅದರಂತೆ ಸ್ನಾನ ಪೂಜೆಯಾದ ನಂತರ ನಗಾರಿ ತಮಟೆ ಭಜನೆ ವಾದ್ಯಗಳ ಸಮೇತ ಮೆರವಣಿಗೆಯ ಮೂಲಕ ರುದ್ರಭೂಮಿ ತಲುಪವರೆಗೂ ದಾರಿಯುದ್ದಕ್ಕೂ ತಮ್ಮ ಗುರುವರ್ಯನ ಆರಿದ ನಂದಾದೀಪ ವನ್ನು ನಾಮುಂದು ತಾಮುಂದು ಎಂದು ಹೆಗಲುಕೊಟ್ಟು ಸಾಗಿದರು. ಕೊನೆಗೆ ಅಯ್ಯರ್‌ರವರ ತಮ್ಮ ಅನಂತ ಸುಬ್ರಹ್ಮಣ್ಯಂರು ಚಿತೆಗೆ ಬೆಂಕಿಯಿಟ್ಟಾಗ ಅಲ್ಲಿ ಸೇರಿದ ಜನಸ್ತೋಮ ಒಕ್ಕೊರಲಿನಿಂದ

"ಆರ್. ಗೋಪಾಲಸ್ವಾಮಿ ಅಮರ
ಹರಿಜನೋದ್ಧಾರಕ ಅಮರ
ಪಂಚಮರ ಗೋಪಾಲಸ್ವಾಮಿ ಅಮರ"

ಎಂದು ತಮ್ಮ ಅಗಲಿದ ದೇವರಿಗೆ ಅಶ್ರುತರ್ಪಣ ಮಿಡಿದು ಕೊನೆಯ ಭಕ್ತಿ ಕಾಣಿಕೆಯನ್ನು ಸಲ್ಲಿಸಿದರು.

**ಅಡಿಟಿಪ್ಪಣಿಗಳು**


೧. ಸೂರ್ಯನಾಥ ಕಾಮತ್ ಸಂ., 'ಇತಿಹಾಸ ದರ್ಶನ', ಸಂಪುಟ-೯, ೧೯೯೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು.೨೩೦.

೨. ಎನ್. ಚಿನ್ನಸ್ವಾಮಿ ಸೋಸಲೆ., (೨೦೦೫) ನಾಲ್ವಡಿ ಕೃಷ್ಣನ ಮೈಸೂರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೭೩.

೨. ಡಾ. ಜಿ. ಗೋಪಾಲ್., (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು ಪು.೩

೩. ಚಂಪಾ (ಸಂ.) ಸಂಕ್ರಮಣ, ಸಂಪುಟ-೧೭, ಸಂಚಿಕೆ-೧೧, (೧೯೮೨), ಸಂಕ್ರಮಣ ಪ್ರಕಾಶನ, ಬೆಂಗಳೂರು, ಪು.೫೫

೪. ಡಾ. ಜಿ. ಗೋಪಾಲ್., (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು. ಪು.೪೮.

೫. ಡಾ. ಬಿ.ಸಿ. ರಾಧಾಕೃಷ್ಣ., (೧೯೪೯) ನನ್ನ ತಂದೆ, ಬಿ. ಶ್ರೀನಿವಾಸ ಐಯ್ಯಂಗಾರ್ ಪ್ರಿಂಟರ್ಸ್ ಮತ್ತು ಪ್ರಕಾಶಕರು ಬೆಂಗಳೂರು, ಪು. ೧೪೫.

೬. ಡಾ. ಜಿ. ಗೋಪಾಲ್ (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು. ಪು.೯೫.

೭. ಡಾ. ಬಿ.ಸಿ. ರಾಧಾಕೃಷ್ಣ., (೧೯೪೯) ನನ್ನತಂದೆ, ಬಿ. ಶ್ರೀನಿವಾಸ ಐಯ್ಯಂಗಾರ್ ಪ್ರಿಂಟರ್ಸ್ ಮತ್ತು ಪ್ರಕಾಶಕರು ಬೆಂಗಳೂರು ಪುಟ. ೧೪೩.

೮. ಅದೇ ಪು. ೧೪೪.

೯. ಅದೇ ಪು. ೧೪೩.

೧೦. ಟಿ.ಹೆಚ್. ಮೂರ್ತಿ (೨೦೦೬) ಆರ್. ಗೋಪಾಲಸ್ವಾಮಿ ಅಯ್ಯರ್, ಬೆಂಗಳೂರು ವಿಶ್ವವಿದ್ಯಾಲಯ, ಪು.೫೦

೧೧. ಬಿ.ಸಿ. ರಾಧಕೃಷ್ಣ, (೧೯೪೯), ನನ್ನ ತಂದೆ, ಬಿ. ಶ್ರೀನಿವಾಸ ಐಯ್ಯಂಗಾರ್, ಪ್ರಿಂಟರ್ಸ್ ಮತ್ತು ಪ್ರಕಾಶಕರು, ಬೆಂಗಳೂರು, ಪು.೧೪೩

೧೨. ಸೂರ್ಯನಾಥ ಕಾಮತ್ (ಸಂ). ಇತಿಹಾಸ ದರ್ಶನ, ಸಂಪುಟ-೯, (೧೯೯೪). ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು. ೨೩೨.

೧೩. ಡಾ. ಜಿ. ಗೋಪಾಲ್ (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್ ಬೆಂಗಳೂರು, ಪು. ೯೩.

೧೪. ಚಂಪಾ (ಸಂ). ಸಂಕ್ರಮಣ, ಸಂಪುಟ-೧೭, ಸಂಚಿಕೆ-೧೧ ಸಂಕ್ರಮಣ ಪ್ರಕಾಶನ ಬೆಂಗಳೂರು, ಪು. ೫೫.

೧೫. ಅಗರಂ ರಂಗಯ್ಯ (ಸಂ). ಸಾಧ್ವೀ ರಾಜಧಾನಿ ರಾಷ್ಟ್ರೀಯ ವಾರಪತ್ರಿಕೆ, ಸಂಪುಟ- ೩, ಸಂಚಿಕೆ- ೩೬, ಸೋಮವಾರ ೭.೧೧.೧೯೩೫. ಪು.೧೦.

೧೬. ಡಾ. ಜಿ. ಗೋಪಾಲ್ (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು, ಪು.೧೦೪.

೧೭. ಸೂರ್ಯನಾಥ ಕಾಮತ್ (ಸಂ)., ಇತಿಹಾಸ ದರ್ಶನ, ಸಂಪುಟ-೯, (೧೯೯೪), ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು.೨೩೧.

೧೮. ಪಿ.ಆರ್. ತಿಪ್ಪೆಸ್ವಾಮಿ (೧೯೮೨), ಅಸ್ಪೃಶ್ಯತೆ ಅಳಿಸಲು ಯತ್ನಿಸಿದ ಅಯ್ಯರ್, ಯಾತ್ರಿಕ ಪತ್ರಿಕೆ ದೀಪಾವಳಿ ಸಂಚಿಕೆ, ಪು.೩೯.

ಅಧ್ಯಾಯ – ೩

# ಗೋಪಾಲಸ್ವಾಮಿ ಅಯ್ಯರ್‌ರವರ ದಲಿತೋದ್ಧಾರ ಕಾರ್ಯಗಳು

* ಪಂಚಮರ ಸೇವೆ
* ನಂಜನಗೂಡಿನ ಘಟನೆ
* ನರಸಿಂಹರಾಜ ವಿದ್ಯಾರ್ಥಿನಿಲಯದ ಸ್ಥಾಪನೆ
* ಗಣ್ಯವ್ಯಕ್ತಿಗಳ ಪರಿಚಯ
* ರಾವಣಿ ಘಟನೆ
* ಸೋಮನಹಳ್ಳಿ ಘಟನೆ
* ಮಳವಳ್ಳಿಯ ಕುನ್ನಿರುಕಟ್ಟೆ ಘಟನೆ

# ಗೋಪಾಲಸ್ವಾಮಿ ಅಯ್ಯರ್ ಅವರ ದಲಿತೋದ್ಧಾರ ಕಾರ್ಯಗಳು

೧೯೧೧ರ ಜನಗಣತಿಯ ಪ್ರಕಾರ ಅಂದಿನ ಮೈಸೂರು ಸಂಸ್ಥಾನದಲ್ಲಿ ೧೦,೪೩,೮೯೧ ಜನ ಅಸ್ಪೃಶ್ಯರಿದ್ದರು.[೧] ಮೈಸೂರು ಸಂಸ್ಥಾನದಲ್ಲಿಯೂ ಸಹ ಭಾರತದಲ್ಲಿ ಹಿಂದಿನಿಂದ ಬಂದಿದ್ದ ಸಾಮಾಜಿಕ ಸ್ತರವಿನ್ಯಾಸವೇ ಮುಂದುವರೆದುಕೊಂಡು ಬಂದಿತ್ತು. ಆದರೆ ಹೆಚ್ಚಾಗಿ ಸಾಮಾಜಿಕ ಸಾಮರಸ್ಯಕ್ಕೆ ಭಂಗವಾಗಿರಲಿಲ್ಲವೆನ್ನಬಹುದು. ಸಮಾಜದಲ್ಲಿ ಬ್ರಾಹ್ಮಣರು ಆಳುವ ವರ್ಗ ವೈಶ್ಯ ಮತ್ತು ಶೂದ್ರರೆಂಬ ಪ್ರಧಾನ ಜಾತಿಗಳಿದ್ದವು. ಇವುಗಳಲ್ಲದೆ ಇಂದಿನಂತೆ ಅನೇಕಾರು ಜಾತಿಗಳಿದ್ದು ಪಂಚಮ ವರ್ಗವೂ ಸಹ ಅವುಗಳಲ್ಲಿ ಒಂದಾಗಿತ್ತು. ಇವರ ಜೀವನ ಸ್ಥಿತಿಯು ತುಂಬಾ ದಮನೀಯವಾಗಿತ್ತು. ಅಂದರೆ ವಾಸಿಸಲು ಗುಣಮಟ್ಟದ ಮನೆಗಳಿಲ್ಲದೆ ಕೃಷಿ ಕಾರ್ಯ ಮಾಡಲು ಭೂಮಿಯೂ ಇಲ್ಲದೆ ಅತೀವ ಬಡತನದಿಂದ ಜೀವನ ಸಾಗಿಸುತ್ತಿದ್ದರು. ಮೊದಲಾಗಿ ಇವರ ಮಕ್ಕಳಿಗೆ ಶಿಕ್ಷಣ ಕಲಿಯಲು ಶಾಲೆಗಳಲ್ಲಿ ಪ್ರವೇಶವನ್ನು ನಿಷೇಧಿಸಲಾಗಿತ್ತು. ಒಟ್ಟಾರೆ ಸಮಾಜದಲ್ಲಿ ಯಾವುದೆ ಬಗೆಯ ಸ್ಥಾನಮಾನಗಳಿಲ್ಲದೆ ಸಂಸ್ಥಾನದಲ್ಲಿ ಬಹುಸಂಖ್ಯಾತ ಅಸ್ಪೃಶ್ಯರು ಅಜ್ಞಾನ ಬಡತನ ದಬ್ಬಾಳಿಕೆಗೆ ಮತ್ತು ಶೋಷಣೆಗೆ ಒಳಗಾಗಿ ಹೀನಾಯ ಸ್ಥಿತಿಯಲ್ಲಿ ಜೀವನ ನಡೆಸುತ್ತಿದ್ದರು. ಅಸ್ಪೃಶ್ಯರ ಸ್ಥಿತಿಗತಿಗಳನ್ನು ಹತ್ತಿರದಿಂದ ಅರ್ಥಮಾಡಿಕೊಂಡ ಬ್ರಿಟೀಷರು ಈ ಜನಾಂಗದ ಏಳಿಗೆಗೆ ಯೋಜನೆ ಹಾಕಿ ಅವರನ್ನು ಬಂಧನದಿಂದ ಮುಕ್ತಗೊಳಿಸುವ ಪ್ರಯತ್ನ ಮಾಡಿದರು. ಈ ಜನಾಂಗದವರನ್ನು ತಮ್ಮ ಬೆಂಬಲಿಗರನ್ನಾಗಿ ಮಾಡಿ ಕೊಳ್ಳಬೇಕೆಂಬ ಹಂಬಲದಿಂದ ಮತ್ತು ಇದೇ ವೇಳೆಗೆ ದೇಶದ ನಾನಾ ಭಾಗಗಳಲ್ಲಿ ವಿವಿಧ ಸಾಮಾಜಿಕ ಸುಧಾರರಣೆಯ ಗಾಳಿ ಬೀಸತೊಡಗಿತು. ಆದ್ದರಿಂದ ಬ್ರಿಟಿಷ್ ಸಾಮ್ರಾಜ್ಯದ ಆಡಳಿತ ಭಾರತದಲ್ಲಿ ಶೋಷಣೆಗೆ ಒಳಗಾದ ಅಸ್ಪೃಶ್ಯರಿಗೆ ಇಂಗ್ಲಿಷ್ ಶಿಕ್ಷಣ ಕೊಡಲು ವಿಶೇಷ ಶಾಲೆ ಹಾಸ್ಟೆಲ್‌ಗಳನ್ನು ಆರಂಭಿಸಿದರು. ಇದರಿಂದಾಗಿ ಕೆಳ ಜಾತಿ ಜನರಲ್ಲಿ ಶಿಕ್ಷಣ ಜ್ಞಾನದ ಅರಿವಿನ ಜೊತೆಗೆ ಇಂಗ್ಲಿಷ್‌ರು ತೋರಿದ ಉದಾರ ಮನೋಭಾವ ಅಸ್ಪೃಶ್ಯರಲ್ಲಿ ಹೊಸ ಬಗೆಯ ಚೈತನ್ಯ ಮೂಡಿಸಿತು. ಈ ಹಿನ್ನೆಲೆಯಲ್ಲಿ ಬ್ರಿಟಿಷರು ಅಸ್ಪೃಶ್ಯ ಜನಾಂಗವನ್ನು ತಮ್ಮ ಬೆಂಬಲಿಗರನ್ನಾಗಿ ಮಾಡಿಕೊಳ್ಳಲು ಪ್ರಯತ್ನ ಪಟ್ಟರೆ ಮತ್ತೊಂದು ಕಡೆ ಮೈಸೂರು ಸಂಸ್ಥಾನದ ಅರಸರು (ಸಂಪೂರ್ಣವಾಗಿ ಬ್ರಿಟಿಷ್

ಆಡಳಿತಕ್ಕೊಳಪಟ್ಟಿದ್ದರೂ) ಅಕ್ಕಪಕ್ಕದ ಸಂಸ್ಥಾನಗಳಲ್ಲಿ (ಮರಾಠ, ಕೇರಳ) ಅಸ್ಪೃಶ್ಯರ ಬಡವರ ಮತ್ತು ಹಿಂದುಳಿದ ಜಾತಿಗೆ ಸೇರಿದ ಜನರ ಕಲ್ಯಾಣ ಕಾರ್ಯಗಳನ್ನು ಕೈಗೊಂಡಿದ್ದನ್ನು ಗಮನಿಸಿ ಆಕರ್ಷಿತರಾಗಿದ್ದರು. ಹಾಗೂ ಪಾಶ್ಚಾತ್ಯ ಚಿಂತನ ಧಾರೆಯ ಆಕರ್ಷಣೆಗೊಳಗಾಗಿದ್ದರು. ಮದ್ರಾಸಿನ ಜಸ್ಟಿಸ್ ಪಾರ್ಟಿಯ ಕಾರ್ಯಕ್ರಮ ಸ್ವಾಮಿ ವಿವೇಕನಂದ ಜ್ಯೋತಿಬಾ ಫುಲೆಯವರ ಚಿಂತನೆಗಳಿಂದ ಪ್ರಭಾವಿತರಾದ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಆಡಳಿತದ ಕಾಲಾವಧಿಯಲ್ಲಿ ಸಾಮಾಜಿಕ ಸುಧಾರಣೆಗಳನ್ನು ತರಲು ಮುಖ್ಯವಾಗಿ ಅಸ್ಪೃಶ್ಯರ ಏಳಿಗೆಗೆ ಕಾರ್ಯಕ್ರಮಗಳನ್ನು ರೂಪಿಸಲು ಪ್ರೇರಕ ಅಂಶಗಳಾಗಿದ್ದವು. ಎಲ್ಲಕ್ಕಿಂತಲೂ ಮಿಗಿಲಾಗಿ ಸ್ವತಃ ನಾಲ್ವಡಿ ಕೃಷ್ಣರಾಜ ಒಡೆಯರವರು ಹಿಂದುಳಿದ ಜನಾಂಗಕ್ಕೆ ಸೇರಿದವರಾಗಿದ್ದರು ಎಂಬುದು ಗಮನಿಸಬೇಕಾದ ಅಂಶ.

ಇದೇ ಸಂದರ್ಭದಲ್ಲಿ ೧೯೧೮ರಲ್ಲಿ ಮೈಸೂರಿನ ಬ್ರಾಹ್ಮಣ ವಿರೋಧಿ ಚಳುವಳಿ ಪ್ರಾರಂಭವಾಯಿತು. ಇದು ಸಹ ದಲಿತೋದ್ಧಾರಕ್ಕೆ ಬಲಬುಜವಾಗಿ ನಿಂತಿತ್ತಲ್ಲದೆ, ೧೯೧೩ರಲ್ಲಿ ಬೆಂಗಳೂರಿನಲ್ಲಿ ಸಮಾಜೋದ್ಧಾರ ಕಾರ್ಯಗಳನ್ನು ಕೈಗೊಳ್ಳುವ ಸಲುವಾಗಿ ಸೋಷಿಯಲ್ ಸರ್ವಿಸ್ ಲೀಗ್ ಸ್ಥಾಪನೆಗೊಂಡಿತು. ಹಾಗೂ ಅನಿಬೆಸೆಂಟ್‌ರವರ ಪ್ರಭಾವ ಹೆಚ್ಚಾಗಿ ಥಿಯೋಸಾಫಿಕಲ್ ಸೊಸೈಟಿ ಆಫ್ ಇಂಡಿಯಾ ಅಸ್ಥಿತ್ವಕ್ಕೆ ಬಂದು ಸುಧಾರ ವಾದಿಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ದಮನಿತಪರ ದುಡಿಯುವಂತೆ ಮಾಡಿತು. ಈ ಬಗೆಯ ಪ್ರಗತಿಪರ ಕಾರ್ಯಗಳನ್ನು ಕೈಗೊಳ್ಳಲು ಕಾರಣ ಎಲ್ಲಾ ವರ್ಗದ ಜನರ ಉದ್ಧಾರದಿಂದ ಮಾತ್ರ ನಮ್ಮ ಅಸ್ಥಿತ್ವವನ್ನು ಉಳಿಸಿಕೊಳ್ಳಲು ಸಾಧ್ಯ ಎಂಬ ಪ್ರಜ್ಞೆ ಬ್ರಿಟಿಷ್‌ರಾದಿಯಾಗಿ ಎಲ್ಲರಲ್ಲಿಯೂ ಬಂದಿದ್ದರಿಂದ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮುಂದಾದರು. ಅಥವಾ ಆ ವರ್ಗದ ನಾಯಕರಾಗಿ ಹೊರಹೊಮ್ಮಿದರು.

ಪಾಶ್ಚತ್ಯ ಶಿಕ್ಷಣವನ್ನು ಕೆಳವರ್ಗದವರಿಗೆ ನೀಡಿದರಿಂದ ಭಾರತದಲ್ಲಿ ಕ್ರೈಸ್ತ ಮಿಷನರಿಗಳು ವ್ಯಾಪಕವಾಗಿ ಪ್ರಚಾರ ಪಡೆದವು. ಹಾಗೂ ಇದೇ ವೇಳೆಗೆ ಭಾರತದಲ್ಲಿ ಕಾಣಿಸಿಕೊಂಡ ಅಖಿಲ ಭಾರತ ಸುಧಾರಣಾವಾದಿ ಚಳವಳಿಗಳಾದ ಬ್ರಹ್ಮ ಸಮಾಜ ಆರ್ಯ ಸಮಾಜ ಥಿಯೊಸಾಫಿಕಲ್ ಸೊಸೈಟಿ ಮತ್ತು ರಾಮಕೃಷ್ಣ ಮಿಷನ್‌ಗಳು ಅಸ್ಪೃಶ್ಯತೆಯ ವಿರುದ್ಧ ಹೋರಾಟ ಮಾಡುವುದರ ಜೊತೆಗೆ ಸಮಾಜದಲ್ಲಿ ಆಚರಣೆಯಲ್ಲಿದ್ದ ಅನಿಷ್ಟ ಪಿಡುಗುಗಳಾದ ಬಾಲ್ಯವಿವಾಹ ಪದ್ಧತಿ ಸತಿಸಹಗಮನ ಪದ್ಧತಿ ಜಾತಿಯತೆ ಮೂಢನಂಬಿಕೆಗಳನ್ನು ವಿರೋಧಿಸಿದವು. ಹಾಗೆಯೇ ವಿಧವಾ ಪುನರ್ ವಿವಾಹಕ್ಕೆ ಪ್ರೋತ್ಸಾಹವನ್ನು ನೀಡಿದವು. ಇಂತಹ ಸುಧಾರಣ ಚಳವಳಿಗಳಿಂದ ಪ್ರಭಾವಿತರಾದ ಹಲವಾರು ವ್ಯಕ್ತಿಗಳು ಸ್ವತಂತ್ರ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ಅಸ್ಪೃಶ್ಯತೆ ನಿರ್ಮೂಲನಾ ಚಳವಳಿಯನ್ನು ಕೈಗೊಂಡಿದ್ದರು. ಅಂತಹವರುಗಳಲ್ಲಿ ಬ್ರಹ್ಮಸಮಾಜದಿಂದ ಪ್ರಭಾವಿತರಾಗಿದ್ದ ಕುದ್ಮುಲ್ ರಂಗರಾಯರು ಮಂಗಳೂರಿನಲ್ಲೂ ಎಂ. ವೆಂಕಟಕೃಷ್ಣಯ್ಯನವರು ಮೈಸೂರು ನಗರದಲ್ಲೂ ಸರ್ದಾರ್ ವೀರಣ್ಣಗೌಡ ಪಾಟೀಲರು ಮುಂಬೈ ಕರ್ನಾಟಕದಲ್ಲೂ ಸುಧಾರಣೆಗಳನ್ನು ಕೈಗೊಂಡಿದ್ದರು.[೨]

ಆದರೆ ಥಿಯೊಸಾಫಿಕಲ್ ಸೊಸೈಟಿ ಸದಸ್ಯರಾದ ಅನಿಬೆಸೆಂಟ್‌ರಿಂದ ಪ್ರಭಾವಿತರಾದ ಬೆಂಗಳೂರಿನ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ಸ್ವಾತಂತ್ರಪೂರ್ವದಲ್ಲಿ ಮತ್ತು ಗಾಂಧೀಜಿ ಪೂರ್ವದಲ್ಲಿಯೇ ಮೈಸೂರು ಸಂಸ್ಥಾನದಲ್ಲಿ ಪಂಚಮರ ಏಳಿಗೆಗಾಗಿ ದುಡಿದರು. ಮತ್ತು ಅಸ್ಪೃಶ್ಯತಾ

ನಿವಾರಣಾ ಕಾರ್ಯದಲ್ಲಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಯಾವುದೇ ಪ್ರತಿಫಲಾಕ್ಷೆಯಿಲ್ಲದೆ ನಿಸ್ವಾರ್ಥ ಸೇವೆಯನ್ನು ಮಾಡಿ ಮೈಸೂರು ಸಂಸ್ಥಾನದಲ್ಲಿ ಇತಿಹಾಸ ನಿರ್ಮಿಸಿದ ಮಹಾಪುರುಷರು.

**ಪಂಚಮರ ಸೇವೆ**

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಸೇವಾಕ್ಷೇತ್ರ ವಿಸ್ತಾರಗೊಂಡು ಪ್ರಚಲಿತರಾದರು. ಆದ್ದರಿಂದ ಘನ ಸರ್ಕಾರ ಮೈಸೂರು ಪ್ರಾಂತ್ಯದಾದ್ಯಂತ ಒಂಬತ್ತು ಜಿಲ್ಲೆಗಳಲ್ಲಿ ಅಂದರೆ ಮೈಸೂರು ಬೆಂಗಳೂರು ಮಂಡ್ಯ ಹಾಸನ ಚಿಕ್ಕಮಗಳೂರು ಶಿವಮೊಗ್ಗ ಚಿತ್ರದುರ್ಗ ಕೋಲಾರಗಳಲ್ಲಿ ರೈಲಿನಲ್ಲಿ ಪ್ರಯಾಣ ಮಾಡಲು ಉಚಿತ ಪಾಸ್‌ನ್ನು ದಯಪಾಲಿಸಿತು. ಅಲ್ಲದೆ ಮೈಸೂರು ಸಂಸ್ಥಾನದಲ್ಲಿ ಎಲ್ಲಿಬೇಕಾದರೂ ಯಾವಾಗ ಬೇಕಾದರೂ ಪ್ರಯಾಣ ಮಾಡಬಹುದಾಗಿತ್ತು. ಜೊತೆಗೆ ಪಾಸಿನೊಂದಿಗೆ ಒಂದು ಬೈಸಿಕಲ್‌ನ್ನು ಸಹ ತಮ್ಮೊಂದಿಗೆ ಎರಡನೆಯ ದರ್ಜೆಯ ಬೋಗಿಯಲ್ಲಿ ತೆಗೆದುಕೊಂಡು ಹೋಗಬಹುದೆಂಬ ವಿಶೇಷ ಸವಲತ್ತನ್ನು ೧೯೩೭ರಲ್ಲಿ ಸರ್ಕಾರದ ಅಜ್ಞೆಯ ಮೂಲಕ ಅಯ್ಯರ್‌ರವರಿಗೆ ನೀಡಲಾಗಿತ್ತು. ತಮಗೆ ಸಿಕ್ಕ ಈ ಅಧಿಕಾರವನ್ನು ಸಮರ್ಪಕವಾಗಿ ಬಳಸಿಕೊಂಡ ಇವರು ಎಲ್ಲಿಯೂ ಸಲ್ಲದೆ ಸಮಾಜದಿಂದ ದೂರವಿದ್ದ ಪಂಚಮರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಅನೇಕರು ಕಾರ್ಯಗಳನ್ನು ರೂಪಿಸಿದರು.

ಬ್ರಾಹ್ಮಣ ಕುಲದಲ್ಲಿ ಜನಿಸಿದರೂ ಅಸ್ಪೃಶ್ಯರ ಸೇವಕಾರ್ಯಕ್ಕೆ ತಮ್ಮನ್ನು ತೊಡಗಿಸಿಕೊಂಡ ಅಯ್ಯರ್ ಮೈಸೂರು ಪ್ರಾಂತ್ಯದ ಒಂಬತ್ತು ಜಿಲ್ಲೆಗಳಲ್ಲಿ ರೈಲಿನಲ್ಲಿ ಸಂಚಾರಿಸಿ ಊರೂರುಗಳನ್ನು ಅಲೆದು ಅಲ್ಲಿನ ಅಸ್ಪೃಶ್ಯರ ಸ್ಥಿತಿಗತಿಗಳ ಬಗ್ಗೆ ತಿಳಿದುಕೊಳ್ಳಲು ಯತ್ನಿಸಿದರು. ಅಂತಹ ಸಂದರ್ಭದಲ್ಲಿ ಕಣ್ಣಾರೆ ಕಂಡ ದೃಶ್ಯಗಳು ಅವರನ್ನು ಆಶ್ಚರ್ಯಗೊಳಿಸಿರಬಹುದೇನು? ಅಂದರೆ ಪಂಚಮರು ಅತ್ಯಂತ ನೀಚ ನಿಕೃಷ್ಟ ಹೊಲಸಿನ ಜನಾಂಗ ಎಂದು ಊರಿನಿಂದ ಹೊರಗೆ ಇಟ್ಟಿದ್ದರು. ಅವರ ವಾಸಸ್ಥಳ ತಿಪ್ಪೆ ಹಳ್ಳ ಮುಳ್ಳು ಓಣಿಗಳಿದ್ದ ಜಾಗವಾಗಿತ್ತು. ಊರು ಸ್ವಚ್ಛಗೊಳಿಸಿ ಸತ್ತ ನಾಯಿ-ದನಕರುಗಳನ್ನು ಹೊರಕ್ಕೆ ಸಾಗಿಸುವುದಲ್ಲದೆ ಊರನ್ನು ಕಳ್ಳಕಾಕರಿಂದ ರಕ್ಷಿಸುವುದು ಸವರ್ಣೀರಿಯರಿಗೆ ಬಿಟ್ಟಿಬೇಗಾರಿ ಕೆಲಸ ಮಾಡುವುದು ನೀರಗಂಟಿಯಾ ತೊಟ್ಟಿ ತಳವಾರ(ಕುಳವಾಡಿ)ರಾಗಿ ಸೇವೆ ಸಲ್ಲಿಸುವುದೇ ಇವರ ಹಕ್ಕುಗಳಾಗಿದ್ದವು. ಸವರ್ಣಿಯರೆನಿಸಿಕೊಂಡವರು ಇವರನ್ನು ಮುಟ್ಟಿಸಿಕೊಳ್ಳುತ್ತಿರಲಿಲ್ಲ ಮುಟ್ಟುತ್ತಿರಲಿಲ್ಲ. ಹಾಗೂ ಪಂಚಮರು ಸವರ್ಣಿಯರ ಬೀದಿಯಲ್ಲಿ ಸಂಚರಿಸುವಂತಿರಲಿಲ್ಲ. ಬ್ರಾಹ್ಮಣರಿಗಂತೂ ಇವರ ನೆರಳು ಸಹ ಬೀಳಬಾರದಾಗಿತ್ತು. ಹಾಗೂ ಸಾರ್ವಜನಿಕ ಕೆರೆ ಬಾವಿಗಳು ಇವರಿಗೆ ನಿಷಿದ್ಧವಾಗಿದ್ದು ಹಿಂದೂ ದೇವಾಲಯಗಳಲ್ಲಿ ಪ್ರವೇಶವಿರಲಿಲ್ಲ. ಹಿಂದೂಗಳ ಹಬ್ಬ ಹರಿದಿನಗಳಲ್ಲಿ ಮದುವೆಮುಂಜಿಗಳಲ್ಲಿ ಎಸೆದ ಎಂಜಲುಗಳಿಗೆ ಹಳಸಿದ ಅನ್ನಕ್ಕೆ ಅಂತ್ಯಜರೇ ಹಕ್ಕುದಾರರಾಗಿದ್ದರು. ಇಂತಹ ಹೀನಸ್ಥಿತಿಯಲ್ಲಿ ಜೀವನ ನಡೆಸುತ್ತಿದ್ದ ಅಸ್ಪೃಶ್ಯರ ಕೇರಿಗಳಿಗೆ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದ ಗೋಪಾಲಸ್ವಾಮಿ ಅಯ್ಯರ್ ಸ್ವತಂತ್ರಪೂರ್ವದಲ್ಲಿಯೇ ತಮ್ಮ ಪಾದ ಬೆಳೆಸಿದ ಮೊದಲಿಗರು ಎನ್ನಬಹುದು. ಯಾವುದೇ ಮುಜಗರಕ್ಕೊಳಗಾದ ಅಯ್ಯರ್ ಅಸ್ಪೃಶ್ಯರ ಕೇರಿಗೆ ಬೇಟಿಕೊಟ್ಟ ವೇಳೆಯಲ್ಲಿ ಅಸ್ಪೃಶ್ಯರಿಗೆ ಶುಚಿತ್ವ ವಿದ್ಯೆ ಕಲಿಯುವುದರ ಬಗ್ಗೆ ತಿಳುವಳಿಕೆ ನೀಡಿದರು. ಸತ್ತ ಪ್ರಾಣಿಮಾಂಸ ತಿನ್ನಬಾರದೆಂದು ಪ್ರಚಾರ ಮಾಡಿ ಸ್ವಾಭಿಮಾನದಿಂದ

ತಲೆಯೆತ್ತಿಬಾಳಬೇಕೆಂದು ತಮ್ಮ ಬಿ.ಎಸ್.ಸಿ. ಸೈಕಲ್‌ನಲ್ಲಿ ಹಳ್ಳಿಗಳಲ್ಲಿ ಈ ಜನರ ಕೇರಿಗಳಲ್ಲಿ ಸಾರಿದರು. ಹೊಲಗದ್ದೆಗಳಲ್ಲಿ ದನ ಕುರಿ ಮೇಯಿಸುವ ಕಾಡು ಬೆಟ್ಟಗಳಲ್ಲಿ ಜೀತಮಾಡಿ ಮನೆಗೆ ಬಂದ ಹುಡುಗರನ್ನು ಒಂದು ಕಡೆಗೆ ಸೇರಿಸಿ ಅವರಿಗೆ ವಿದ್ಯೆಯ ಮಹತ್ವದ ಬಗ್ಗೆ ತಿಳಿಸಿದರು. ಅಲ್ಲದೇ ಅವರ ತಂದೆ-ತಾಯಿಯರನ್ನು ಒಪ್ಪಿಸಿ ಸ್ವತಃ ಅವರೇ ಅಂದು ಮೈಸೂರು ಸಂಸ್ಥಾನದಲ್ಲಿ ಪಂಚಮರಿಗಾಗಿ ಸ್ಥಾಪಿತವಾಗಿದ್ದ ಶಾಲೆಗಳಿಗೆ ಸೇರಿಸುತ್ತಿದ್ದರು. ಹಾಗೂ ಶಾಲೆಗಳಿಗೆ ಅರ್ಜಿಯನ್ನು ತಾವೇ ಬರೆದು ಪೋಷಕರ ಸಹಿ ಮಾಡಿ ಶಾಲೆಗೆ ದಾಖಲು ಮಾಡುತ್ತಿದ್ದರು. ಅಂದರೆ ೧೯೧೦ರಲ್ಲಿ ಸಂಸ್ಥಾನದಲ್ಲಿ ಸ್ಥಾಪಿತವಾಗಿದ್ದ "ಪಂಚಮರ ಬೋರ್ಡಿಂಗ್ ಹೋಂಗೆ" ದಾಖಲು ಮಾಡಿಸುತ್ತಿದ್ದರು. ಅದರೆ ಸಮಾಜ ಬಾಹಿರರಾದ ಈ ವಿದ್ಯಾರ್ಥಿಗಳಿಗೆ ವಿದ್ಯೆ ಕಲಿಸಿಕೊಡಲು ಶಿಕ್ಷಕರಾರು ಮುಂದೆ ಬರಲಿಲ್ಲ. ಸರ್ಕಾರವು ಹೆಚ್ಚಿನ ವೇತನವನ್ನು ನೀಡುವುದಾಗಿ ಘೋಷಿಸಿದರೂ ಕೂಡ ಯಾರು ಮುಂದೆ ಬರಲಿಲ್ಲ. ಕೊನೆಗೆ ದಲಿತೇತರರಾದ ತಲಕಾಡಿನ 'ಆರ್. ರಂಗೇಗೌಡ'ರವರು ಪ್ರಥಮಬಾರಿಗೆ ಅಸ್ಪೃಶ್ಯ ೧೫ ವಿದ್ಯಾರ್ಥಿಗಳಿಗೆ ಕನ್ನಡ ಪಾಠವನ್ನು ಕಲಿಸಿಕೊಡಲು ಮುಂದೆಬಂದ ಮೊದಲಿಗರು. ಇವರು ಮಳವಳ್ಳಿಯಲ್ಲಿ ಮೊದಲಿಗೆ ಮರಳ ಮೇಲೆ ಅಕ್ಷರ ಕಲಿಸುವ ಮೂಲಕ ಶಾಲೆ ಪ್ರಾರಂಭಿಸಿದರು. ಇಲ್ಲಿಗೆ ನಾಲ್ವಡಿಯವರೇ ಅವರನ್ನು ನೇಮಿಸಿ ಕಳುಹಿಸಿದ್ದರು.[೩] ಆಗ ರಂಗೇಗೌಡರೆ ಪಂಚಮರ ಮನೆಗಳಿಗೆ ಹೋಗಿ ಪೋಷಕರ ಮನವೊಲಿಸಿ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ವಿನಂತಿಸಿ ಕೊಳ್ಳುತ್ತಿದ್ದರು. ಇವರ ಒತ್ತಾಯದ ಮೇರೆಗೆ ಮಕ್ಕಳು ಶಾಲೆಗೆ ಬರಲು ಪ್ರಾರಂಭಿಸಿದರು. ನಂತರ ೧೯೧೩ರಲ್ಲಿ ಮೈಸೂರಿನ ಪಂಚಮ ವಸತಿ ಶಾಲೆಯ ಮುಖ್ಯೋಪಾಧ್ಯಯರನ್ನಾಗಿ ನೇಮಿಸಲಾಯಿತು.[೪] ಇದರಿಂದ ಹರ್ಷಿತರಾದ ಅಯ್ಯರ್ ರಂಗೇಗೌಡರನ್ನು ಅಭಿನಂದಿಸಿದರು.

ಪಂಚಮರ ಬೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮೈಸೂರಿನ ಟೌನ್‌ಹಾಲ್‌ನಲ್ಲಿ ಒಂದು ಸಭೆಯನ್ನು ಏರ್ಪಡಿಸಲಾಗಿತ್ತು. ಈ ಸಭೆಯಲ್ಲಿ ಪಂಚಮರಿಗೆ ಇಂಗ್ಲಿಷ್ ಭಾಷೆಯನ್ನು ಬೋಧಿಸಬೇಕೆಲ ಬೇಡವೇಲ ಎಂಬ ವಿಷಯ ಕುರಿತು ಚರ್ಚೆ ನಡೆಸಲಾಯಿತು. ಈ ಸಭೆಯಲ್ಲಿ ವಾದ ಪ್ರತಿವಾದಗಳು ನಡೆದರೂ ಏಕಾಭಿಪ್ರಾಯಕ್ಕೆ ಬರಲು ಸಾಧ್ಯವಾಗಲಿಲ್ಲ. ಅಂದಿನ ಸಂದರ್ಭದಲ್ಲಿ ಯಾವ ಸವರ್ಣಿಯನು ಸಹ ಈ ವಿಷಯವನ್ನು ಒಪ್ಪಿಕೊಳ್ಳಲು ಸಿದ್ಧನಿರಲಿಲ್ಲವೆಂದು ಹೇಳಬಹುದು. ಏಕೆಂದರೆ ಪಂಚಮರು ವಿದ್ಯೆಯನ್ನು ಕಲಿತರೆ ತಮ್ಮ ಮನೆ ಮಠಗಳಲ್ಲಿ ಕೆಲಸ ಮಾಡುವರ್ಯಾರು ಎಂಬ ಕಾರಣಕ್ಕಾಗಿಯೋ ಅಥವಾ ನಮ್ಮ ಸರಿಸಮಾನರಾಗಿ ಬೌದ್ಧಿಕವಾಗಿ ಆರ್ಥಿಕವಾಗಿ ರಾಜಕೀಯವಾಗಿ ಸಾಂಸ್ಕೃತಿಕವಾಗಿ ಪ್ರಗತಿ ಸಾಧಿಸಿ ಬಿಡುತ್ತಾರೆ ಎಂಬ ಕಾರಣಕ್ಕಾಗಿ ಒಪ್ಪದೆ ಇರಬಹುದು.

ಚರ್ಚೆಯ ವಾತಾವರಣ ಬಿಗಡಾಯಿಸಿತು ಮತ್ತು ನಿರಾಶಾದಾಯಕವಾಯಿತು. ಇದೆಲ್ಲವನ್ನು ಗಂಭೀರವಾಗಿ ಗಮನಿಸುತ್ತಿದ್ದ ವರದರಾಜ್ ಐಯ್ಯಂಗರ್ ಎದ್ದು ನಿಂತು ನಾನು ಪಂಚಮರಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸಲು ಸಿದ್ಧನಿದ್ದೇನೆ ಎಂದು ಹೇಳಿದಾಗ ಸಭೆಯಲ್ಲಿ ಭಾಗವಹಿಸಿದಂತಹ ಎಲ್ಲರ ಮುಖದಲ್ಲಿ ಛಾಯೆ ಮೂಡಿತು. ಜೊತೆಗೆ ಆಶ್ಚರ್ಯವೂ ಆಗಿರಬಹುದು. ವರದರಾಜ್ ಐಯ್ಯಂಗಾರ್‌ರವರ ಮೇಲೆ ಕೋಪ ಅಸಹನೆ ದ್ವೇಷ ಎಲ್ಲರ ಮುಖದಲ್ಲಿ ಕಂಡುಬಂದಿತು. ಆದರೆ ಪಂಚಮರಿಗೆ ಜ್ಞಾನದ ಬೆಳಕನ್ನು ನೀಡುವ ಪ್ರಯತ್ನದಲ್ಲಿದ್ದ ಗೋಪಾಲಸ್ವಾಮಿ ಅಯ್ಯರ್‌ರವರಿಗೆ

ಆನಂದವನ್ನುಂಟುಮಾಡಿತು. ತ್ಯಾಗಮಯಿಯಾದ ವರದರಾಜ್ ಐಯ್ಯಂಗಾರ್ ಅಂದಿನಿಂದಲೇ ಪಂಚಮರ ಬೋರ್ಡಿಂಗ್ ಹೊಂನಲ್ಲಿ ತಮ್ಮ ಜೀವನೋಪಾಯವನ್ನು ವಿದ್ಯಾರ್ಜನೆಯ ಮೂಲಕ ಪ್ರಾರಂಭಿಸಿ ತಮ್ಮ ಸೇವಾವಧಿಯ ಕೊನೆಯವರೆಗೂ ಬೇಸರಪಟ್ಟುಕೊಳ್ಳದೆ, ವರ್ಗಾವಣೆ ಬಯಸದೆ ಪಂಚಮರ ಅಭ್ಯುದಯಕ್ಕಾಗಿ ದುಡಿದರು. ವಿದ್ಯಾರ್ಥಿಗಳಿಗೆ ಸ್ಟುಪಿಟ್ಡ್ ಹೊಲೆಯನನ ಮಗನೆ ಫೂಲ್ ಎಂದು ಬೈದು ಇಂಗ್ಲಿಷ್ ಕಲಿಸಿದರು. ವರದರಾಜ ಐಯ್ಯಂಗಾರ್ ನಿವೃತ್ತಿ ಹೊಂದಿದಾಗ ನಾನೇ ಪಂಚಮರಿಗೆ ಇಂಗ್ಲಿಷ್ ಕಲಿಸಿದ ಮೊದಲ ಮೇಷ್ಟ್ರು ಎಂದು ಸಂತೋಷಪಟ್ಟರು. ಅಲ್ಲದೆ ತಮ್ಮ ಜೀವನದುದ್ದಕೂ ಪಂಚಮರ ಅಭ್ಯುದಯಕ್ಕಾಗಿ ದುಡಿದರು. ಹಾಗಾಗಿ ಅಂದಿನ ಸಂದರ್ಭದ ಎಲ್ಲಾ ಸಂಕೋಲೆಗಳನು ತೊರೆದು ತೆಗೆದುಕೊಂಡ ದೃಢನಿರ್ಧಾರ ನಿಜವಾಗಿಯೂ ಗಮನಾರ್ಹವಾದುದು ಎಂದೇ ಹೇಳಬಹುದು.

ಶಾಲೆಗಳಲ್ಲಿ ವಿದ್ಯೆ ಕಲಿಯಲು ಪಂಚಮ ಹುಡುಗರು ಸಿಗದೆ ಇದ್ದಾಗ ಅಯ್ಯರ್‌ರವರು ವರದರಾಜ ಐಯ್ಯಂಗಾರ್ ಮತ್ತು ರಂಗೇಗೌಡರೊಂದಿಗೆ ಹೊಲ-ಗದ್ದೆಗಳಲ್ಲಿ ಜೀತಗಾರರಾಗಿ ದನಕರು ಮೇಯಿಸುತ್ತಿದ್ದ ಕೂಲಿ ಮಾಡುತ್ತಿದ್ದ ಅಸ್ಪಶ್ಯರ ಹುಡುಗರನ್ನು ಕಂಡು ಅವರಿದ್ದ ಸ್ಥಳಗಳಿಗೆ ಹೋಗಿ ಉಪದೇಶ ಮಾಡುತ್ತಿದ್ದರು. ಕೆಲವು ಕಡೆ ತಂದೆ-ತಾಯಿಯವರಿಗೆ ಸಮಧಾನ ಹೇಳಿ ಬಲತ್ಕಾರದಿಂದ ಹುಡುಗರನ್ನು ಎಳೆದುಕೊಂಡು ಹೋಗುತ್ತಿದ್ದರು. ಎಳೆದು ತಂದ ಹುಡುಗರಿಗೆ ಮನವೊಲಿಸಿ ಕ್ರಾಪ್‌ಕಟ್ ಮಾಡಿಸಿ ಹೊಸಬಟ್ಟೆ ಹೊಲಿಸಿ ಬೋರ್ಡಿಂಗ್ ಹೊಂ ಮತ್ತು ಶಾಲೆಗಳಿಗೆ ದಾಖಲು ಮಾಡುತ್ತಿದ್ದರು. ಆದರೆ ಅಯ್ಯರ್‌ರವರು ಪಂಚಮರಿಗೆ ಮಾಡುತ್ತಿದ್ದ ಸೇವೆಯನ್ನು ಸಹಿಸದ ಕೆಲವು ಸನಾತನಿಗಳು ಹೊಲೆಯ ಮಕ್ಕಳನ್ನು ಹಿಡಿದುಕೊಂಡು ಹೋಗಿ ಕನ್ನಾಂಬಾಡಿ ಕಟ್ಟೆಗೆ ಬಲಿ ಕೊಡುತ್ತಾರೆಂಬ ಅಪಪ್ರಚಾರ ಮಾಡಿದರು. ಈ ವಿಷಯ ಪ್ರತಿ ಹಳ್ಳಿಗೂ ಹಬ್ಬಿತ್ತು. ಇಂತಹ ಅಪಪ್ರಚಾರದಿಂದಾಗಿ ಅಯ್ಯರ್‌ರವರ ಮಾನವೀಯ ಸೇವಾ ಕಾರ್ಯಕ್ಕೆ ತಾತ್ಕಾಲಿಕ ಹಿನ್ನಡೆಯಾಯಿತು. ಆದರೂ ಸಹ ಅಯ್ಯರ್‌ರವರು ಧೃತಿಗೆಡಲಿಲ್ಲ. ಇಂತಹ ಅಪಪ್ರಚಾರಗಳಿಗೆಲ್ಲಾ ಮನಸ್ಸು ನೋಯಿಸಿಕೊಳ್ಳದ ಅಯ್ಯರ್ ಅವುಗಳಿಗೆ ಸಡ್ಡು ಹೊಡೆದು ನಿಂತು ಮುಂದಿನ ಕಾರ್ಯಚಟುವಟಿಕೆಗಳಲ್ಲಿ ಕಾರ್ಯ ಪ್ರವೃತ್ತರಾದರು. ಒಂದು ವೇಳೆ ಮನಸ್ಸು ನೊಂದು ತಮ್ಮ ಕಾರ್ಯಗಳನ್ನು ಸ್ಥಗಿತಗೊಳಿಸಿದ್ದರೆ ಮೈಸೂರು ಸಂಸ್ಥಾನದಲ್ಲಿ ಪಂಚಮರ ಬದುಕು ಇನ್ನು ಶೋಚನೀಯವಾಗುತ್ತಿತ್ತು.

ಪಂಚಮರ ಹುಡುಗರ ಅನ್ವೇಷಣೆಗೋಸ್ಕರ ಒಮ್ಮೆ ಟಿ. ನರಸಿಪುರ ತಾಲೂಕಿನ ಸೋಸಲೆ ಗ್ರಾಮಕ್ಕೆ ತ್ರಿಮೂರ್ತಿಗಳು ಭೇಟಿ ನೀಡಿದರು. ಆ ಸಮಯದಲ್ಲಿ ತಲೆಯ ಮೇಲೆ ಹುಲ್ಲಿನ ಹೊರೆ ಹೊತ್ತಿದ್ದ ಹದಿನೈದು ವರ್ಷದ ಹುಡುಗನೊಬ್ಬ ಗೋಚರಿಸಿದ. ಇವನು ಪಂಚಮರ ಹುಡುಗ ಎಂದು ಗುರುತಿಸುವುದು ತಲಕಾಡಿನ ರಂಗೇಗೌಡರಿಗೆ ಕಷ್ಟಕರವಾಗಿರಲಿಲ್ಲ. ಏಕೆಂದರೆ ಹೊಲೆಯವರನ್ನು ತಮ್ಮ ಮನೆಯಲ್ಲಿ ಊರಿನಲ್ಲಿ ಜೀತಗಾರನ್ನಾಗಿ ಮಾಡಿಕೊಂಡು ತಲೆತಲಾಂತರದಿಂದ ದುಡಿಸಿಕೊಂಡಿದ್ದರಿಂದ ಗುರುತಿಸಲು ಸುಲಭ ಸಾಧ್ಯವಾಗಿರಬಹುದು. ಅಲ್ಲದೆ ಆ ಹುಡುಗನ ಬಣ್ಣ ಆಕಾರ ಚಲನೆ ಮತ್ತು ಧರಿಸಿಧ್ಧ ಬಟ್ಟೆ ಮತ್ತಷ್ಟು ಸಹಾಯ ಮಾಡಿರಬಹುದು. ಏಕೆಂದರೆ ಸಂತೆಯಲ್ಲಿ ಮಾರಾಟ ಮಾಡುತ್ತಿದ್ದ ಎರಡನೇ ದರ್ಜೆಯ ಅಂಗಿ ಚಡ್ಡಿಯನ್ನು ಅಥವಾ ಸವರ್ಣೀಯರು ಧರಿಸಿ

ಬಿಟ್ಟು ತಮಗೆ ಬೇಡವೆನ್ನಿಸಿದಾಗ ಅದನ್ನು ಪಂಚಮರಿಗೆ ದಾನವಾಗಿ ಕೊಟ್ಟಂತಹ ಬಟ್ಟೆಯನ್ನೇ ಧರಿಸುತ್ತಿದ್ದ ಇವರಿಗೆ ಒಳ್ಳೆಯ ಬಟ್ಟೆಗಳನ್ನು ಹಾಕುವ ಸೌಭಾಗ್ಯವು ಎಲ್ಲಿಯಿಂದಾದರೂ ಬರಬೇಕು. ಈ ತ್ರಿಮೂರ್ತಿಗಳು ಜಟಕಾ ಬಂಡಿಯಿಂದ ಇಳಿದು ಆ ಹುಡುಗನನ್ನು ಹಿಡಿಯಲು ಹೊಂಚು ಹಾಕಿದರು. ಆ ವೇಳೆಗಾಗಲೇ ಸನಾತನಿಗಳು ಹಬ್ಬಿಸಿದ ಅಪಪ್ರಚಾರ ಈ ಗ್ರಾಮಕ್ಕೂ ಹಬ್ಬಿತ್ತು. ಇವರನ್ನು ನೋಡಿದ ಹುಡುಗ ಇವರೆ ಕಳ್ಳರೆಂದು ತಿಳಿದು ಓಡಲು ಪ್ರಾರಂಭಿಸಿದ. ಆದರೆ ಅಯ್ಯರ್ ರವರು ತನ್ನಿಬ್ಬರ ಸಹಾಯಕರಿಂದ ಹುಡುಗನನ್ನು ಬಂಧಿಸಿ ಅದೇ ಜಟಕಾ ಬಂಡಿಯಲ್ಲಿ ಮೈಸೂರಿಗೆ ಕರೆತಂದು ಬೋರ್ಡಿಂಗ್ ಹೊಂಗೆ ಸೇರಿಸಿದರು. ನಂತರ ಅವನ ತಂದೆ ತಾಯಿಯರನ್ನು ಕರೆಸಿ ಬುದ್ದಿವಾದ ಹೇಳಿಕಳುಹಿಸಿದರು. ಇವನೇ ಮುಂದೇ ಮಹಾರಾಜ ಕಾಲೇಜಿನಲ್ಲಿ ಪ್ರಪ್ರಥಮ ಬಾರಿಗೆ ಬಿ.ಎ. ಪದವಿ ಪಡೆದುಕೊಂಡು ತ್ರಿಮೂರ್ತಿಗಳ ಅಭಿಮಾನಕ್ಕೊ ಮತ್ತು ಹೆಮ್ಮೆಗೂ ಪಾತ್ರನಾದನು. ಈ ವಿಷಯ ತಿಳಿದ ಸೋಸಲೆಯ ಜನರೆಲ್ಲಾ ಸಂತೋಷಪಟ್ಟರಲ್ಲದೆ ಊರಿನ ಮುಖಂಡರು ಮತ್ತು ಹಿರಿಯರೆಲ್ಲ ಸೇರಿ ಈ ಹುಡುಗನಿಗೆ ಗೌರವ ಸನ್ಮಾನ ಮಾಡಿದರು. ಹಾಗೆ ಗೌರವ ಸನ್ಮಾನ ಪಡೆದ ಹುಡುಗನೇ ಮುಂದೆ ಕೇರಳದ ರಾಜ್ಯಪಾಲರಾಗಿ ಆಡಳಿತ ನಡೆಸಿದರು. ಅವರೇ ಶ್ರೀಯುತ ಬಿ. ರಾಚಯ್ಯನವರು.

೧೯೧೫-೧೬ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ೧೭೭ ಸರ್ಕಾರಿ ಶಾಲೆಗಳು ೧೦೮ ಅನುದಾನಿತ ಶಾಲೆಗಳು ಮತ್ತು ೮೮ ಅನುದಾನರಹಿತ ಶಾಲೆಗಳನ್ನು ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ದಿವಾನರಾಗಿದ್ದ ವಿಶ್ವೇಶ್ವರಯ್ಯನವರ ಆಡಳಿತ ಕಾಲದಲ್ಲಿ ತೆರೆಯಲಾಯಿತು. ಹಾಗೂ ಮೈಸೂರು ತುಮಕೂರು ಮತ್ತು ಚಿಕ್ಕಮಗಳೂರುಗಳಲ್ಲಿ ಪಂಚಮ ವಿದ್ಯಾರ್ಥಿಗಳಿಗಾಗಿ ಸರ್ಕಾರ ವಸತಿ ಶಾಲೆಗಳನ್ನು ಪ್ರಾರಂಭಿಸಿತು. ಅಲ್ಲದೆ ಪಂಚಮ ವಿದ್ಯಾರ್ಥಿಗಳಿಗಾಗಿ ಶಿಕ್ಷಣದ ಅವಕಾಶವನ್ನು ಹೆಚ್ಚಿಸುವ ಕ್ರಮವನ್ನು ಅಯ್ಯರ್‌ರವರು ನೇತೃತ್ವದಲ್ಲಿ ನಾಲ್ವಡಿಯವರು ಕೈಗೊಂಡರು".[*] ಹೀಗೆ ಪ್ರಾರಂಭಗೊಂಡ ಪಂಚಮ ಶಾಲೆಗಳಲ್ಲಿಯೂ ಅದರಲ್ಲೂ ಅವರ ಶಿಕ್ಷಣದ ಬಗ್ಗೆ ಅಯ್ಯರ್‌ರವರು ಯುವರಾಜರಾದ ಕಂಠೀರವ ನರಸಿಂಹರಾಜ ಒಡೆಯರಿಗೆ ಆ ದಿನದ ದಿನಚರಿಯನ್ನು ತಿಳಿಸ ಬೇಕಾಗಿತು. ಆದ್ದರಿಂದ ಅಯ್ಯರ್‌ರವರು ಯುವರಾಜರನ್ನು ಭೇಟಿ ಮಾಡಲು ಯಾವ ಅಡತಡೆಯೂ ಇರಲಿಲ್ಲ. ಅವರು ಎಲ್ಲಿ ಯಾವಾಗಬೇಕಾದರೂ ಯುವರಾಜರನ್ನು ಭೇಟಿ ಮಾಡುವ ವಿಶೇಷ ಅಧಿಕಾರವನ್ನು ಹೊಂದಿದ್ದರು. ಇದರಿಂದ ಪ್ರಭಾವಿತರಾಗಿದ್ದ ಅಯ್ಯರ್ ಪಂಚಮರ ಶೈಕ್ಷಣಿಕ ಪ್ರಗತಿಗೋಸ್ಕರ ದಿನಕ್ಕೆ ೧೮ ಗಂಟೆಗಳನ್ನು ಮೀಸಲಿರಿಸಿದ್ದರೆಂದು ಡಾ. ಜಿ.ಗೋಪಾಲ ಅವರು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ತಿಳಿಸಿರುತ್ತಾರೆ. ಈ ಮೇಲಿನ ವಾಕ್ಯವನ್ನು ಗಮನಿಸಿದಾಗ ಯುವರಾಜರು ಮತ್ತು ನಾಲ್ವಡಿಯವರು ಪಂಚಮರ ಮೇಲಿಟ್ಟಿದ ಕಾಳಜಿ ಅವರು ಕೈಗೊಂಡ ಕಾರ್ಯಕ್ರಮಗಳು ಮತ್ತು ಅಯ್ಯರ್‌ರವರ ಮೇಲೆ ಇಟ್ಟಿದ ಪ್ರೀತಿ ಮತ್ತು ನಂಬಿಕೆ ಮನದಟ್ಟಾಗುತ್ತದೆ. ಇವರುಗಳ ಪ್ರೇರಣೆಯಿಂದಲೇ ಮುಂದೆ ಮೈಸೂರು ಸಂಸ್ಥಾನದಲ್ಲಿ ಪಂಚಮರು ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವುದಕ್ಕೆ ಸಾಧ್ಯವಾಯಿತೆನ್ನಬಹುದು.

**ನಂಜನಗೂಡಿನ ಘಟನೆ**

ಅಯ್ಯರ್ ಪಂಚಮ ಹುಡುಗರಿಗಾಗಿ ಒಂದು ದಿನ ಮೈಸೂರು ಜಿಲ್ಲೆಯ ನಂಜನಗೂಡಿಗೆ ಭೇಟಿ ನೀಡಿದರು. ಇಲ್ಲಿ ಪಂಚಮರು ಒಂದೇ ಕಡೆ ವಾಸವಾಗಿರದೆ ಅಲ್ಲಲ್ಲಿ ಜೌಗು ಪ್ರದೇಶದಲ್ಲಿ ತಿಪ್ಪೆಹಳ್ಳಗಳ ಹತ್ತಿರ ಓಣಿಗಳಲ್ಲಿ ವಾಸವಾಗಿದ್ದರು. ಇವರೆಲ್ಲರನ್ನು ಒಂದು ಕಡೆ ಸೇರಿಸಿ ಶಿಕ್ಷಣದ ಮಹತ್ವ ಮತ್ತು ತಾವು ಬಂದ ವಿಷಯವನ್ನು ಹೇಳಿ ತಮ್ಮ ಮಾತು ಮುಗಿಸುವ ವೇಳೆಗೆ ಸಂಜೆಯಾಯಿತು. ಆದ್ದರಿಂದ ಆ ದಿನ ನಂಜನಗೂಡಿನಲ್ಲೆ ತಂಗಬೇಕಾಯಿತು. ಆ ದಿನದ ರಾತ್ರಿ ಎಲ್ಲಿ ಕಳೆಯುವುದೆಂದು ವಿಚಾರ ಮಾಡಿಯಾದ ನಂತರ ಬ್ರಾಹ್ಮಣರ ಕೇರಿಗೆ ಹೋದರು. ವಿಷಯ ತಿಳಿದ ಬ್ರಾಹ್ಮಣರು ಎಲ್ಲಾರು ಒಟ್ಟಾಗಿ ಸೇರಿ ಕೊಪೋದ್ರಿಕ್ತರಾಗಿ "ಹೊಲೆರ ಗೋಪಾಲಸ್ವಾಮಿಯನ್ನು ಓಡಿಸಿ ಅವನನ್ನು ನಮ್ಮ ಕೇರಿಯೊಳಗೆ ಸೇರಿಸಬೇಡಿ" ಎಂದು ಹೇಳುತ್ತಾ ಅವರನ್ನು ತಮ್ಮ ಕೇರಿಯಿಂದ ಹೊರಹಾಕಿದರು. ಅಸ್ಪೃಶ್ಯರ ಕೇರಿಗಳು ಹೀಗಿವೆ ಎಂಬುದನ್ನು ಕನಸ್ಸಿನಲ್ಲೂ ಕಾಣದ ಬ್ರಾಹ್ಮಣರು ಅವರ ಕೇರಿಗಳಿಗೆ ಹೋಗಿ ಬಂದ ಅಯ್ಯರ್‌ರವರನ್ನು ಹೇಗೆ ತಾನೇ ಸೇರಿಸಿಕೊಂಡಾರು? ಸರ್ವಣೀಯರ ಈ ಘಟನೆಯಿಂದ ಕಿಂಚಿತು ದುಃಖಿಸದಾ ಅಯ್ಯರ್ ಅಲ್ಲಿದ್ದ ನಾಲ್ಕಾರು ಅನುಯಾಯಿ ಗಳೊಡನೆ ಪಂಚಮರ ಕೇರಿಗೆ ಹೊಂದಿಕೊಂಡಂತ್ತಿದ್ದ ಆಲದ ಮರದ ಕೆಳಗಿದ್ದ ಹುಲ್ಲಿನ ಮೆದೆಯ ಪಕ್ಕದಲ್ಲಿ ಕುಳಿತು ಪಂಚಮರ (ಹುಚ್ಚಯ್ಯ) ಮನೆಯಿಂದ ತಂದುಕೊಟ್ಟ ಬೆಲ್ಲ ಹಾಕಿದ ಹಾಲನ್ನು ಕುಡಿದು ಆ ರಾತ್ರಿಯನ್ನು ಕಳೆದರು. ಸವರ್ಣೀಯರ ಈ ವರ್ತನೆಯು ಅಯ್ಯರ್‌ರವರ ಮನಸ್ಸಿನ ಮೇಲೆ ಪರಿಣಾಮ ಬೀರಿರಬಹುದು. ಆದರೂ ತಮ್ಮ ಸೇವಾನಿರತ ಧೃಡ ಮನಸ್ಸಿನಿಂದಾಗಿ ಅಂದಿನಿಂದ ತಮ್ಮ ತನುಮನವನ್ನು ಪಂಚಮರಿಗಾಗಿ ಮುಡುಪಾಗಿಟ್ಟಿದ್ದು ಮತ್ತೊಂದು ಮೈಲಿಗಲ್ಲಾಗಿದೆ.

ಹಳ್ಳಿಯಿಂದ ಕರೆದುತಂದ ಪಂಚಮ ಹುಡುಗರನ್ನು ಸರ್ಕಾರಿ ಅಥವಾ ಖಾಸಗಿ ಶಾಲೆಗಳಿಗೆ ಸೇರಿಸಿ ವಿದ್ಯೆ ಕಲಿಯುವ ಅವಕಾಶವನ್ನು ಮಾಡಿಕೊಟ್ಟರು. ಆದರೆ ಶಾಲೆಗಳಲ್ಲಿ ಇತರೆ ಸವರ್ಣಿಯರೊಂದಿಗೆ ವಿದ್ಯೆ ಕಲಿಯಲು ಸಾಕಷ್ಟು ಸಾಮಾಜಿಕ ಪ್ರತಿರೋಧವಿತ್ತು. ಹೀಗೆ ವಿರೋಧಿಸುತ್ತಿದ್ದವರಲ್ಲಿ ಎಲ್ಲಾ ಸವರ್ಣಿಯ ಜಾತಿಯವರು ಸೇರಿರುತ್ತಿದ್ದರು. ಅದರಲ್ಲಿಯೂ ಬ್ರಾಹ್ಮಣ ವಿಶೇಷವಾಗಿ ಅಸ್ಪೃಶ್ಯರೊಂದಿಗೆ ತಮ್ಮ ಮಕ್ಕಳು ವ್ಯಾಸಂಗ ಮಾಡುವುದನ್ನು ಸಹಿಸುತ್ತಿರಲಿಲ್ಲ. ಅವರ ಈ ಮನೋಭಾವನಿಗೆ ಶತಮಾನದಿಂದಲೂ ಅವರು ಬೆಳೆಸಿಕೊಂಡು ಬಂದಿದ್ದ ಪ್ರತ್ಯೇಕ ಸಾಂಸ್ಕೃತಿಕ ಆವರಣ ಮತ್ತು ಪಂಚಮರ ಬಗ್ಗೆ ಸಮಾಜ ಹೊಂದಿದ್ದ ಕೀಳು ಭಾವನೆಗಳು ಕಾರಣವಾಗಿದ್ದವು. ಈ ವಿಷಯವನ್ನು ಅಂದಿನ ದಿವಾನರಾಗಿದ್ದ ವಿಶ್ವೇಶ್ವರಯ್ಯನವರ ಬಳಿ ಅಯ್ಯರ್‌ರವರು ಪ್ರಸ್ತಾಪಿಸಲಾಗಿ ಅಸ್ಪೃಶ್ಯರ ಏಳಿಗೆಯ ಬಗ್ಗೆ ಕಳಕಳಿ ಹೊಂದಿದ್ದ ದಿವಾನರು ೧೯೧೫ರಲ್ಲಿ ಸರ್ಕಾರಿ ಶಾಲೆಗಳಲ್ಲಿ ವಿದ್ಯೆ ಕಲಿಯುವುದಕ್ಕೆ ಯಾವುದೇ ಜಾತಿಯ ನಿರ್ಬಂಧವಿರಕೂಡದೆಂದು ಸುತ್ತೋಲೆಯನ್ನು ಹೊರಡಿಸಿದರು.[೬] ಇದು ಅಯ್ಯರ್‌ರವರಿಗೆ ಪಂಚಮ ಪಂಚಮರ ಮೇಲಿದ್ದ ಕಾಳಜಿ ಮತ್ತು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರಬೇಕೆಂಬ ಹಂಬಲದ ಜೊತೆಗೆ ಮೈಸೂರು ಸರ್ಕಾರ ಅವರಿಗೆ ನೀಡಿದ ಎಲ್ಲ ಬಗೆಯ ಸಹಕಾರವು ಮತ್ತಷ್ಟು ಕಾರ್ಯಪ್ರವೃತ್ತರಾಗುವಂತೆ ಮಾಡಿತು.

ಹೀಗೆ ಹಳ್ಳಿ ಹಳ್ಳಿಯಿಂದ ಕರೆದುತಂದ ಹುಡುಗರನ್ನು ಪಂಚಮ ಬೋರ್ಡಿಂಗ್ ಹೊಂಗೆ

ಸೇರಿಸಿ ವಿದ್ಯಾಭ್ಯಾಸ ಕೊಡಿಸುತ್ತಿದ್ದ ಅಯ್ಯರ್ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಹುಡುಗರಿಗೆ "ನಿಮ್ಮಗೆಲ್ಲಾ ಪೌಂಟೆನ್ ಪೆನ್ನು (ಅಂದಿನ ಕಾಲಕ್ಕೆ ತುಂಬಾ ದುಭಾರಿಯಾದ ಈ ಲೇಖನಿಯನ್ನು ಇಂಗ್ಲೆಂಡ್‌ನಲ್ಲಿ ತಯಾರು ಮಾಡಲಾಗುತ್ತಿದ್ದು ಶ್ರೀಮಂತ ವರ್ಗದವರು ಬಳಸುತ್ತಿದ್ದರು.) ಕೊಡಿಸುತ್ತೇನೆ. ಓದಲು ಪುಸ್ತಕ ಬಟ್ಟೆ ಎಲ್ಲಾ ಕೊಡಿಸುತ್ತೇನೆ ತರಗತಿಯಲ್ಲಿ ಎಲ್ಲರಿಗಿಂತಲೂ ಹೆಚ್ಚು ಅಂಕಗಳನ್ನು ತೆಗೆಯಬೇಕು ಎಂದು ಪ್ರೋತ್ಸಾಹಿಸುತ್ತಿದ್ದರು. ಪಂಚಮ ಹುಡುಗರನ್ನು ನಮ್ಮ ಹುಡುಗರು ನಮ್ಮವರು ನಮ್ಮ ಹಾಸ್ಟಲ್" ಎಂದು ಯಾವಾಗಲೂ ಹೇಳುತ್ತಿದ್ದರು. ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪ ಮಾಡಿರುವಂತೆ ಇವರಿಗೆ ಮಕ್ಕಳಿಲ್ಲದ ಕಾರಣ ಎಲ್ಲವೂ ಪಂಚಮ ಹುಡುಗರೇ ಆಗಿದ್ದರಿಂದ ಈ ಪದವನ್ನು ಬಳಸಿರಬಹುದು. ಹಾಗೆಯೇ ನೀವು ಅಸ್ಪೃಶ್ಯರೆಂದು ಡಂಗೂರ ಹಾಕಬೇಡಿ ವಿದ್ಯಾವಂತರಾಗಿ ಧೈರ್ಯದಿಂದ ತಲೆಯೆತ್ತಿ ನಡೆಯಿರಿ. ಸರ್ಕಾರದಲ್ಲಿ ಅಧಿಕಾರವನ್ನು ಪಡೆಯಿರಿ ನೆರೆಹೊರೆಯವರಂತೆ ಬದುಕುವುದನ್ನು ಕಲಿಯಿರಿ. ಇದೆಲ್ಲವು ಸಾಧ್ಯವಾಗಬೇಕಾದರೆ ಮೊದಲು ಉನ್ನತ ಶಿಕ್ಷಣ ಪಡೆಯಿರಿ ಆಗ ತಾನಾಗಿಯೇ ಅಸ್ಪೃಶ್ಯತೆಯು ಮಾಯವಾಗುತ್ತದೆ"[೭] ಎಂದು ಆಗ್ಗಾಗ್ಗೆ ಧೈರ್ಯ ಹೇಳುತ್ತಿದ್ದರು. ಈ ಮೇಲಿನ ಮಾತನ್ನು ಗಮನಿಸಿದರೆ ಅವರಲ್ಲಿ ಪಂಚಮರ ಬಗ್ಗೆ ಇದ್ದ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಅಲ್ಲದೆ ಯಾವ ಒಬ್ಬ ಬ್ರಾಹ್ಮಣನೂ ಮತ್ತು ದಲಿತೇತರರು ಎನಿಸಿಕೊಂಡವರು ಬರಿ ಬಾಯಿಮಾತಿಗೂ ದಲಿತ ಹುಡುಗನನ್ನು ನಮ್ಮ ಹುಡುಗ ಎಂದು ಕರೆಯಲು ಹಿಂದುಮುಂದು ನೋಡುವ ಇಂದಿನ ಸಂದರ್ಭದಲ್ಲಿ ಸ್ವತಂತ್ರಪೂರ್ವದಲ್ಲಿಯೇ ಅದರಲ್ಲಿಯೂ ಗಾಂಧೀಜಿಯವರು ಈ ಜನಾಂಗವನ್ನು 'ಹರಿಜನರು' ಎಂದು ಕರೆದರೆ ಅಯ್ಯರ್‌ರವರು ಪಂಚಮ ಜನಾಂಗದವರನ್ನು ನಮ್ಮ ಜನ ನಮ್ಮ ಹುಡುಗರು ಎಂದು ಕರೆದು ಔದರ್ಯ ಮೆರೆದಿರುವುದು ನಿಜವಾಗಿಯೂ ಪ್ರಶಂಸನೀಯ.

**ನರಸಿಂಹರಾಜ ವಿದ್ಯಾರ್ಥಿನಿಲಯದ ಸ್ಥಾಪನೆ**

೧೯೨೩ರಲ್ಲಿ ಅಯ್ಯರ್‌ರವರು ಬೆಂಗಳೂರಿನಲ್ಲಿ ೧೨ ಜನ ವಿದ್ಯಾರ್ಥಿಗಳಿಗಾಗಿ ಯುವರಾಜರ ಒಪ್ಪಿಗೆ ಪಡೆದು ಪಂಚಮ ಬೋರ್ಡಿಂಗ್ ಹೋಂ ಅನ್ನು ಸ್ಥಾಪಿಸಿದರು.[೮] ಈ ವಿದ್ಯಾರ್ಥಿನಿಲಯವನ್ನು ಇಂದು ನರಸಿಂಹರಾಜ ಹಾಸ್ಟಲ್ ಎಂದು ಕರೆಯಲಾಗುತ್ತಿದೆ. ಈ ವಿದ್ಯಾರ್ಥಿನಿಲಯ ಇಂದಿನ ಡೈರಕ್ಟರೇಟ್ ಆಫ್ ಹೆಲ್ತ್ ಸರ್ವಿಸಸ್ ಇವರು ಆನಂದರಾವ್ ಸರ್ಕಲ್‌ನಲ್ಲಿತ್ತು. ಈಗ ವಿದ್ಯಾರ್ಥಿ ನಿಲಯವನ್ನು ಚಾಮರಾಜಪೇಟೆಯಲ್ಲಿರುವ ಟಿಪ್ಪು ಅರಮನೆಯ ಪಕ್ಕಕ್ಕೆ ವರ್ಗಾಯಿಸಲಾಗಿದೆ. ಹಿಂದೆ ಈ ಸ್ಥಳವು ಕುದುರೆಗಳ ಲಾಯವಾಗಿತ್ತು. ಇದ್ದ ಮೂರು ಲಾಯಗಳನ್ನೇ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ಒಂದೊಂದು ಲಾಯದಲ್ಲಿ ೧೮ ರಿಂದ ೨೦ ವಿದ್ಯಾರ್ಥಿಗಳು ಇರುವ ಹಾಗೇ ಮಾರ್ಪಾಡಿಸಲಾಗಿತು. ಇದು ಸಹ ಎಲ್ಲಾ ಬೋರ್ಡಿಂಗ್ ಹೋಂಗಳಂತೆ ಉಚಿತ ವಿದ್ಯಾರ್ಥಿನಿಲಯವಾಗಿದ್ದು ೬೦ ರಿಂದ ೮೦ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಿಕೊಡಲಾಯಿತು. ಆದರೆ ವಿದ್ಯಾರ್ಥಿ ನಿಲಯದಲ್ಲಿ ಅಡುಗೆ ಮಾಡಲು ಯಾರು ಮುಂದೆಬರಲಿಲ್ಲ. ಇಲ್ಲಿಯೂ ಸಹ ಅಸ್ಪೃಶ್ಯತೆ ಎಂಬುದು ಮನೆ ಮಾಡಿತ್ತು. ಕೊನೆಗೆ ನೆಲಮಂಗಲದ ಒಕ್ಕಲಿಗರಿಬ್ಬರು ಮುಂದೆ ಬಂದರು. ಆದರೆ ನೆಲಮಂಗಲದ ಒಕ್ಕಲಿಗರು ಅವರನ್ನು ಜಾತಿಯಿಂದ ಹೊರಹಾಕಿದರು. ಕೊನೆಗೆ ಕೇರಳದ ಇಬ್ಬರು ನಾಯರ್‌ಗಳನ್ನು

ಕೆಲಸಕ್ಕೆ ಒಪ್ಪಿಸಬೇಕಾದ ಸಂದರ್ಭ ಅಯ್ಯರ್‌ರವರಿಗೆ ಎದುರಾಯಿತು. ಪ್ರತಿಯೊಬ್ಬ ವಿದ್ಯಾರ್ಥಿಗೂ ಒಂದು ರೂಪಾಯಿಯನ್ನು ಇತರ ಖರ್ಚಿಗಾಗಿ ಕೊಡಲಾಗುತ್ತಿತ್ತು. ಈ ವಿದ್ಯಾರ್ಥಿನಿಲಯದಲ್ಲಿ ಶಿಕ್ಷಣ ಪಡೆದ ಪ್ರಥಮ ವಿದ್ಯಾರ್ಥಿಗಳಲ್ಲಿ ಕೊರಟಗೆರೆಯ ಚಿಕ್ಕಹನುಮಂತಯ್ಯನವರು ಸಹ ಒಬ್ಬರು. ಹೀಗೆ ನಡೆದು ಬಂದ ಈ ವಿದ್ಯಾರ್ಥಿನಿಲಯದ ಹೆಸರನ್ನು ಬದಲಾಯಿಸಬೇಕೆಂದು ಅಯ್ಯರ್ ಮನದಲ್ಲಿ ಕೊರೆಯುತ್ತಿತ್ತು. ಪಂಚಮ ಎಂಬ ಪದವನ್ನು ಬಳಸಲು ಅಸಹ್ಯಪಡುತ್ತಿದ್ದ ಸವರ್ಣೀಯರು ಪಂಚಮರ ಬೋರ್ಡಿಂಗ್ ಹೋಂನಲ್ಲಿ ಓದುತ್ತಿದ್ದ ವಿದ್ಯಾರ್ಥಿಯನ್ನು ಯಾವ ಬಗೆಯಲ್ಲಿ ನಡೆಸಿಕೊಳ್ಳ ಬಹುದೆಂಬ ಕಾರಣಕ್ಕಾಗಿಯೋ ಅಥವಾ ಈಗಾಗಲೆ ಪಂಚಮ ಎಂಬ ಪದದಿಂದಾದ ಅನುಭವ ದಿಂದಾಗಿಯೋ ವಿದ್ಯಾರ್ಥಿನಿಲಯಕ್ಕೆ ಬೇರೆ ಹೆಸರಿಡಲು ಮುಂದಾಗಿರಬಹುದು. ಹಾಗೂ ಪಂಚಮ ಎಂಬ ಪದದಿಂದ ಮುಂದಾಗುವ ಅನಾಹುತಗಳನ್ನು ತಡೆಗಟ್ಟಲೊ ಆ ಪದದ ಬಳಕೆಯನ್ನು ಕಿತ್ತೋಗೆಯಲೋ ಈ ದಿಶೆಯಲ್ಲಿ ಚಿಂತಿಸಿರಬಹುದು. ತಮ್ಮ ಮನಸ್ಸಿನಲ್ಲಿ ಮೂಡಿದ ಈ ವಿಷಯವನ್ನು ಅಧಿಕಾರಿಯಾಗಿದ್ದ ಕೆ.ಎಚ್. ರಾಮಯ್ಯನವರ ಹತ್ತಿರ ಪ್ರಸ್ತಾಪಿಸಿದರು. ಆದರೆ ಸವರ್ಣಿಯರಾದ ಇವರು ಪ್ರತಿರೋಧ ವ್ಯಕ್ತಪಡಿಸಿದರು. ಇದನ್ನು ಒಂದು ಸವಾಲಾಗಿ ತೆಗೆದುಕೊಂಡ ಅಯ್ಯರ್ ಸೈಕಲ್‌ನಲ್ಲಿ ಅರಮನೆಗೆ ಬಂದು ವಿಶೇಷ ಅಧಿಕಾರವನ್ನು ಹೊಂದಿದ್ದರಿಂದ ಯುವರಾಜರನ್ನು ಭೇಟಿ ಮಾಡಿದರು.

ಯುವರಾಜರಾದ ಕಂಠೀರವ ನರಸಿಂಹರಾಜ ಒಡೆಯರು ಎಂದಿನಂತೆ ಏನು ಗೋಪಾಲಸ್ವಾಮಿ ಎಂದು ಬಂದ ವಿಷಯವನ್ನು ಕೇಳಿದರು. ಅಯ್ಯರ್ ತಮ್ಮ ಮನದಾಳದ ವಿಷಯವನ್ನೆಲ್ಲ ಅವರ ಮುಂದಿಟ್ಟು ಸರ್ಕಾರದ (ಹುಕ್ಕುಂ) ಅನುದಾನ ಯಾವಾಗಲಾದ'ರೂ ಬರಲಿ ಅದರ ಬಗ್ಗೆ ಚಿಂತೆಯಿಲ್ಲ. ತಮ್ಮ ಅನುಮತಿ ನೀಡಿದರೆ ನಮ್ಮ ಹಾಸ್ಟಲ್ ಆದ ಪಂಚಮರ ಬೋರ್ಡಿಂಗ್ ಹೋಂಗೆ ತಮ್ಮ ಹೆಸರನ್ನಿಡುತ್ತೇನೆ ಎಂದು ವಿನಂತಿಸಿಕೊಳ್ಳುವುದರ ಜೊತೆಗೆ ಚರ್ಚೆ ನಡೆಸಿದರು. ಶ್ರೀ ಮಧ್ಯುವರಾಜರು ಪಂಚಮರ ಮೇಲಿನ ಕಾಳಜಿಯಿಂದಲೋ ಅಥವಾ ಗೋಪಾಲಸ್ವಾಮಿಯವರ ಮೇಲಿಟ್ಟಿದ್ದ ಅಭಿಮಾನ ದಿಂದಲೋ ತಮ್ಮ ಒಪ್ಪಿಗೆಯನ್ನು ನೀಡಿದರು. ಇದರಿಂದ ಹರ್ಷಭರಿತರಾದ ಅಯ್ಯರ್ ಅದೇ ದಿನ ಸಾಯಂಕಾಲ ಡೈರಕ್ಟರ್ ಆಫ್ ಪಬ್ಲಿಕ್ ಇಸ್ಟ್ರಕ್ಷನ್‌ರನ್ನು ಭೇಟಿ ಮಾಡಿ ವಿಷಯವನ್ನೆಲ್ಲ ತಿಳಿಸಿದರು. ಅದೇ ಸಂಜೆ ಸರ್ಕಾರದಿಂದ ಆಜ್ಞೆಯನ್ನು ಹೊರಡಿಸಿ ಸ್ವತಃ ಪ್ರತಿಯೊಂದನ್ನು ತೆಗೆದುಕೊಂಡು ನಂತರ ಕಮಾನಿನಾಕಾರದಲ್ಲಿ ಕಬ್ಬಿಣದಿಂದ 'ಶ್ರೀ ನರಸಿಂಹರಾಜ ಹಾಸ್ಟಲ್' ಎಂದು ನಾಮಫಲಕವನ್ನು ತಯಾರು ಮಾಡಿಸಿ ಮರುದಿನವೇ ಅಂದರೆ ಫೆಬ್ರವರಿ ೨೧, ೧೯೨೨ರಂದು ಉದ್ಘಾಟನ ಸಮಾರಂಭ ವೇರ್ಪಡಿಸಿ ಯುವರಾಜರಿಂದ ಉದ್ಘಾಟನೆಯನೆ ಮಾಡಿಸಿದರು. ಇಲ್ಲಿ ಅಯ್ಯರ್‌ರವರು ತೆಗೆದುಕೊಂಡ ದೃಢನಿರ್ಧಾರ ಮತ್ತು ಅವರ ಕಾರ್ಯಧಕ್ಷತೆ ಹಾಗೂ ಅವರ ಎಲ್ಲಾ ಪಂಚಮ ಕಾರ್ಯಗಳಿಗೂ ಯುವರಾಜರು ನೀಡಿದ ಪ್ರೋತ್ಸಾಹ ಗಮನಾರ್ಹವಾದುದು.

ಯುವರಾಜರೇ ನರಸಿಂಹರಾಜ ವಿದ್ಯಾರ್ಥಿನಿಲಯದ ಪೋಷಕರಾಗಿದ್ದರಿಂದ ಒಂದು ಸಮಿತಿ ಯನ್ನು ರಚಿಸಿದರು. ಈ ಸಮಿತಿಯಲ್ಲಿ ನ್ಯಾಯವಾದಿ ಕೆ. ಶಂಕರನಾರಾಯಣರಾವ್ ಅಧ್ಯಕ್ಷರಾಗಿಯೂ ಕೆ.ಎಚ್. ರಾಮಯ್ಯ ಕೆ. ರಾಮಚಂದ್ರರಾವ್ ಶಿಂಧೆ ಬಿ. ಪುಟ್ಟಯ್ಯ ಪಿ. ಮುರುಗೇಶನ್‌ಪಿಳ್ಳೆ ಮತ್ತು ಶೇಷಾದ್ರಿಯವರು ಕಾರ್ಯದರ್ಶಿಯಾಗಿಯೂ ಕಾರ್ಯನಿರ್ವಹಿಸಿದರು. ಹಾಗಾಗಿ ಇವರೆಲ್ಲರೂ ಚರ್ಚಿಸಿ

ನರಸಿಂಹಾರಜ ವಿದ್ಯಾರ್ಥಿನಿಲಯಕ್ಕೆ ಅದೇ ವರ್ಷ ಅಂದರೆ ಮೇ ಮಾಹೆಯ ೧೯೨೭ರಲ್ಲಿ ಸರ್ಕಾರದಿಂದ ಅನುದಾನ ದೊರೆಯುವಂತೆ ಮಾಡಿದರು. ಇದರಿಂದ ಹರ್ಷಿತರಾದ ಯುವರಾಜರು ಪಂಚಮ ವಿದ್ಯಾರ್ಥಿಗಳೊಂದಿಗೆ ಫೋಟೋ ತೆಗೆಸಿಕೊಂಡರು. ಇವರೆಲ್ಲರ ಹಿನ್ನೆಲೆಯಲ್ಲಿ ನಿಂತು ಸಮರ್ಪಕವಾಗಿ ಕಾರ್ಯನಿರ್ವಹಿಸಿದವರೆಂದರೆ ಆರ್. ಗೋಪಾಲಸ್ವಾಮಿ ಅಯ್ಯರ್.

**ಸ್ಕೌಟ್ ಆಂಡ್ ಗೈಡ್ ಸ್ಥಾಪನೆ**

ಹಿಂದಿನ ಮತ್ತು ಇಂದಿನ ಶಿಕ್ಷಣ ಪದ್ಧತಿಯಲ್ಲಿ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಲ್ಲಿ ಕ್ರಿಯಾಶೀಲತೆಯನ್ನಾಗಲಿ ಓದುವ ಉತ್ಸಾಹವನ್ನಾಗಲಿ ರಾಷ್ಟ್ರೀಯ ಐಕ್ಯತೆ ಮತ್ತು ಮನೋಭಾವನೆ ಮೂಡಿಸುವಂಥ ಹಾಗೂ ಸಮಾಜದಲ್ಲಿತಾಂಡವವಾಡುತ್ತಿರುವ ಅನಿಷವಿ ಪದ್ಧತಿಗಳ ನಿರ್ಮೂಲನೆ ಮಾಡುವಂತಹ ಶಿಕ್ಷಣ ನೀಡಲಿಲ್ಲ ಮತ್ತು ನೀಡುತ್ತಿಲ್ಲ. ಕೇವಲ ಧರ್ಮಧಾರಿತ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಲಾಗಿತ್ತು ಎಂದೇ ಹೇಳಬಹುದು. ಆದರೆ ಸ್ವತಂತ್ರ ಪೂರ್ವದಲ್ಲೇ ಅಯ್ಯರ್‌ರವರು ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸುವ ಮತ್ತು ಆ ಮೂಲಕ ವಿದ್ಯಾರ್ಥಿಗಳಲ್ಲಿ ವಿಶಾಲ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ಮತ್ತು ಕ್ರೀಡಾಸಕ್ತಿಯನ್ನುಂಟು ಮಾಡುವ ಸಲುವಾಗಿ ತಾವು ಸ್ಥಾಪಿಸಿದ ನರಸಿಂಹರಾಜ ಹಾಸ್ಟಲ್‌ನಲ್ಲಿ ಸ್ಕೌಟ್ ಆಂಡ್ ಗೈಡ್‌ನ್ನು ಸ್ಥಾಪಿಸಿದರು. ಬೆಂಗಳೂರು ನಗರದಲ್ಲಿ ಸ್ಕೌಟ್ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದ ಜಗದೀಶ್ ಬಿ. ಕೃಷ್ಣರಾವ್ ಮತ್ತು ವೆಂಕಣ್ಣ ಭಟ್ಟರನ್ನು ಕರೆದು ತಂದು ವಿದ್ಯಾರ್ಥಿಗಳಿಗೆ ಶಿಸ್ತು ಸ್ವಚ್ಛತೆಯ ಬಗ್ಗೆ ತಿಳಿಸಿಕೊಡುತ್ತಿದ್ದರು. ಈ ಬಗೆಯ ಉಧಾರ ಮನೋಭಾವನೆ ಅಂದಿನ ಯಾವ ಒಬ್ಬ ಸಮಾಜ ಸುಧಾರಕರೆನಿಸಿಕೊಂಡವರಲ್ಲಿ ಕಾಣಲು ಸಾಧ್ಯವಿಲ್ಲವೆಂದು ಹೇಳಬಹುದು. ಅಯ್ಯರ್‌ರವರು ವೆಂಕಣ್ಣಭಟ್ಟರನ್ನು ಪಂಚಮ ವಿದ್ಯರ್ಥಿ ಗಳಿಗೆ ಸಂಸ್ಕೃತವನ್ನು ಕಲಿಸಿಕೊಡುವಂತೆ ಕೇಳಿಕೊಂಡಾಗ ಅದನ್ನು ಮನಪೂರಕವಾಗಿ ಒಪ್ಪಿದರು. ಕೆಲವು ಬುದ್ಧಿವಂತ ಪಂಚಮ ವಿದ್ಯಾರ್ಥಿಗಳಿಗೆ ಸಂಸ್ಕೃತ ಅಭ್ಯಾಸ ಮಾಡುವಂತೆ ಪ್ರೋತ್ಸಾಹ ನೀಡುವುದರ ಜೊತೆಗೆ ಕಲಿಸಿಕೊಟ್ಟರು. ಇದರ ಜೊತೆಗೆ ಬೆಳಗಿನ ವೇಳೆಯಲ್ಲಿ "ಗುರುಬ್ರಹ್ಮ, ಗುರುವಿಷ್ಣು ಮಹೇಶ್ವರ...." ಎಂಬ ಪ್ರಾರ್ಥನೆಯನ್ನು ಸಹ ಹೇಳಿಕೊಟ್ಟರು. ಯಾವ ಜನಾಂಗ ಸಂಸ್ಕೃತವನ್ನು ಕೇಳುವುದಾಗಲಿ ಓದುವುದಾಗಲಿ ಮಾಡಿದರೆ ಕಾದ ಕಬ್ಬಿಣದ ಸೀಸವನ್ನು ಕಿವಿಗೆ ಬಿಡಲಾಗುತ್ತಿತ್ತು ಅದೇ ಜನಾಂಗಕ್ಕೆ ಶ್ರೀಯುತರು ಪ್ರಥಮ ಬಾರಿಗೆ ಸಂಸ್ಕೃತವನ್ನು ಕಲಿಸಿಕೊಟ್ಟರು. ಹೀಗೆ ಅವರು ಕೊಟ್ಟ ಸಲಹೆ ಮತ್ತು ಪ್ರೋತ್ಸಾಹಗಳಿಂದ ಸಂಸ್ಕೃತವನ್ನು ಕಲಿತವರಲ್ಲಿ ಆರ್. ಭರಣಯ್ಯ ಮತ್ತು ಟಿ. ಚೌಡಯ್ಯನವರು ಪ್ರಮುಖರು. ಅಲ್ಲದೇ ಪಂಚಮ ವಿದ್ಯಾರ್ಥಿಗಳನ್ನು ಸಸ್ಯಹಾರಿಗಳನ್ನಾಗಿ ಪರಿವರ್ತಿಸುವಲ್ಲಿ ಮುಖ್ಯ ಉದ್ದೇಶವನ್ನು ಹೊಂದಿದ್ದರು. ಕಂದಾಯ ಇಲಾಖೆಯಲ್ಲಿ ಗುಮಾಸ್ತರಾಗಿ ಕಾರ್ಯನಿರ್ವಹಿಸುತ್ತಿದ್ದ ವೆಂಕಣ್ಣಭಟ್ಟರು ಪಂಚಮರ ಏಳಿಗೆಯಲ್ಲಿ ಪಾಲ್ಗೊಂಡು ನಿಷ್ಠೆಯಿಂದ ಮಾಡುತ್ತಿದ್ದ ಇವರ ಸೇವೆಯನ್ನು ಸಹಿಸದ ಅಂದಿನ ಕಂದಾಯ ಇಲಾಖೆಯ ಆಯುಕ್ತರಾಗಿದ್ದ ಜೆ. ಅಪ್ಪಾಜಿಗೌಡರು ವೆಂಕಣ್ಣಭಟ್ಟರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟರು. ಆದರೂ ಧೈರ್ಯಗೆಡದ ವೆಂಕಣ್ಣಭಟ್ಟರು ತಮ್ಮ ನಿಸ್ವಾರ್ಥ ಸೇವೆಯನ್ನು ಮುಂದುವರೆಸಿ ಸ್ಕೌಟ್ ತರಬೇತಿ ಶಿಬಿರದಲ್ಲಿ ಪಂಚಮ ವಿದ್ಯಾರ್ಥಿಗಳೇ ಸವರ್ಣಿಯರಿಗೆ ಊಟ ಬಡಿಸುವಂತೆ ಮಾಡಿ ಸಹಭೋಜನವನ್ನು

ಏರ್ಪಡಿಸಿದರು. ವಿದ್ಯಾರ್ಥಿಗಳ ವಿಶಾಲ ಮನೋಭಾವನೆ ಬೆಳೆಸಿಕೊಳ್ಳುವಂತೆ ಬೋಧನೆ ಮಾಡುತ್ತಿದ್ದರು. ಹೀಗೆ ಅವರು ಹೇಳಿಕೊಟ್ಟ ಸ್ಕೌಟ್ ತರಬೇತಿಯಲ್ಲಿ ಪ್ರಥಮ ದರ್ಜೆಯ ಸ್ಕೌಟ್ ಆಗಿ ರಾಜಮನ್ನಣೆ ಪಡೆದರೆಂದರೆ ಉಪ ಆಯುಕ್ತರಾಗಿ ನಿವೃತ್ತಿ ಹೊಂದಿದ ಎಲ್. ಲಿಂಗಯ್ಯನವರು.

ಶಿಕ್ಷಣವು ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಸುಶಿಕ್ಷಿತ ಮತ್ತು ಉತ್ತಮ ಸಾಮಾಜಿಕ ಕಳಕಳಿಯನ್ನು ಹೊಂದಿದವನನ್ನಾಗಿ ಮಾಡುತ್ತದೆಯಲ್ಲದೆ ಜವಾಬ್ದಾರಿಯುತ ಎಚ್ಚರಿಕೆಯನ್ನುಂಟು ಮಾಡುತ್ತದೆ. ಅಂದರೆ ವ್ಯಕ್ತಿಯ ಜೀವಿತ ಕಾಲದಲ್ಲಿ ಉಂಟಾಗುವ ಎಲ್ಲಾ ಅವಸ್ಥೆಗಳೂ ಅಂತಸ್ತುಗಳೂ ಶಿಕ್ಷಣಕ್ಕೆ ಒಳಪಡುತ್ತವೆಂದು ಹೇಳಬಹುದು. ಅಲ್ಲದೆ ಶಿಕ್ಷಣವು ವ್ಯಕ್ತಿಗಳಲ್ಲಿ ಆತ್ಮಸ್ಥೈರ್ಯ ನಾಯಕತ್ವ ಮತ್ತು ಸ್ವಾಭಿಮಾನದ ಗುಣವನ್ನು ಬೆಳೆಸುತ್ತದೆ. ಈ ಹಿನ್ನೆಲೆಯಲ್ಲಿ ಅಯ್ಯರ್‌ರವರು ಪಂಚಮ ವಿದ್ಯಾರ್ಥಿಗಳಲ್ಲಿ ಛಲ ಧೈರ್ಯ ಆತ್ಮವಿಶ್ವಾಸ ಸ್ವಾಭಿಮಾನ ಮತ್ತು ನಾಯಕತ್ವದ ಗುಣಗಳನ್ನು ಮತ್ತು ಕ್ರೀಡಾಸಕ್ತಿಯನ್ನು ಬೆಳೆಸುವ ದೃಷ್ಟಿಯಿಂದ ಪ್ರತಿವರ್ಷಕ್ಕೊಮ್ಮೆ ನರಸಿಂಹರಾಜ ಹಾಸ್ಟಲ್ ವಿದ್ಯಾರ್ಥಿಗಳಿಂದ ಬೆಂಗಳೂರಿನ ಆನಂದರಾವ್ ವೃತ್ತದ ಪಕ್ಕದಲ್ಲಿದ್ದ ಹತ್ತು ಎಕರೆ ವಿಸ್ತೀರ್ಣವುಳ್ಳ (ಇಂದು ಬೆಂಗಳೂರು ಬೃಹತ್ ಬೆಂಗಳೂರಾಗಿ ಬೆಳೆದಿರುವುದರಿಂದ ಈ ಪ್ರದೇಶದಲ್ಲಿ ಕಟ್ಟಡಗಳು ಬೆಳೆದು ನಿಂತಿರುವುದನ್ನು ನೋಡಬಹುದು) ಮೈದಾನದಲ್ಲಿ ಸ್ಕೌಟ್ ತರಬೇತಿ ಶಿಬಿರ (ಸ್ಕೌಟ್ ಕ್ಯಾಂಪ್ ಫೈರ್)ವನ್ನು ನಡೆಸುತ್ತಿದ್ದರು. ಈ ಶಿಬಿರವು ಸ್ಕೌಟ್‌ನ ಮುಖ್ಯಸ್ಥರಾಗಿದ್ದ ಯುವರಾಜ ನರಸಿಂಹರಾಜ ಒಡೆಯರವರ ಮಾರ್ಗದರ್ಶನದಂತೆ ಅಯ್ಯರ್‌ರವರು ಕಾರ್ಯನಿರ್ವಹಿಸುತ್ತಿದ್ದರು. ಈ ಸಂದರ್ಭದಲ್ಲಿ ವಿದ್ಯಾರ್ಥಿಗಳಿಂದ ಬೆಳಗ್ಗೆಯಿಂದ ಸಂಜೆಯವರೆಗೆ ವಾಲಿಬಾಲ್ ಬಾಸ್ಕೆಟ್‌ಬಾಲ್ ಫುಟ್‌ಬಾಲ್ ಮತ್ತು ಕಬ್ಬಡಿ ಆಟಗಳನ್ನು ಪ್ರದರ್ಶನ ನಡೆಸುತ್ತಿದ್ದರು. ಅಂತಿಮವಾಗಿ ಈ ಆಟಗಳಲ್ಲಿ ಉತ್ತಮ ಪ್ರದರ್ಶನ ನೀಡಿ ವಿಜಯಿಗಳಾದ ತಂಡಗಳಿಗೆ ಸ್ಕೌಟ್‌ನ ಮುಖ್ಯಸ್ಥರಾಗಿದ್ದ ಯುವರಾಜರೇ ಬಹುಮಾನ ವಿತರಣೆ ಮಾಡುತ್ತಿದ್ದರು. ಅಲ್ಲದೆ ಆ ಸಮಯದಲ್ಲಿ ವಿದ್ಯಾರ್ಥಿಗಳಿಂದ ಬ್ಯಾಂಡ್ ನುಡಿಸಲಾಗುತ್ತಿತ್ತು. ದಿನದ ಆಟಗಳು ಮುಕ್ತಾಯಗೊಂಡ ನಂತರ ವಿದ್ಯಾರ್ಥಿಗಳಿಂದ ಸ್ಕೌಟ್ ಪಿರಮಿಡ್ ಕಟ್ಟುತ್ತಿದ್ದರೆಂದು ಕ್ಷೇತ್ರಕಾರ್ಯಕೈಗೊಂಡ ಸಂದರ್ಭದಲ್ಲಿ ಎಲ್ಲಾ ಮಾಹಿತಿಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು.

**ರಾಜ್ಯಮಟ್ಟದ ಸ್ಕೌಟ್ ರ‍್ಯಾಲಿ**



ಉತ್ತಮ ಪ್ರದರ್ಶನ ನೀಡಿದ ತಂಡಗಳನ್ನು ಆಯ್ಕೆ ಮಾಡಿ ರಾಜ್ಯಮಟ್ಟದಲ್ಲಿ ನಡೆಯುತ್ತಿದ್ದ ಸ್ಕೌಟ್ ರ‍್ಯಾಲಿಗೆ ಕಳುಹಿಸಿಕೊಡಲಾಗುತ್ತಿತ್ತು. ಹೀಗೆ ನಡೆಯುತ್ತಿದ್ದ ರಾಜ್ಯ ಸ್ಕೌಟ್ ರ‍್ಯಾಲಿಗೆ ರಾಜ್ಯದ ನಾನಾ ಭಾಗಗಳಿಂದ ಅನೇಕಾರು ತಂಡಗಳು ಪಾಲ್ಗೊಳ್ಳುತ್ತಿದ್ದವು. ಹಾಗಾಗಿ ಮಾರ್ಚ್ ೧೦ ೧೯೨೦ರಲ್ಲಿ ಚಿಕ್ಕಮಗಳೂರಿನಲ್ಲಿ ರಾಜ್ಯ ಸ್ಕೌಟ್ ರ‍್ಯಾಲಿಯನ್ನು ಏರ್ಪಡಿಸಲಾಗಿತ್ತು. ಈ ರ‍್ಯಾಲಿಯಲ್ಲಿ ನರಸಿಂಹರಾಜ ಹಾಸ್ಟಲ್‌ನ ವಿದ್ಯಾರ್ಥಿಗಳ ಸ್ಕೌಟ್ ತಂಡವಾದ ಶ್ರೀಕೃಷ್ಣರಾಜ ಬಾಯ್ಸ್ ಸ್ಕೌಟ್ ಮೊದಲ ಬಾರಿಗೆ ಭಾಗವಹಿಸಿತು. ರ‍್ಯಾಲಿಯ ಉದ್ಘಾಟನೆಯನ್ನು ಮೈಸೂರು ಸಂಸ್ಥಾನದ ಸ್ಕೌಟ್‌ನ ಮುಖ್ಯಸ್ಥರಾಗಿದ್ದ ಯುವರಾಜರೆ ಮಾಡಿದ್ದು ವಿಶೇಷವಾಗಿದ್ದಿತು. ಹಾಗೆಯೇ ಜನವರಿ ೨ ೧೯೨೨ರಲ್ಲಿ ಮತ್ತೊಂದು ರಾಜ್ಯ ಸ್ಕೌಟ್‌ರ‍್ಯಾಲಿಯು ಕೋಲಾರದ ನಂದಿಯಲ್ಲಿ ನಡೆಯಿತು. ಈ ರ‍್ಯಾಲಿಯಲ್ಲಿ ಯುವರಾಜರು ಮತ್ತು ಗೋಪಾಲಸ್ವಾಮಿ ಅಯ್ಯರ್‌ರವರು ಭಾಗವಹಿಸಿದರು. ಇವೆಲ್ಲವನ್ನು ಗಮನಿಸಿದಾಗ ಸ್ಪಷ್ಟವಾಗಿ

ಮೂಡಿಬರುವ ಚಿತ್ರಣವೆಂದರೆ ಸಮಾಜದಿಂದ ದೂರ ತಳ್ಳಲ್ಪಟ್ಟಿದ್ದ ಪಂಚಮ ಜನಾಂಗದ ಮಕ್ಕಳು ತಮ್ಮ ಜೀವನ ಶೈಲಿಯನ್ನು ಮಾರ್ಪಾಡು ಮಾಡಿಕೊಂಡು ಮುಖ್ಯವಾಹಿನಿಗೆ ಸೇರುವಂತಾಗಬೇಕೆಂಬ ಉದ್ದೇಶದಿಂದ ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ದಿವಾನರುಗಳು ಅಯ್ಯರ್‌ರವರ ಮೂಲಕ ಈ ಬಗೆಯ ಕಾರ್ಯಕ್ರಮಗಳನ್ನು ರೂಪಿಸಿ ಪಂಚಮರ ಏಳಿಗೆಗೆ ಕಾರಣ ಪುರುಷರಾದರೆಂದು ಹೇಳಬಹುದು.

**ವರ್ಲ್ಡ್ ಸ್ಕೌಟ್ ರ್‍ಯಾಲಿ**

ಮದ್ರಾಸ್ (ಚನ್ನೈ) ನಗರದ ಅಡಿಯಾರ್‌ನಲ್ಲಿ ವರ್ಲ್ಡ್ ಸ್ಕೌಟ್ ರ್‍ಯಾಲಿಯು (ಜಾಂಬೂರಿ) ೧೯೨೭ರಲ್ಲಿ ನಡೆಯುವುದಿತ್ತು. ಅಯ್ಯರ್‌ರವರು ಅಡಿಯಾರ್‌ನಲ್ಲಿ ನಡೆಯುವ ರ್‍ಯಾಲಿಯಲ್ಲಿ ನರಸಿಂಹರಾಜ ಹಾಸ್ಟಲಿನ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ಅವರ ಜ್ಞಾನವನ್ನು ಮತ್ತಷ್ಟು ವಿಶಾಲಗೊಳಸುವ ಉದ್ದೇಶವನ್ನು ಹೊಂದಿದ್ದರು. ಪ್ರಪಂಚದದ್ಯಾಂತ ಬರುವ ಸ್ಕೌಟ್ ತಂಡಗಳನ್ನು ನೋಡಿ ವಿಶ್ವಜ್ಞಾನವುಂಟಾಗಿ ವಿದ್ಯೆಯನ್ನು ಕಲಿಯಬೇಕೆಂಬ ಸ್ಫೂರ್ತಿ ಬರಬಹುದೆಂದು ನಂಬಿದ್ದರು. ಮತ್ತು ಮದ್ರಾಸ್ ನಗರವನ್ನು ತೋರಿಸುವ ಇಚ್ಚೆಯನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಸ್ಕೌಟ್ ಬ್ಯಾಂಡ್ ವಾದ್ಯಗಳನ್ನು ಮತ್ತು ಸಮವಸ್ತ್ರಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಿಕೊಟ್ಟು ಸ್ಕೌಟ್‌ನ ಶಿಕ್ಷಕರುಗಳಾದ ಜಗದೀಶ್ ಬಿ. ಕೃಷ್ಣರಾವ್ ಮತ್ತು ವೆಂಕಣ್ಣಭಟ್ಟರುಗಳಿಂದ ಇನ್ನೂ ಹೆಚ್ಚಿನ ತರಬೇತಿಯನ್ನು ಕೊಡಿಸಿದರು. ಮದ್ರಾಸ್‌ನ ಅಡಿಯಾರ್ ನಗರದಲ್ಲಿ ನಡೆಯುವ ವರ್ಲ್ಡ್ ರ್‍ಯಾಲಿಯಲ್ಲಿ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಲು ಬೇಕಾಗುವ ಖರ್ಚುವೆಚ್ಚಕ್ಕಾಗಿ ಚಂದ ವಸೂಲಿ ಮಾಡಿದರು. ಮತ್ತು ಸ್ವಾಮಿವಿವೇಕಾನಂದರಿಂದ ಪ್ರಭಾವಿತರಾಗಿ ಪಂಚಮರ ಶ್ರೇಯೋಭಿವೃದ್ಧಿಗೆ ತಮ್ಮನ್ನು ತೊಡಗಿಸಿಕೊಂಡ ಯುವರಾಜರು ಮತ್ತು ನಾಲ್ವಡಿಯವರು ಉದಾರವಾಗಿ ಧನ ಸಹಾಯ ಮಾಡಿದರು. ಇದರಿಂದ ಹರ್ಷಿತರಾದ ಅಯ್ಯರ್ ನರಸಿಂಹರಾಜ ಹಾಸ್ಟಲ್‌ನಲ್ಲಿದ್ದ ೧೮೦ ವಿದ್ಯಾರ್ಥಿಗಳನ್ನು ಅಡಿಯಾರ್‌ಗೆ ಕರೆದುಕೊಂಡು ಹೋದರು. ಈ ರ್‍ಯಾಲಿಯಲ್ಲಿ ವಿದ್ಯಾರ್ಥಿಗಳು ಸಕ್ರಿಯವಾಗಿ ಭಾಗವಹಿಸುವಂತೆ ಮಾಡಿದರು. ಅಡಿಯಾರ್‌ನಲ್ಲಿ ೧೮೮೬ರಲ್ಲಿ ಸ್ಥಾಪಿಸಲಾಗಿದ್ದ ಥಿಯೋಸಾಫಿಕಲ್ ಸೊಸೈಟಿ ಮತ್ತು ಇದೇ ವೇಳೆಯಲ್ಲಿ ಮದ್ರಾಸ್ ನಗರದಲ್ಲಿ ನಡೆಯುತ್ತಿದ್ದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನಕ್ಕೆ ಕರೆದುಕೊಂಡು ಹೋಗಿ ಅಲ್ಲಿದ್ದ ಕೆಲವು ಗಣ್ಯವ್ಯಕ್ತಿಗಳಿಗೆ ಪಂಚಮ ಹುಡುಗರನ್ನು ಪರಿಚಯ ಮಾಡಿಕೊಟ್ಟರು. ಈ ಅಧಿವೇಶನದ ಅಧ್ಯಕ್ಷರಾಗಿದ್ದ ಅನಿಬೆಸೆಂಟರಿಗೆ ವಿದ್ಯಾರ್ಥಿಗಳನ್ನು ಪರಿಚಯ ಮಾಡಿಕೊಟ್ಟರು. ಇಷ್ಟೊಂದು ವಿದ್ಯಾರ್ಥಿಗಳು ಒಟ್ಟಿಗೆ ಓದುತ್ತಿದ್ದನ್ನು ತಿಳಿದು ಹರ್ಷಗೊಂಡ ಅನಿಬೆಸೆಂಟ್‌ರು ಅಯ್ಯರ್ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿ ಅಂದು ನಿಮ್ಮನ್ನು ಪಂಚಮರ ಸೇವಕಾರ್ಯಕ್ಕೆ ಆರಿಸದಿದ್ದರೆ ಈ ಜನಾಂಗದ ಉದ್ಧಾರ ಕಾರ್ಯ ಇಷ್ಟು ನಿಷೆವಿಯಿಂದ ನಡೆಯುತ್ತಿರಲಿಲ್ಲ ಎಂದು ಹೇಳಿ ಆನಂದಪಟ್ಟರು.[೬] ಈ ಮಾತಿನಲ್ಲಿ ಗಮನಿಸಬಹುದಾದ ಅಂಶವೆಂದರೆ ಒಂದು ವೇಳೆ ಅಯ್ಯರ್‌ರವರನ್ನು ಪಂಚಮದ್ಧೋರ ಕಾರ್ಯಕ್ಕೆ ಆಯ್ಕೆ ಮಾಡದಿದ್ದರೆ ಅಸ್ಪೃಶ್ಯರ ಸ್ಥಿತಿಗತಿಗಳು ಏನಾಗುತ್ತಿದ್ದವು ಎಂಬುದು ಚರ್ಚೆಯ ವಿಷಯಕ್ಕೆ ಬಿಟ್ಟಿದ್ದು. ಅಯ್ಯರ್‌ರವರಂತಹ ನಿಷ್ಕಳಂಕ ಮಹಾನ್ ವ್ಯಕ್ತಿಯನ್ನು ಅಂದು ಆಯ್ಕೆ ಮಾಡಿದ್ದರ ಪರಿಣಾಮವೇ ಇಂದು ಮೈಸೂರು

ಪ್ರಾಂತ್ಯದಲ್ಲಿ ಪಂಚಮರು ಸಾಮಾಜಿಕವಾಗಿ ಆರ್ಥಿಕವಾಗಿ ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಬೆಳವಣಿಗೆಯನ್ನು ಕಾಣಲು ಸಾಧ್ಯವಾಗಿದೆ. ಅಂದರೆ ಅದು ನಾಲ್ವಡಿಯವರು ಪಂಚಮರ ಮೇಲಿಟ್ಟಿದ್ದ ಕಳಕಳಿ ಮತ್ತು ಅವರು ಪಂಚಮರಿಗಾಗಿ ಕೈಗೊಂಡ ಪ್ರಗತಿಪರ ಕಾರ್ಯಕ್ರಮಗಳು ಪಂಚಮರು ಸಮಾಜದ ಮುಖ್ಯವಾಹಿನಿಗೆ ಬರಲು ಸಾಧ್ಯವಾಗಿದೆ. ಒಂದು ವೇಳೆ ನಾಲ್ವಡಿಯವರು ಪಂಚಮರ ಅಭಿವೃದ್ಧಿಕಾರ್ಯ ಕೈಗೊಳದಿದ್ದರೆ ಪಂಚಮರು ಎಲ್ಲಾ ಕ್ಷೇತ್ರದಲ್ಲೂ ಹಿಂದುಳಿದಿರಬೇಕಾಗಿತ್ತು ಮತ್ತು ನಾಗರೀಕತೆಯ ಸೋಂಕು ಪಂಚಮರ ಮನೆ ಬಾಗಿಲಿಗೆ ಬರುತ್ತಿರಲಿಲ್ಲ ಎಂದೇ ಹೇಳಬಹುದು. ಅದೇ ದಿನ. ಸರ್.ಸಿ.ವಿ. ರಾಮಸ್ವಾಮಿ ಅಯ್ಯರ್‌ರವರು ತಮ್ಮ ಮನೆಯಲ್ಲಿ ಈ ವಿದ್ಯಾರ್ಥಿಗಳಿಗಾಗಿ ಊಟದ ವ್ಯವಸ್ಥೆಯನ್ನು ಏರ್ಪಡಿಸಲಾಗಿತ್ತು. ಆ ಸಂದರ್ಭದಲ್ಲಿ ಅಯ್ಯರ್‌ರವರು "ನೀವು ಎಲ್ಲರ ಜೊತೆಯಲ್ಲೂ ಬೆರೆಯಬೇಕು ಧೈರ್ಯದಿಂದ ಸಮಾಜದ ಸಂಕೋಲೆಗಳನ್ನು ಎದುರಿಸಿ ನಿಲ್ಲಬೇಕು. ಯಾವ ಇತರ ಮಾನವ ಸೃಷ್ಟಿಗೂ ನೀವು ಕೀಳಲ್ಲ ಎಂಬ ಮನೋಭಾವನೆಯನ್ನು ಬೆಳೆಸಿಕೊಳ್ಳ ಬೇಕೆಂದು" ವಿದ್ಯಾರ್ಥಿಗಳಿಗೆ ಉಪದೇಶ ಮಾಡಿದರು.

### ಗಣ್ಯವ್ಯಕ್ತಿಗಳ ಪರಿಚಯ

"ಕೋಟಿಗೊಬ್ಬ ಶರಣ ಲಕ್ಷಕ್ಕೊಬ್ಬ ಭಕ್ತ ಸಾವಿರಕೊಬ್ಬ ಸರದಾರ" ಎಂಬ ಮಾತಿನಂತೆ ಈ ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ಮಾನವ ಜೀವಿಯು ಒಂದೇ ರೀತಿ ಇರುವುದಿಲ್ಲ ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಈ ಹಿನ್ನೆಲೆಯಲ್ಲಿ ಅಯ್ಯರ್‌ರವರು ಭಿನ್ನ ಬಗೆಯ ಗುಣ ಸ್ವಭಾವ ವನ್ನು ಹೊಂದಿದ್ದ ಅಧಿಕಾರಿಗಳನ್ನು ಸೇವಾ ಧುರೀಣರನ್ನು ದೇಶನಾಯಕರನ್ನು ಕರೆದು ತಂದು ನರಸಿಂಹರಾಜ ಹಾಸ್ಟಲ್‌ನ ವಿದ್ಯಾರ್ಥಿಗಳ ಪರಿಚಯಿಸುತ್ತಿದ್ದರು. ಇದರ ಉದ್ದೇಶ ಮಹಾನ್ ವ್ಯಕ್ತಿಗಳ ಆದರ್ಶ ಜೀವನವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಮಾಜದಲ್ಲಿ ಆಚರಣೆಯಲ್ಲಿರುವ ಅನಿಷ್ಟ ಪದ್ಧತಿಗಳು ಮತ್ತು ದುಷ್ಟಶಕ್ತಿಗಳ ವಿರುದ್ಧ ಹೋರಾಡುವ ಮನೋಭಾವವನ್ನು ಬೆಳೆಸಿ ಕೊಳ್ಳುವಂತೆ ಮಾಡುವುದಾಗಿತ್ತು. ಹಾಗಾಗಿ ಸಮಾಜ ಸೇವಾಕಾರ್ಯದಲ್ಲಿ ನಿರತತರಾಗಿದ್ದ ಅನಿಬೆಸೆಂಟ್ ವಿ.ಎಸ್. ಶ್ರೀನಿವಾಸ ಶಾಸ್ತ್ರಿ, ಸರ್. ಅಲ್ಲಾರಿ ಕೃಷ್ಣಸ್ವಾಮಿ ಅಯ್ಯರ್ ಪ್ರೊ. ಪಿ.ಸಿ. ರಾಯ್ ಪಂಡಿತ್ ಮದನ ಮೋಹನ ಮಾಳವೀಯ ಥಕ್ಕರಬಾಬ ಮತ್ತು ಗಾಂಧೀಜಿಯವರಂತಹವರನ್ನು ನರಸಿಂಹರಾಜ ಹಾಸ್ಟಲ್‌ಗೆ ಕರೆದುತಂದು ಪರಿಚಯಿಸುತ್ತಿದ್ದರು.[೭೦] ಪರಿಣಾಮ ವಿದ್ಯಾರ್ಥಿಗಳು ರಾಷ್ಟ್ರೀಯ ಭಾವನೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಯಿತು.

ಇದೇ ವೇಳೆಗೆ ಅಸ್ಪೃಶ್ಯತೆಯ ನಿರ್ಮೂಲನೆ ಕಾರ್ಯಕ್ರಮ ಕೈಗೊಂಡು ದೇಶದ್ಯಾದಂತ ಪ್ರಚಾರಕಾರ್ಯದಲ್ಲಿ ತೊಡಗಿದ ಗಾಂಧಿಯವರು ೧೫.೭.೧೯೩೨ರಲ್ಲಿ ಬೆಂಗಳೂರಿಗೆ ಭೇಟಿ ನೀಡಿದ್ದರು. ಈ ವೇಳೆಯಲ್ಲಿ ಅವರಿಗೆ ಆಹ್ವಾನ ನೀಡಿದ ಅಯ್ಯರ್ ಪ್ರಥಮ ಬಾರಿಗೆ ನರಸಿಂಹರಾಜ ಹಾಸ್ಟಲ್‌ಗೆ ಕರೆದು ತಂದು ವಿದ್ಯಾರ್ಥಿಗಳನ್ನು ಪರಿಚಯ ಮಾಡಿಕೊಟ್ಟರು. ಇದರಿಂದ ಹರ್ಷಭರಿತರಾದ ಗಾಂಧಿ ಅಲ್ಲಿಂದ ತುಮಕೂರಿನ 'ಪಂಚಮರ ಬೋರ್ಡಿಂಗ್ ಹೋಂ'ಗೆ ಭೇಟಿ ನೀಡಿದರು. ಅಲ್ಲಿ ಮೈಸೂರು ಸಂಸ್ಥಾನದ ಒಡೆಯರು ಪ್ರಾರಂಭಿಸಿದ್ದ ವಿವಿಧ ವೃತ್ತಿ ತರಬೇತಿ ಕೇಂದ್ರಗಳಿಗೆ ಭೇಟಿ ನೀಡಿ ಮೆಚ್ಚುಗೆ ವ್ಯಕ್ತಪಡಿಸಿದರು. ಪುನಃ ೧೯೩೬ರಲ್ಲಿ ಬೆಂಗಳೂರಿಗೆ ಬಂದಾಗ ಆದಿಜಾಂಬವ ಹಾಸ್ಟಲಿನ ಶಂಕು

ಸ್ಥಾಪನೆಯ ಕಾರ್ಯವನ್ನು ಅಯ್ಯರ್ ಮಾಡಿಸಿದರು. ಈಗಲೂ ಈ ವಿದ್ಯಾರ್ಥಿ ನಿಲಯವು ಮಾಗಡಿ ರಸ್ತೆಯಲ್ಲಿ ಬಿನ್ನಿಮಿಲ್ಲಿನ ಪಕ್ಕದಲ್ಲಿದ್ದು ಬಾಪೂಜಿ ವಿದ್ಯಾರ್ಥಿನಿಲಯ ಎಂದು ಕರೆಯಲಾಗುತ್ತಿದೆ. ಹಾಗೂ ಮೈಸೂರು ಸಂಸ್ಥಾನದಲ್ಲಿ ನಾಲ್ವಡಿಯವರ ಸರ್ಕಾರವು ನೀಡಿದ ಸಹಕಾರದಿಂದ ಅಯ್ಯರ್‌ರವರ ಸೇವಾ ಕಾರ್ಯವನ್ನು ಪರಿಗಣಿಸಿ ಅವರ ಸ್ಮರಣಾರ್ಥ ಮಾಗಡಿ ರಸ್ತೆಯಲ್ಲಿದ್ದ ಉಕ್ಕುಡಪಾಳ್ಯಕ್ಕೆ 'ಗೋಪಾಲಪುರ' ಎಂದು ಹೆಸರಿಟ್ಟಿರುವುದನ್ನು ಗಮನಿಸಿ ಅವರ ಸೇವಾ ಕಾರ್ಯ ತಾತ್ಪರತೆಯನ್ನು ಪ್ರಶಂಸಿಸಿದರು.

ಮೈಸೂರು ಸಂಸ್ಥಾನದಲ್ಲಿ ೧೯೨೬-೨೭ನೇ ಸಾಲಿನಲ್ಲಿ ರಾಜ್ಯದಾದ್ಯಂತ ಪಂಚಮರಿಕೆಗೆ ೬೩೨ ಶಾಲೆಗಳನ್ನು ತೆರೆಯಲಾಗಿತ್ತು. ಈ ಅವಧಿಯಲ್ಲಿ ೧೭,೭೦೭ ಪಂಚಮ ವಿದ್ಯಾರ್ಥಿಗಳಿದ್ದರೆ. ಹಿಂದಿನ ವರ್ಷ (೧೯೨೫-೨೬) ೬೦೫ ಶಾಲೆಗಳಿದ್ದು ೧೬,೫೭೫ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ಇದರಲ್ಲಿ ೨,೭೨೯ ವಿದ್ಯಾರ್ಥಿನಿಯರು ೧೯೨೬-೨೭ನೇ ಸಾಲಿನಲ್ಲಿ ದಾಖಲುಗೊಂಡಿದ್ದಾರೆ. ಹಿಂದಿನ ವರ್ಷ ೨,೫೬೭ ವಿದ್ಯಾರ್ಥಿನಿಯರು ಶಾಲೆಗೆ ಸೇರ್ಪಡೆಗೊಂಡಿದ್ದರು.[೧೧] ಆದ್ದರಿಂದ ಮೈಸೂರು ಸರ್ಕಾರವು ಕ್ರಮವಾಗಿ ಎರಡು ವರ್ಷವು ೫,೯೦೦ ರೂ.ಗಳ ವಿದ್ಯಾರ್ಥಿ ವೇತನವನ್ನು ಬಿಡುಗಡೆ ಮಾಡಿತ್ತು. ಆದರೆ ಮೈಸೂರು ಸಂಸ್ಥಾನದ ಅರಸ ನಾಲ್ವಡಿಯವರು ಪಂಚಮ ವಿದ್ಯಾರ್ಥಿಗಳಿಗೆ ವಿಶೇಷ ಸೌಕರ್ಯಗಳನ್ನು ಒದಗಿಸಿಕೊಟ್ಟಿದ್ದರೂ ಕೂಡ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಅನುತೀರ್ಣರಾಗುತ್ತಿದ್ದರು.

ಉದಾಹರಣೆಗೆ ೧೯೨೭ರಲ್ಲಿ ಮೈಸೂರು ಮತ್ತು ತುಮಕೂರಿನ ಆದಿಕರ್ನಾಟಕ ವಸತಿ ನಿಲಯದಲ್ಲಿ ೭೫ ವಿದ್ಯಾರ್ಥಿಗಳಿದ್ದರು. ಅದೇ ಹಿಂದಿನ ವರ್ಷ ೭೦ ವಿದ್ಯಾರ್ಥಿಗಳಿದ್ದರು. ಇವರಲ್ಲಿ ೧೬ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ ಪರೀಕ್ಷೆಯನ್ನು ತೆಗೆದುಕೊಂಡಿದ್ದರು. ಆದರೆ ಉತ್ತೀರ್ಣ ರಾದವರ ಸಂಖ್ಯೆ ಕೇವಲ ೬ ವಿದ್ಯಾರ್ಥಿಗಳು ಮಾತ್ರ. ಹಾಗೆಯೇ ಚಿಕ್ಕಮಗಳೂರಿನ ಆದಿಕರ್ನಾಟಕ ವಸತಿ ಶಾಲೆಯಲ್ಲಿ ೧೯೨೬-೨೭ನೇ ಸಾಲಿನಲ್ಲಿ ೫೦ ವಿದ್ಯಾರ್ಥಿಗಳಿದ್ದು ಹಿಂದಿನ ವರ್ಷ ೪೭ ವಿದ್ಯಾರ್ಥಿಗಳಿದ್ದರು. ಇವರಲ್ಲಿ ೨ ವರ್ಷದಲ್ಲೂ ೯ ವಿದ್ಯಾರ್ಥಿಗಳು ಇಂಗ್ಲೀಷ್ ಮತ್ತು ಕನ್ನಡ ಲೋಯರ್ ಸೆಂಕಂಡರಿ ಪರೀಕ್ಷೆಯಲ್ಲಿ ಕುಳಿತು ಕ್ರಮವಾಗಿ ೨ ಮತ್ತು ೫ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದರು.[೧೨] ಹಾಗೆಯೇ ಬೆಂಗಳೂರಿನ ನರಸಿಂಹರಾಜ ಹಾಸ್ಟೆಲ್‌ನ ವಿದ್ಯಾರ್ಥಿಗಳು ಇದರಿಂದ ಹೊರತಾಗಿರಲಿಲ್ಲ. ಅಂದರೆ ೧೯೨೭ ಮಾರ್ಚ್ ೩೧ ರಲ್ಲಿ ಸುಮಾರು ೧೮೦ ವಿದ್ಯಾರ್ಥಿಗಳಿದ್ದು ಅನೇಕಾರು ವಿದ್ಯಾರ್ಥಿಗಳು ಅನುತ್ತೀರ್ಣರಾಗಿದ್ದರು. ಆದರೂ ಕೆಲವರು ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂಬ ಆಸೆ ಇದ್ದರೂ ದಾರಿ ಕಾಣದೆ ಪರಿತಪಿಸತೊಡಗಿದರು. ಇಂತಹ ವಿದ್ಯಾರ್ಥಿಗಳಿಗೆ ಮುಂದಿನ ಪರೀಕ್ಷೆಯನ್ನು ಕೂಡಿಸಿದರು ಅನುತ್ತೀರ್ಣರಾಗುತ್ತಿದ್ದರು. ಪರಿಣಾಮ ಅಂತಹ ವಿದ್ಯಾರ್ಥಿಗಳ ಓದು ಕುಂಠಿತಗೊಂಡಿತು. ಹಾಗೂ E.P.S. (Eligibality for public service) ಆದ ಕೆಲವು ವಿದ್ಯಾರ್ಥಿಗಳು ಸರ್ಕಾರಿ ಕೆಲಸಕ್ಕೆ ಕಾಯ್ದುಕುಳಿತ್ತಿದ್ದರು. ಅಯ್ಯರ್‌ರವರು ಇಂತಹ ವಿದ್ಯಾರ್ಥಿಗಳಿಗೆ ಯಾವುದಾದರೊಂದು ನೌಕರಿ ಕೊಡಿಸಿ ಬದುಕುವ ದಾರಿಯನ್ನು ತೋರಿಸಲು ಮುಂದಾದರು. ಏಕೆಂದರೆ ಅನುತ್ತೀರ್ಣರಾದ ವಿದ್ಯಾರ್ಥಿಗಳು ತಮ್ಮ ಮನೆಗಳಿಗೆ ಮರಳಿದರೆ ಅಲ್ಲಿ ಅವರನ್ನು ಕಿತ್ತು ತಿನ್ನುವ ಬಡತನ ಮತ್ತು ಒಂದು ಹೊತ್ತಿನ ಊಟಕ್ಕೂ ಪರಿತಪಿಸುವಂತಹ

ಪರಿಸ್ಥಿತಿಯ ಬಗ್ಗೆ ಅಯ್ಯರ್ ಚೆನ್ನಾಗಿ ಬಲ್ಲವರಾಗಿದ್ದರು. ಆದ್ದರಿಂದ ವಿದ್ಯಾರ್ಥಿಗಳನ್ನು ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ಹೋಗಿ ಸರ್ಕಾರಿ ಅಧಿಕಾರಿಗಳಿಗೆ ಮತ್ತು ಕಾರ್ಖಾನೆಯ ಅಧಿಕಾರಿಗಳನ್ನು ಮುಖಾಮುಖಿ ಭೇಟಿ ಮಾಡಿ ಅರ್ಜಿ ಬರೆದು ಪೋಷಕರ ಸಹಿಯನ್ನು ತಾವೇ ಮಾಡಿ ತಮ್ಮಗೆ ನೀಡಿದ್ದ ವಿಶೇಷ ಅಧಿಕಾರವನ್ನು ಬಳಸಿಕೊಂಡು ವಿದ್ಯಾರ್ಥಿಗಳಿಗೆ ಗುಮಾಸ್ತ ಪೋಲೀಸ್ ಕಾನ್‌ಸ್ಟೇಬಲ್ ಅಟೆಂಡರ್ ಮೊದಲಾದ ಹುದ್ದೆಗಳನ್ನು ಕೊಡಿಸುತಿದ್ದರು. ಇದೇ ವೇಳೆಗೆ ಜಾರಿಗೆ ಬಂದ ಮಿಲ್ಲರ್ ಸಮೀತಿಯು ಅಸ್ಪೃಶ್ಯರಿಗೆ ಬೇರೆಯವರಿಗಿಂತ ಸರ್ಕಾರಿ ನೌಕರಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಆದ್ಯತೆ ನೀಡಬೇಕೆನ್ನುವ ಶಿಪಾರಸ್ಸು ಮಾಡಿದಿದ್ದು ಅಯ್ಯರ್‌ರವರಿಗೆ ಪ್ರೇರಣೆ ನೀಡಿರಬಹುದು. ಆದ್ದರಿಂದ ಶಿಕ್ಷಣ ಪಡೆದ ಪಂಚಮ ವಿದ್ಯಾರ್ಥಿಗಳಿಗೆ ನಿರೋದ್ಯಗದ ಸಮಸ್ಯೆ ಎಂದು ಕಾಡಲಿಲ್ಲವೆಂದು ಹೇಳಬಹುದು.

### ಅನುದಾನಿತ ವಿದ್ಯಾರ್ಥಿ ನಿಲಯಗಳ ಸ್ಥಾಪನೆ

ಬದುಕನ್ನು ಪರಿವರ್ತಿಸುವ ಸಾಧನ ಶಿಕ್ಷಣ ಆದ್ದರಿಂದ ಪಂಚಮರಿಗೆ ಶಿಕ್ಷಣವನ್ನು ನೀಡಿದರೆ ಸಮಾಜದಲ್ಲಿ ಯಾವುದೇ ಕ್ಷೇತ್ರದಲ್ಲಿ ತಮ್ಮ ಬದುಕನ್ನು ಹಸನು ಮಾಡಿಕೊಳ್ಳುತ್ತಾರೆ. ಹಾಗೂ ಶಿಕ್ಷಣ ದೊರೆತರೆ ಅವರ ಸ್ಥಿತಿಯು ಉತ್ತಮಗೊಂಡು ಶೋಷಣೆಯ ವಿರುದ್ಧ ಸೆಟೆದು ನಿಲ್ಲುವಂಥ ಸಾಮರ್ಥ್ಯವು ದೊರೆಯುತ್ತದೆ. ಹಾಗಾಗಿ ಪಂಚಮ ವಿದ್ಯಾರ್ಥಿಗಳಿಗೆ ಅಗತ್ಯ ಸೌಲಭ್ಯ ಒದಗಿಸಿದರೆ ಶಿಕ್ಷಣ ಪಡೆಯಲು ಮುಂದಾಗುತ್ತಾರೆ ಎಂದು ಚಿಂತನೆ ಮಾಡಿ ಪರಿಹಾರ ಕಂಡುಕೊಳ್ಳುವ ಸಲುವಾಗಿ ಅಂದಿನ ದಿವಾನರಾಗಿದ್ದ ಸರ್. ಮಿರ್ಜಾ ಇಸ್ಮಾಯಿಲ್‌ರೊಂದಿಗೆ ವಿದ್ಯಾರ್ಥಿಗಳು ಅನುತ್ತೀರ್ಣಗೊಳ್ಳುತ್ತಿರುವ ವಿಷಯವನ್ನು ತಿಳಿಸಿದರು. ಜೊತೆಗೆ ಪಂಚಮ ವಿದ್ಯಾರ್ಥಿಗಳು ಬೆಳೆದು ಬಂದ ಹಿನ್ನಲೆಯನ್ನು ಸೂಕ್ಷ್ಮವಾಗಿ ತಿಳಿಸಿಕೊಟ್ಟರು. ಅಯ್ಯರ್‌ರವರು ಹೊತ್ತು ತಂದ ವಿಚಾರವನ್ನು ಪರಿಶೀಲನೆ ಮಾಡಿದ ದಿವಾನರು ಪಂಚಮ ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಮುಂದುವರಿಸಲು ಅನುಕೂಲ ಮಾಡೋಣ ಎಂಬ ಭರವಸೆಯನ್ನು ನೀಡಿದರು. ದಿವಾನರು ಸಹ ಅಲ್ಪಸಂಖ್ಯಾತ ವರ್ಗದಿಂದ ಬಂದವರಾಗಿದ್ದು ಬಡವರ ನೋವು ನಲಿವುಗಳನ್ನು ಅರಿತಿದ್ದರಿಂದ ಹಾಗೂ ಪಂಚಮರ ಬಗ್ಗೆ ಕಳಕಳಿಯನ್ನು ಹೊಂದಿದ್ದರಿಂದ ಅಯ್ಯರ್‌ರವರ ವಿಚಾರಗಳಿಗೆ ಸ್ಪಂಧಿಸಿದರು ಎಂದು ಹೇಳಬಹುದು. ಅಯ್ಯರ್‌ರವರು ಹರ್ಷಿತರಾಗಿ ತಮ್ಮ ಜೊತೆಯಲ್ಲಿ ಬಂದು ಹೊರಗೆ ಕಾಯುತ್ತಿದ್ದ ಹುಡುಗರಿಗೆ ವಿಷಯವನ್ನು ತಿಳಿಸಿದರು. ಇದೇ ಸಂದರ್ಭದಲ್ಲಿ ಹುಡುಗರಾದ (ಡಿ. ವೆಂಕಟಯ್ಯ ಆರ್. ಗೋಪಾಲ ಸ್ವಾಮಿ ಅಯ್ಯರ್ ವಿದ್ಯಾರ್ಥಿನಿಲಯದ ಸ್ಥಾಪಕರು ಮತ್ತು ಕೃಷ್ಣಪ್ಪ ಪಾಂಚಜನ್ಯ ಪತ್ರಿಕೆಯ ಸ್ಥಾಪಕರು). ಅಯ್ಯರ್‌ರವರಲ್ಲಿ ಒಂದು ಮನವಿಯನ್ನು ಮಾಡಿಕೊಂಡರು ಅಂದರೆ ಅನುತ್ತೀರ್ಣರಾದ ವಿದ್ಯಾರ್ಥಿಗಳಿಂದಲೇ ಅಲ್ಪಸ್ವಲ್ಪವನ್ನು ಹಣವನ್ನು ಸಂಗ್ರಹಿಸಿ ಅಲ್ಲಲ್ಲೆ ಅನುದಾನಿತ ವಿದ್ಯಾರ್ಥಿನಿಲಯಗಳನ್ನು ತೆರೆದು ಅವರಿಗೆ ಸೌಲಭ್ಯಗಳನ್ನು ಒದಗಿಸಿದರೆ ಅಲ್ಪಸ್ವಲ್ಪ ಹಣವನ್ನು ಕೊಡುವುದರಿಂದ ಅವರಲ್ಲಿ ಜವಾಬ್ದಾರಿಯುಂಟಾಗುತ್ತದೆಂದು ಸಲಹೆ ನೀಡಿದರು.

ಹುಡುಗರು ಕೊಟ್ಟ ಸಲಹೆ ಸೂಕ್ತವಾಗಿದೆ ಎಂಬುದನ್ನು ತಿಳಿದ ಅಯ್ಯರ್ ತಕ್ಷಣವೇ ಸರ್ಕಾರಕ್ಕೆ ಅರ್ಜಿಯನ್ನು ಬರೆದು ಸರ್. ಮಿರ್ಜಾ ಇಸ್ಮಾಯಿಲ್‌ರವರಿಗೆ ನೀಡಿದರು. ಪರಿಣಾಮವಾಗಿ ಬೆಂಗಳೂರಿನ

ಬಂಬುಬಾಜರ್ ಮೈಸೂರಿನ ನಜರ್‌ಬಾದ್‌ಗಳಲ್ಲಿ ಆದಿಕರ್ನಾಟಕ ಅನುದಾನಿತ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲು ದಿವಾನರು ಅನುಮತಿಯನ್ನು ಅಯ್ಯರ್‌ರವರಿಗೆ ನೀಡಿದರು. ಹಾಗೆಯೇ ಬೆಂಗಳೂರಿನಲ್ಲಿ ಆದಿ ಜಾಂಬವ ವಿದ್ಯಾರ್ದಿನಿಲಯದ ಸ್ಥಾಪನೆಯ ಜೊತೆಗೆ ೧೯೩೦ರಲ್ಲಿ ಮೈಸೂರು ಮಂಡ್ಯ ಹಾಸನ ಮಳವಳ್ಳಿ ಕೆ.ಜಿ.ಎಫ್ ಚಿತ್ರದುರ್ಗ ಮೊದಲಾದ ಸ್ಥಳಗಳಲ್ಲಿ ಸರ್ಕಾರದಿಂದ ಅನುದಾನ ಪಡೆದು ವಿದ್ಯಾರ್ದಿನಿಲಯಗಳನ್ನು ಸ್ಥಾಪಿಸಿದರು. ಇದರಿಂದ ಸ್ಪಷ್ಟವಾಗಿ ತಿಳಿದುಬರುವ ಅಂಶವೆಂದರೆ ಅಯ್ಯರ್‌ರವರ ಸಹಕಾರದೊಂದಿಗೆ ಪಂಚಮ ವಿದ್ಯಾರ್ಥಿಗಳಿಗೆ ಶಿಕ್ಷಣದ ಅವಕಾಶವನ್ನು ಹೆಚ್ಚಿಸುವ ಕ್ರಮಗಳು ಸರ್ಕಾರದ ಮೂಲಕವೇ ನಡೆಯುತ್ತೆನ್ನಬಹುದು.

**ಹಾಸನದ ವಿದ್ಯಾರ್ಥಿನಿಲಯದ ಸ್ಥಾಪನೆ**

ಹಾಸನದ ವಿದ್ಯಾರ್ಥಿನಿಲಯಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಅಯ್ಯರ್‌ರವರ ಕೋರಿಕೆಯ ಮೇರೆಗೆ ಹಾಸನದ ಜಂಬಾನ ಮೈದಾನದಲ್ಲಿದ್ದ ವಿಕ್ಟೋರಿಯಾ ಸಭಾಂಗಣದಲ್ಲಿ (ಕೇಂದ್ರ ಗ್ರಂಥಾಲಯದ ಪಕ್ಕದಲ್ಲಿ) ೪೦ ವಿದ್ಯಾರ್ಥಿಗಳಿಗಾಗಿ ಉಚಿತ ವಿದ್ಯಾರ್ಥಿನಿಲಯವೊಂದನ್ನು ತೆರೆಯಲಾಯಿತು. ಈ ಸಭಾಂಗಣದಲ್ಲಿ ೧೩ ಕೊಠಡಿಗಳಿದ್ದು ಮಧ್ಯದಲ್ಲಿ ವಿಶಾಲವಾದ ಸಭಾಂಗಣವನ್ನು ಹೊಂದಿತ್ತು. ಇದೇ ಸಭಾಂಗಣದಲ್ಲಿ ಸಾರ್ವಜನಿಕ ಸಮಾರಂಭಗಳು ಮತ್ತು ವಿಶ್ವವಿದ್ಯಾಲಯದ ಉಪನ್ಯಾಸ ಕಾರ್ಯಕ್ರಮಗಳು ನಡೆಯುತ್ತಿದ್ದವು. ಕಾರ್ಯಕ್ರಮಗಳು ನಡೆಯುವ ಸಂದರ್ಭದಲ್ಲಿ ಹುಡುಗರು ಸಭಾಂಗಣವನ್ನು ಬಿಟ್ಟುಕೊಡಬೇಕಾಗಿದಿತು. ಮೇಲೆ ಪ್ರಾಸ್ತಪಿಸಿದಂತೆ ಈ ವಿದ್ಯಾರ್ದಿನಿಲಯವು ೪೦ ವಿದ್ಯಾರ್ಥಿಗಳಿಗೆಂದು ನಿಗದಿ ಮಾಡಲಾಗಿತ್ತು. ಆದರೆ ವಿದ್ಯಾರ್ಥಿಗಳ ಸಂಖ್ಯೆ ೪೫ಕ್ಕೆರಿ ಸ್ಥಳಾವಕಾಶದ ಕೊರತೆಯುಂಟಾಯಿತು. ಆದ್ದರಿಂದ ಅಂದಿನ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದ ಎನ್.ಎಸ್. ಸುಬ್ಬರಾವ್ ಅವರಿಗೆ ಅಯ್ಯರ್‌ರವರು ಈ ಐದು ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯ ಮತ್ತು ವಿದ್ಯಾರ್ಥಿವೇತನ ನೀಡಬೇಕೆಂದು ಕೇಳಿಕೊಂಡರು. ಆದರೆ ಉಪ ಕುಲಪತಿಗಳು ಯಾವುದೇ ಸೌಕರ್ಯವನ್ನು ಒದಗಿಸಲು ಸಾಧ್ಯವಾಗುವುದಿಲ್ಲವೆಂದು ನಿರಾಕರಿಸಿದರು. ಇದರಿಂದ ನೊಂದು ಕೋಪಗೊಂಡ ಅಯ್ಯರ್ ಐ.ಜಿ.ಪಿ. (ಇನ್‌ಸ್ಪೆಕ್ಟರ್ ಜನರಲ್ ಆಫ್ ಪೋಲಿಸ್) ಗಳಾಗಿದ್ದ ಅಂಬಳೆ ಸುಬ್ರಹ್ಮಣ್ಯಂ ಅಯ್ಯರ್‌ರವರ ಮನೆಗೆ ಬಂದರು. ಅವರ ಮಗ ಆಟವಾಡುತ್ತಿದ್ದನ್ನು ಕಂಡು "ಏ ವಾಯಿಂಗ ಹರಿಜನರ ಗೋಪಾಲಸ್ವಾಮಿ ವಂದಿರಕ್ಕಾರ್ ಅಪ್ಪಡಿ ಸೊಲ್ಲು" ಎಂದು ಹೇಳಿ ಕಳುಹಿಸಿದರು. ವಿಷಯ ತಿಳಿದ ಸುಬ್ರಹ್ಮಣ್ಯಂ ಅಯ್ಯರ್ ಅಯ್ಯರ್‌ರವರಿಗೆ ಈ ವಿಷಯವನ್ನು ಮಹಾರಾಜರನ್ನು ಕಾಣಿರಿ ಎಂದು ಒತ್ತಾಯಿಸಿದರು. ಇಲ್ಲಿ ಒಂದು ಅಂಶ ವ್ಯಕ್ತವಾಗುತ್ತದೆ. ಅಂದರೆ ಸುಬ್ರಹ್ಮಣ್ಯಂ ಅಯ್ಯರ್ ಮಹಾರಾಜರ ಆಸ್ಥಾನದಲ್ಲಿ ಐ.ಜಿ.ಪಿ. ಆಗಿದ್ದಕ್ಕೋ ಅಥವಾ ಅಯ್ಯರ್‌ರವರ ಒತ್ತಡಕ್ಕೋ ಮಣಿದು ಪಂಚಮರ ಬಗ್ಗೆ ಅನುಕುಂಪದ ಮಾತುಗಳನ್ನಾಡಿರಬಹುದು. ಆದರೂ ಕೂಡ ಇವರು ನಾಲ್ವಡಿಯವರನ್ನು ಉಡುಪಿಯಲ್ಲಿ ಭೇಟಿ ಮಾಡಿ ವಿಷಯವನ್ನು ಪ್ರಸ್ತಾಪಿಸಿ ಮನೆಯಿಂದ ಹೊರಬರುವಾಗ "ಆ ಉಪಕುಲಪತಿ ಬಹಳ ಗರ್ವಿಷ್ಟ" ಎಂದು ಹೇಳಿದರು. ಹಿಂದುಳಿದವರನ್ನು ಸಮಾಜ ಮುಖಿಗೆ ತರಲು ವಿಶೇಷ ಕಾರ್ಯಕ್ರಮಗಳು ಹಾಕಿಕೊಂಡಿದ್ದ ನಾಲ್ವಡಿಯವರು ತಕ್ಷಣವೇ ಒಂದು ಅಪ್ಪಣೆ ಪತ್ರ ಬರೆದು "ಎಷ್ಟು ವಿದ್ಯಾರ್ಥಿಗಳು ಬಂದರು ಅಷ್ಟೂ ಜನರಿಗೂ ಪ್ರವೇಶ

ನೀಡತಕ್ಕದ್ದು" ಎಂದು ಆದೇಶವನ್ನು ಹೊರಡಿಸಿದರು. ಸಂತೋಷಗೊಂಡ ಅಯ್ಯರ್ ಅಂದೇ ತಮ್ಮ ಬ್ಯಾಗ್‌ನಲ್ಲಿದ್ದ ವಿದ್ಯಾರ್ಥಿಗಳ ಸಂಕ್ಷಿಪ್ತ ಚರಿತ್ರೆಯನ್ನು ಹೊಂದಿದ್ದ ಕಡತವನ್ನು ತೆಗೆದು ಹುಡುಗರಿಗೆಲ್ಲಾ ಅಂಚೆ ಪತ್ರ ಬರೆದರು. ಅಲ್ಲದೆ ಸ್ವತಃಕೆಲವು ಸ್ಥಳಗಳಿಗೆ ಭೇಟಿ ನೀಡಿ ಪ್ರಾಥಮಿಕ ವಿದ್ಯಾಭ್ಯಾಸ ಮಾಡಿದ್ದ ಎಲ್ಲಾ ಹುಡುಗರನ್ನು ಕರೆದುತಂದು ವಿದ್ಯಾರ್ಥಿ ನಿಲಯಕ್ಕೆ ಸೇರಿಸಿದರು. ಪರಿಣಾಮ ಎರಡು ವರ್ಷಗಳಲ್ಲಿ ಅಲ್ಲಿನ ವಿದ್ಯಾರ್ಥಿಗಳ ಸಂಖ್ಯೆ ೪೦ ರಿಂದ ೧೫೦ಕ್ಕೆ ಏರಿತು.ಇದರಿಂದಾಗಿ ಎಸ್.ಎನ್. ಸುಬ್ಬರಾವ್‌ರವರಿಗೆ ಮುಖಭಂಗವಾಯಿತು. ಒಟ್ಟಾರೆ ಅಯ್ಯರ್‌ರವರು ಪಂಚಮ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡಿಸಬೇಕು ಎಂದು ಮಾಡಿದ ಸಂಕಲ್ಪದಿಂದಾಗಿ ಈ ಎಲ್ಲಾ ಕಾರ್ಯಗಳು ಜರುಗಿದವು ಎಂದು ಹೇಳಬಹುದು.

ಹೀಗೆ ಸ್ಥಾಪನೆಗೊಂಡ ಎಲ್ಲಾ ವಿದ್ಯಾರ್ಥಿನಿಲಯಗಳಿಗೆ ಆಗಾಗ್ಗೆ ಭೇಟಿ ನೀಡುತ್ತಿದ್ದ ಅಯ್ಯರ್ ವಿದ್ಯಾರ್ಥಿಗಳ ಕುಂದುಕೊರತೆ ಮತ್ತು ಯೋಗಕ್ಷೇಮದ ಬಗ್ಗೆ ತಿಳಿದುಕೊಳ್ಳುತ್ತಾ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಿದ್ದರು. ವಿದ್ಯಾರ್ಥಿಗಳನ್ನು ಕುರಿತು ಯಾರನ್ನು ಅವಲಂಬಿಸದೆ ಸ್ವಶಕ್ತಿಯಿಂದ ಮುಂದುವರೆಯಿರಿ ನಾನು ಯಾರಿಗೂ ಕೀಳಲ್ಲ ಎಂಬ ಮನೋಭಾವನೆಯನ್ನು ಬೆಳೆಸಿಕೊಳ್ಳಿ. ನಿಮ್ಮ ಸುತ್ತಮುತ್ತಲಿನ ಪರಿಸರವನು ನಿರ್ಮಲವಾಗಿಟ್ಟುಕೊಳ್ಳಿ ಆತ್ಮಗೌರವನ್ನು ಮಾರಿಕೊಂಡು ಅನ್ಯರಿಗೆ ಗೌರವ ತೋರುವುದು ದಿನತನ ಹೇಡಿತನ ಹಾಗೂ ನೀವು ಒಗ್ಗಟ್ಟಾಗಿದ್ದರೆ ಸತತ ಪ್ರಯತ್ನಶೀಲರಾಗಿದ್ದರೆ ಛಲಗಾರರಾಗಿದ್ದರೆ ನಿಮ್ಮ ಪ್ರಯತ್ನಕ್ಕೆ ಜಯ ದೊರೆಯುತ್ತದೆ. ಹಾಗಾಗಿ ಪಠ್ಯಪುಸ್ತಕ ವೃತ್ತಪತ್ರಿಕೆ ನಿಯತಕಾಲಿಕೆಗಳನ್ನು ಓದುವ ಹವ್ಯಾಸವನ್ನು ಬೆಳೆಸಿಕೊಂಡು ಜ್ಞಾನ ಸಂಪಾದಿಸಿಕೊಳ್ಳಿ ಎಂದು ಸಲಹೆಯನ್ನು ನೀಡುತ್ತಿದ್ದರು. ಅಲ್ಲದೆ ಥಿಯೊಸಾಫಿಕಲ್ ಸೊಸೈಟಿ ರಾಮಕೃಷ್ಣ ಆಶ್ರಮ ಮತ್ತು ಬ್ರಹ್ಮಸಮಾಜ ಸಂಸ್ಥೆಗಳ ಕಾರ್ಯಕಲಾಪಗಳಲ್ಲಿ ಪಾಲ್ಗೊಳಿ ಅವುಗಳ ಸದಸ್ಯರಾಗಿ ನಿಮ್ಮ ವ್ಯಕ್ತಿತ್ವ ವಿಚಾರ ವಿಕಸಿತವಾಗುತ್ತದೆ ಎಂದು ಹೇಳುತ್ತಿದ್ದರು. ಈ ಸಂಸ್ಥೆಗಳಲ್ಲಿ ಹಿಂದೂ ಧರ್ಮದ ಇತರ ಮಠಮಾನ್ಯಗಳಂತೆ ಜಾತೀಯತೆಯಾಗಲಿ ಮೇಲುಕೀಳೆಂಬ ಭಾವನೆಯಿಲ್ಲವಾದ್ದರಿಂದ ಸಮಾಜದೊಂದಿಗೆ ಬೆರೆಯಬಹುದು. ವ್ಯವಹರಿಸಬಹುದು. ಇದರಿಂದಾಗಿ ಅಸ್ಪೃಶ್ಯತೆಯು ತಾನಾಗಿಯೇ ಹೋಗುತ್ತದೆ ಎಂದು ಅಯ್ಯರ್ ಹೇಳುತ್ತಿದ್ದರು.

ಹೀಗೆ ಅಯ್ಯರ್‌ರವರು ಪಂಚಮ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಬಗ್ಗೆ ಬಹಳ ಆಸಕ್ತಿಯಿಂದ ನಿಷ್ಠೆಯಿಂದ ಮತ್ತು ಪಂಚಮರ ಮೇಲಿದ್ದ ಕಳಕಳಿಯಿಂದಾಗಿ ವಿದ್ಯಾರ್ಥಿಗಳ ಪರೀಕ್ಷೆ ಫಲಿತಾಂಶ ಹಾಗೂ ವಿದ್ಯಾರ್ಥಿನಿಲಯದ ಮೇಲ್ವಿಚಾರಣೆಯನ್ನು ಜವಾಬ್ದಾರಿಯಿಂದ ನೋಡಿಕೊಳ್ಳುತ್ತಿದ್ದರು. ಪ್ರತಿಯೊಬ್ಬ ವಿದ್ಯಾರ್ಥಿಯ ಸಂಕ್ಷಿಪ್ತ ಚರಿತ್ರೆಯನ್ನು ಒಂದು ಕಡತದಲ್ಲಿ ಬರೆದಿಡುತ್ತಿದ್ದರು. ಪರೀಕ್ಷೆಯಲ್ಲಿ ಮುಂದಿನ ತರಗತಿಗೆ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಶಾಲಾ ಕಾಲೇಜುಗಳಿಗೆ ವಿದ್ಯಾರ್ಥಿನಿಲಯಗಳಿಗೆ ಸೇರುವಂತೆ ಪತ್ರವನ್ನು ಬರೆಯುತ್ತಿದ್ದರು. ಆ ಪತ್ರದಲ್ಲಿ ಕೊನೆ ದಿನ ಅಂತ ಬರಬಾರದು ಎರಡು ದಿನ ಮೊದಲೇ ಬಂದು ಸೇರಬೇಕು ಎಂದು ಎಚ್ಚರಿಕೆಯನ್ನು ಸಹ ನೀಡುತ್ತಿದ್ದರು. ವಿದ್ಯಾರ್ಥಿಗಳಿಗೆ ಕಾಗದ ಪತ್ರವನ್ನು ಬರೆಯುತ್ತಿದ್ದರು ಎಂಬ ವಿಷಯವನ್ನು ಡಿ.ಆರ್. ನಂಜಯ್ಯನವರು ತಮ್ಮ ಆತ್ಮಕಥನ ನೆನಪುಗಳು ಎಂಬ ಕೃತಿಯಲ್ಲಿ ಬರೆದುಕೊಂಡಿರುವುದನ್ನು ಗಮನಿಸಬಹುದು.[೧೩]

### ಮನೆಪಾಠ

ಅಯ್ಯರ್ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅನುತ್ತೀರ್ಣರಾದ ಹುಡುಗರಿಗೆ ಕೊಲಿಜಿಯೆಟ್ ಪ್ರೌಢಶಾಲೆಯ ಉಪಧ್ಯಾಯರಾಗಿದ್ದ ಟಿ.ಎಸ್. ಕೃಷ್ಣಅಯ್ಯರ್ ಬಿ. ಸತ್ಯಭೋಮಾಚಾರ್‌ರವರಿಂದ ಮನೆಪಾಠವನ್ನು ಹೇಳಿಕೊಡುವಂತೆ ಒಪ್ಪಿಸಿ ಅವರಿಗೆ ತಲಾ ೨೫ ರೂ.ಗಳಂತೆ ನೀಡುತ್ತಿದ್ದರು. ಅಲ್ಲದೆ ಬೆಂಗಳೂರಿನ ಟ್ರೀಟ್ ಆಂಡ್ ಬುಕ್ ಸೊಸೈಟಿಯಿಂದ ಪಠ್ಯಪುಸ್ತಕಗಳನ್ನು ಮುಂಗಡವಾಗಿ ಹುಡುಗರಿಗೆ ಕೊಡಿಸಿ ಅಥವಾ ತಾವೇ ತೆಗೆದುಕೊಡುತ್ತಿದ್ದರು. ಅದರ ಹಣವನ್ನು ಸರ್ಕಾರದಿಂದ ವಿದ್ಯಾರ್ಥಿವೇತನ ಮಂಜೂರಾದಾಗ ವಾಪಾಸು ಮಾಡುತ್ತಿದ್ದು. ಹುಡುಗರ ಮನೆಪಾಠ ಬಟ್ಟೆ ಪುಸ್ತಕ ಮೊದಲಾದ ವಿಷಯಗಳ ಲೆಕ್ಕಚಾರವನ್ನೆಲ್ಲಾ ಬಿ. ಬೊಮ್ಮಯ್ಯ ಎಂಬುವರು ನೋಡಿಕೊಳ್ಳುತ್ತಿದ್ದರು ಎಂದು ಡಾ. ಜಿ. ಗೋಪಾಲರವರು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ತಿಳಿಸಿರುತ್ತಾರೆ.

### ರಾವಣಿ ಘಟನೆ

ಮಳವಳ್ಳಿ ತಾಲ್ಲೂಕು ರಾವಣಿ ಗ್ರಾಮದಲ್ಲಿ ಪ್ರಾಥಮಿಕ ಶಾಲೆಯನ್ನು ಉದ್ಘಾಟನೆ ಮಾಡುವ ಕಾರ್ಯಕ್ರಮದಲ್ಲಿ ಅಯ್ಯರ್‌ರವರು ೧೯೨೦ರ ಮಾರ್ಚ್ ತಿಂಗಳಿನಲ್ಲಿ ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ರಾವಣಿ ಗ್ರಾಮದಲ್ಲಿ ಊರಿನ ಗ್ರಾಮದೇವತೆಗಳಾದ ಚಿಕ್ಕತಾಯಮ್ಮ ಮತ್ತು ದೊಡ್ಡ ತಾಯಮ್ಮನ ಜಾತ್ರೆಯು ನಡೆದಿತ್ತು. ಇಂದಿಗೂ ಸಹ ಈ ಜಾತ್ರೆಯು ವರ್ಷಕ್ಕೊಮ್ಮೆ ಮಾರ್ಚ್ ಅಥವಾ ಏಪ್ರಿಲ್ ತಿಂಗಳಿನಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ವಿದ್ಯಾವಂತ ಸವರ್ಣೀಯರ ಉತ್ತೇಜನಕ್ಕೆ ಒಳಗಾದ ಆದಿಕರ್ನಾಟಕದ ಜನರು ದನ ಎಮ್ಮೆ ಮೇಕೆಯನ್ನು ಬಲಿಕೊಡುವ ಸಂಪ್ರದಾಯ ಮುಂದುವರೆದುಕೊಂಡು ಬಂದಿತ್ತು. ಹಾಗೆಯೇ ಸವರ್ಣೀಯರು ತಮ್ಮ ಮನೆಯಲ್ಲಿ ಸತ್ತ ದನ ಎಮ್ಮೆಗಳನ್ನು ಹೊರ ಹಾಕುವ ಕಾರ್ಯಗಳನ್ನು ಈ ಜನಾಂಗದವರಿಗೆ ನೀಡುತ್ತಿದ್ದರು. ಬಲಿ ಕೊಡುವುದನ್ನು ಗಮನಿಸಿದ ಅಯ್ಯರ್ ಪ್ರಾಣಿಬಲಿ ಮಾಡದಂತೆ ಕಟ್ಟಪ್ಪಣೆಯನ್ನು ಜಾರಿಗೆ ತಂದರು. ಅಲ್ಲದೆ ಸವರ್ಣೀಯರು ನೀಡುತ್ತಿದ್ದ ಸತ್ತ ದನ ಎಮ್ಮೆಗಳನ್ನು ಮುಟ್ಟಬಾರದೆಂದು ಆದಿಕರ್ನಾಟಕದ ಜನರಿಗೆ ಹೇಳಿದರು. ಇವರ ಮಾತಿನಿಂದ ಪ್ರಭಾವಿತರಾದ ಪಂಚಮರು ಅಂದಿನಿಂದಲೇ ಎಮ್ಮೆ ದನ ಮೇಕೆಗಳನ್ನು ಕಡಿಯುವುದನ್ನು ನಿಲ್ಲಿಸಿದರಲ್ಲದೆ ಸವರ್ಣೀಯರು ಕೊಡುತ್ತಿದ್ದ ಸತ್ತ ದನ ಎಮ್ಮೆಗಳನ್ನು ಮುಟ್ಟುವುದಿಲ್ಲವೆಂದು ಪ್ರಮಾಣ ಮಾಡಿದರು.

ಹಾಗೆಯೇ ಇದೇ ಗ್ರಾಮದಲ್ಲಿ ನೀರಿನ ಕಟ್ಟೆಯೊಂದು ಇದ್ದು ಇದು ಊರಗೌಡ ಒಕ್ಕಲಿಗನ ಜಮೀನಿಗೆ ಹೊಂದಿಕೊಂಡಂತೆ ಇದ್ದಿತು. ಆದರೆ ಆದಿಕರ್ನಾಟಕ ಜನ ಈ ಕಟ್ಟೆಯ ನೀರಿನಲ್ಲಿ ಬಟ್ಟೆ ತೊಳೆಯಲು ಮತ್ತು ದನಕರುಗಳಿಗೆ ನೀರು ಕುಡಿಸಲು ಹೋದಾಗ ಎರಡು ಕೋಮಿನ ನಡುವೆ ಘರ್ಷಣೆ ನಡೆದು ಕಟ್ಟೆಯ ನೀರನ್ನು ಬಳಸದಂತೆ ನಿಷೇಧಿಸಿದ್ದರಲ್ಲದೆ ಮುಚ್ಚಿದರು. ಈ ವಿಷಯವನ್ನು ಅಯ್ಯರ್‌ರವರ ಬಳಿ ಆದಿಕರ್ನಾಟಕದ ಜನರು ಹೇಳಿಕೊಂಡಾಗ ಅದನ್ನು ಪರಿಶೀಲಿಸಿದ ಅಯ್ಯರ್ ಮಳವಳ್ಳಿ ತಾಲೂಕಿನ ಅಮಾಲ್ದಾರರನ್ನು ಕರೆಯಿಸಿ ವಿಚಾರಿಸಿದಾಗ ಸವರ್ಣೀಯರ ಉಪಯೋಗಕ್ಕಾಗಿ ಇನ್ನು ಎರಡು ಬಾವಿಗಳಿರುವುದು ತಿಳಿದುಬಂದಿತು. ಸವರ್ಣೀಯರ ಮನ ಒಲಿಸಿದ ಅಯ್ಯರ್ ಮುಚ್ಚಲಾಗಿದ್ದ ಕಟ್ಟೆಯನ್ನು ತೆಗೆಸಿ ಆದಿಕರ್ನಾಟಕ ಜನರು ಕಟ್ಟೆಯ ನೀರನ್ನು ಬಳಸಿಕೊಳ್ಳುವಂತೆ

ಅರ್ಪಣೆ ಮಾಡಿಸಿದರು. ಇದರಿಂದಾಗಿ ಅಯ್ಯರ್ ಮೈಸೂರು ಸಂಸ್ಥಾನದಲ್ಲಿ ಎಷ್ಟು ಪ್ರಭಾವಶಾಲಿಗಳಾಗಿದ್ದರು ಎಂಬುದು ತಿಳಿದುಬರುತ್ತದೆ. ಈ ವಿಷಯವನ್ನು ಕ್ಷೇತ್ರಕಾರ್ಯಕೈಗೊಂಡು ಗ್ರಾಮಕ್ಕೆ ಭೇಟಿ ನೀಡಿದಾಗ ತಾಲ್ಲೂಕು ಪಟ್ಟಣ ಪಂಚಾಯ್ತಿಯ ಮಾಜಿ ಅಧ್ಯಕ್ಷರಾದ ಸಿದ್ಧಲಿಂಗಮೂರ್ತಿಯವರು ತಿಳಿಸಿದರಲ್ಲದೆ ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಟಿ.ಎಚ್. ಮೂರ್ತಿಯವರು ಆರ್ ಗೋಪಾಲಸ್ವಾಮಿ ಅಯ್ಯರ್ ಎಂಬ ಚಿಕ್ಕ ಲೇಖನ ಮಾಲೆಯಲ್ಲಿ ಬರೆದಿರುವುದನ್ನು ಗಮನಿಸಬಹುದು. ಅಲ್ಲದೆ ದೂರದ ಗ್ರಾಮಗಳಿಗೆ ಭೇಟಿ ಕೊಡುವಾಗ ಎರಡು ದಿನ ಮೊದಲೇ ಅಲ್ಲಿನ ಅಧಿಕಾರಿಗಳಿಗೆ ಅಥವಾ ಅಮುಲ್ದಾರರಿಗೆ ಪತ್ರ ಮೂಲಕ ತಿಳಿಸುತ್ತಿದ್ದರು. ಆ ಸಂದರ್ಭದಲ್ಲಿ ಅನೇಕ ಅಧಿಕಾರಿಗಳನ್ನು ಅವರನ್ನು ಹಿಂಬಾಲಿಸುತ್ತಿದ್ದರು. ಪಂಚಮರು ಹೇಳಿಕೊಂಡ ಸಮಸ್ಯೆಗಳಿಗೆ ಪರಿಹಾರ ಮಾಡಿಸುತ್ತಿದ್ದರಲ್ಲದೆ. ಆ ಸಮಸ್ಯೆಗಳನ್ನು ಬಗೆಹರಿಸುವಂತೆ ಅಧಿಕಾರಿಗಳಿಗೆ ಸೂಚನೆಯನ್ನು ನೀಡುತ್ತಿದ್ದರು.

ಹೀಗೆ ಹಳ್ಳಿ ಹಳ್ಳಿಗೆ ಭೇಟಿ ನೀಡುತ್ತಿದ್ದ ಅಯ್ಯರ್ ಜೂನ್ ೧೯೩೫ರಲ್ಲಿ ಹೊಳೆನರಸಿಪುರಕ್ಕೆ ಭೇಟಿಕೊಟ್ಟರು. ಅಲ್ಲಿ ಅಪರ ವಿದ್ಯಾರ್ಥಿಯಾದ ಎಚ್.ಆರ್. ಕಾಳಯ್ಯ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅನುತ್ತೀರ್ಣನಾಗಿದ್ದು ಊರಿನಲ್ಲೇ ಬಿಳದುಬಿಟ್ಟದರು. ಇವರನ್ನು ಕಂಡ ಅಯ್ಯರ್ ನಾಳೆಯೇ ಬೆಂಗಳೂರಿನಲ್ಲಿ ಬಂದು ನನ್ನನ್ನು ಭೇಟಿಯಾಗು ಎಂದು ಹೇಳಿ ಗ್ರಾಮದ ಕುಂದುಕೊರತೆಗಳನ್ನು ಬಗೆಹರಿಸಿ ಬೆಂಗಳೂರಿಗೆ ಹೋದರು. ಬಡವರಾದ ಕಾಳಯ್ಯನವರು ಮೂರು ದಿನಗಳ ಕಾಲ ಬೆಂಗಳೂರಿಗೆ ಕಾಲ್ನಡಿಗೆಯಲ್ಲಿ ಹೋಗಿ ಅಯ್ಯರ್‌ರವರನ್ನು ಭೇಟಿ ಮಾಡಿದರು. ಇವರ ಬಡತನದ ಬಗ್ಗೆ ಮರುಕ ಪಟ್ಟ ಅಯ್ಯರ್ ಬೆಂಗಳೂರಿನ ಐ.ಜಿ.ಪಿ.ಯವರನ್ನು ಭೇಟಿ ಮಾಡಿ ಕಾಳಯ್ಯನವರಿಗೆ ಅಂದೇ ಪೋಲೀಸ್ ಕಾನ್‌ಸ್ಟೇಬಲ್(ಪೇದೆ) ಹುದ್ದೆಯನ್ನು ಕೊಡಿಸಿದರು.

**ಸೋಮನಹಳ್ಳಿ ಘಟನೆ**

ಅಯ್ಯರ್‌ರವರ ದಲಿತೋದ್ಧಾರ ಕಾರ್ಯಗಳಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಸೋಮನಹಳ್ಳಿಯ ಘಟನೆಯು ಪ್ರಮುಖವಾದುದು. ಈ ಹಳ್ಳಿಯು ನಾಡು ಕಂಡ ಒಬ್ಬ ಪ್ರಭಾವಿ ಮುಖ್ಯಮಂತ್ರಿಯ ಊರು. ಹಾಗೂ ಮೈಸೂರು ಸಂಸ್ಥಾನದ ನಾಲ್ವಡಿಯವರ ಸರ್ಕಾರದಲ್ಲಿ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರು ಮತ್ತು ಮಿರ್ಜಾಇಸ್ಮಾಯಿಲ್‌ರ ಆಪ್ತ ಸ್ನೇಹಿತರಾಗಿದ್ದ ಸೋಮನಹಳ್ಳಿ ಚಿಕ್ಕೇಗೌಡ ಮಲ್ಲಯ್ಯನವರ ಊರು. ಶ್ರೀಯುತರು ಸಾರ್ವಜನಿಕ ಸೇವೆಗೆ ತಮ್ಮ ಇಡೀ ಜೀವನವನ್ನೇ ಮುಡಿಪಾಗಿಟ್ಟರು. ಬಾಬಾಸಾಹೆಬ್ ಅಂಬೇಡ್ಕರ್‌ರವರ ಸಂವಿಧಾನದ ಶಕ್ತಿಯನ್ನು ಬಹಳ ಹಿಂದೆಯೇ ಮೈಸೂರು ರಾಜಕಾರಣದಲ್ಲಿ ಜಾರಿಗೆ ತಂದ ಕ್ರಾಂತಿಕಾರಿ. ಉತ್ತಮ ಗ್ರಾಮ ಚಿಂತಕರಾದ ಇವರು ಹಳ್ಳಿಗಳನ್ನು ಸಬಲೀಕರಣಗೊಳಿಸುವ ಕ್ರಿಯಾಶೀಲ ಚಿಂತನೆಯನ್ನು ಹೊಂದಿದವರು. ಅಕ್ಷರ ಜ್ಞಾನವೇ ಇಲ್ಲದ ಸಂದರ್ಭದಲ್ಲಿ ಪ್ರತಿಸಮುದಾಯಕ್ಕೂ ಪ್ರಾಥಮಿಕ ಶಿಕ್ಷಣ ದೊರಕಿಸಿಕೊಡಲು ಶ್ರಮಿಸಿ ವಿಶ್ವವಿದ್ಯಾಲಯ ಶಿಕ್ಷಣಕ್ಕಿಂತಲೂ ಪ್ರಾಥಮಿಕ ಶಿಕ್ಷಣಕ್ಕೆ ತೀವ್ರ ಗಮನ ನೀಡಲು ಸರ್ಕಾರವನ್ನು ಒತ್ತಾಯಿಸಿದರು. ಹಳ್ಳಿಯ ಸಾಮಾಜಿಕ ಮತ್ತು ಆರ್ಥಿಕತೆಯ ಮೂಲಗಳಾದ ಕೆರೆಗಳನ್ನು

ಪುನರುಜ್ಜೀವನಗೊಳಿಸಿದವರಲ್ಲದೆ ಹೊಸ ಕೆರೆಗಳ ನಿರ್ಮಾಣಕ್ಕೂ ಕಾರಣರಾದರು. ಹಾಗೂ ಗ್ರಾಮೀಣ ಜನರ ಮಾರಕವಾದ ಮಧ್ಯಪಾನದ ವಿರುದ್ಧ ಹೋರಾಡಿದವರು. ಆದಿಕರ್ನಾಟಕ ಮತ್ತು ಆದಿ ದ್ರಾವಿಡರಿಗೆ ರಾಜಕೀಯ ಅಧಿಕಾರ ಒದಗಿಸಲು ಶ್ರೀಯುತರು ಶ್ರಮಿಸಿದ್ದಾರೆ. ತಮ್ಮ ಊರಾದ ಸೋಮನಹಳ್ಳಿಯಲ್ಲಿ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿ ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಿ ಸಮಾನತೆ ಸಹಪಂಕ್ತಿಯ ಅವಕಾಶವನ್ನು ನೀಡಿ ಕ್ರಾಂತಿಯನ್ನೇ ಮಾಡಿದರು.

[illegible]ರಲ್ಲಿ ಗಾಂಧೀಜಿಯು ಕರ್ನಾಟಕಕ್ಕೆ ಬಂದಾಗ ಇಲ್ಲಿಯ ವಿದ್ಯಾರ್ಥಿನಿಲಯಕ್ಕೆ ಭೇಟಿ ನೀಡಿ [illegible] ಸಂತೋಷದಿಂದ "I am very gland to know that there is Harijan boy also in the hostel"[13] ಎಂದು ಹೇಳುತ್ತಾ ಎಸ್.ಸಿ. ಮಲ್ಲಯ್ಯನವರನ್ನು ಕೊಂಡಾಡಿದರು. ಹೀಗೆ ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಪ್ರಭಾವಿ ವ್ಯಕ್ತಿಯಾಗಿ ತಮ್ಮದೆಯಾದ ವಿಶೇಷ ಛಾಪನ್ನು ಮೂಡಿಸಿಕೊಂಡಿದ್ದ ಎಸ್.ಸಿ. ಮಲ್ಲಯ್ಯನವರು ಎಲ್ಲೋ ಒಂದು ಕಡೆ ತಮ್ಮ ಜಾತಿಯವರ ಸ್ವಾರ್ಥಿಗಳಾಗಿರುವುದು ತಿಳಿದುಬರುತ್ತದೆ. ಅಂದರೆ ತಮ್ಮ ಊರಿನಲ್ಲೇ ಆದಿಕರ್ನಾಟಕ (ಅಸ್ಪೃಶ್ಯ) ಜನಾಂಗದವರು ಒಂದು ಹೊಸ ಬಡಾವಣೆಗಾಗಿ ಅಂದಿನ ಸರ್ಕಾರಕ್ಕೆ ಅರ್ಜಿಸಲ್ಲಿಸಿ ಹನ್ನೆರಡು ವರ್ಷಗಳಿಂದಲೂ ಪ್ರತಿ ವರ್ಷವೂ ತೆರಿಗೆ ಕಟ್ಟಿದ್ದರಲ್ಲದೆ ಹನ್ನೆರಡು ವರ್ಷಗಳಲ್ಲಿ ನಾಲ್ಕರಿಂದ ಆರು ಅರ್ಜಿಗಳನ್ನು ಸರ್ಕಾರಕ್ಕೆ ಬರೆದಿದ್ದರು. ಆದರೆ ಪ್ರಭಾವಿ ರಾಜಕಾರಣಿ ಮತ್ತು ಜನಪ್ರದಿನಿಧಿಯಾಗಿದ್ದ ಎಸ್.ಸಿ. ಮಲ್ಲಯ್ಯ ಮತ್ತು ಎಸ್.ಸಿ. ಕೆಂಚೇಗೌಡರು ತಮ್ಮ ಪ್ರಭಾವ ಬಳಸಿಕೊಂಡು ಆದಿಕರ್ನಾಟಕದ ಜನರು ಸರ್ಕಾರಕ್ಕೆ ಸಲ್ಲಿಸಿದ್ದ ಅರ್ಜಿಯನ್ನು ತಾಲೂಕು ಕೇಂದ್ರವಾದ ಮದ್ದುರಿನಲ್ಲೇ ತಡೆಹಿಡಿದ್ದರಲ್ಲದೆ ಅದು ಮುಂದಿನ ಕ್ರಮಕ್ಕೆ ಹೋಗದಂತೆ ನೋಡಿಕೊಂಡಿದ್ದರು. ಕಾರಣ ಬಡಾವಣೆಗೆ ಕೇಳ ಅರ್ಜಿ ಸಲ್ಲಿಸಿದ್ದ ಸ್ಥಳ ಕೆಂಚೇಗೌಡರ ಹೊಲವಾಗಿತ್ತು. ಇದರಿಂದ ಬೇಸತ್ತು ನೊಂದ ಇದೇ ಗ್ರಾಮದ ಅಯ್ಯರ್‌ರವರ ಮೆಚ್ಚಿನ ವಿದ್ಯಾರ್ಥಿಯಾದ ರಾಮಸಿಂಗಯ್ಯನವರು ಈ ವಿಷಯವನ್ನು ಕುರಿತಂತೆ ಅಯ್ಯರ್‌ರವರಿಗೆ ಪತ್ರಬರೆದರು. ವಿಷಯವನ್ನು ತಿಳಿದ ಅಯ್ಯರ್ ಮದ್ದೂರಿಗೆ ಬಂದು ಅಮಾಲ್ದಾರರ ಮನೆಯಲ್ಲಿ ಸ್ವಲ್ಪ ಸಮಯ ವಿಶ್ರಾಂತಿ ಪಡೆದು ಎರಡು ದಿನ ಪ್ರವಾಸಿ ಮಂದಿರದಲ್ಲೆ ಉಳಿದು ಕೊಂಡರು. ಅಯ್ಯರ್ ಈ ಹಿಂದೆ ಮಂದ್ದೂರಿಗೆ ಬಂದಾಗಲೆಲ್ಲ ಮಲ್ಲಯ್ಯನವರನ್ನು ಭೇಟಿ ಮಾಡುತ್ತಿದ್ದರು ಹಾಗೂ ಅವರಿಗೆ ತಾವು ಬರುವ ವಿಷಯವನ್ನು ತಿಳಿಸಿ ಬರುತ್ತಿದ್ದರು. ಆದರೆ ಈ ಬಾರಿ ಹಾಗೆ ಮಾಡಲಿಲ್ಲ. ಎಲ್ಲಾ ಕಾಗದ ಪತ್ರಗಳನ್ನು ಪರಿಶೀಲಿಸಿದ ನಂತರ ಮಲ್ಲಯ್ಯನವರನ್ನು ಪ್ರ[illegible] ಇದಕ್ಕೆ [illegible] ವಿಚಾರಿಸಿದರು. ಕೊನೆಗೆ ೧೯೩೩ರಲ್ಲಿ ಆದಿಕರ್ನಾಟಕ ಜನರಿಗೆ ಬಡಾವಣೆಗೆ ಬೇಕಾದ ಸ್ಥಳವನ್ನು ಮಂಜೂರು ಮಾಡಿಸಿದರು.[14] ಇಲ್ಲಿ ಕಂಡುಬರುವ ಒಂದು ವಿಷಯವೆಂದರೆ ಸಂಸ್ಥಾನದಲ್ಲಿ ಎಂಥ ಪ್ರಭಾವಶಾಲಿ ವ್ಯಕ್ತಿಗಳಾಗಿದ್ದರೂ ಅಯ್ಯರ್‌ರವರಿಗೆ ಯಾರು ಸಹ ಮರುಪ್ರಶ್ನೆ ಮಾಡುತ್ತಿರಲಿಲ್ಲ. ಏಕೆಂದರೆ ಮಹಾರಾಜರಿಂದ ಅವರಿಗೆ ವಿಶೇಷ ಅಧಿಕಾರ ನೀಡಿದ್ದೂ ಮತ್ತು ಯಾವುದೇ [illegible] ಅನ್ಯಾಯವನ್ನು ಖಂಡಿಸುತ್ತಿದ್ದವರು ಹಾಗೂ ಎಲ್ಲಾ ಪ್ರೀತಿ ಗೌರವಕ್ಕೊಳ ಗಾಗಿದ್ದರು.

### ಹೆಮ್ಮನಹಳ್ಳಿಯ ಘಟನೆ

ಇಂತಹದ್ದೇ ಮತ್ತೊಂದು ಘಟನೆಯು ಮಂದ್ದೂರು ತಾಲೂಕು ಹೆಮ್ಮನಹಳ್ಳಿಯಲ್ಲಿ ನಡೆದಿತ್ತು. ಲೆಕ್ಕಾಧಿಕಾರಿಯಾಗಿ ನಿವೃತ್ತಿ ಹೊಂದಿದ ಪ್ರಥಮ ತಲೆಮಾರಿನ ದಲಿತ ಕವಿಗಳಲ್ಲಿ ಒಬ್ಬರಾದ ಶ್ರೀಯುತ ಜಿ. ವೆಂಕಟಯ್ಯನವರು ಇದೇ ಗ್ರಾಮದವರಾಗಿದ್ದು ಪಂಚಮರ ಬಡಾವಣೆಗೆ ಮತ್ತು ತಮ್ಮ ದಾಯಾದಿಗಳು ವಾಸವಾಗಿದ್ದ ನಿಡಗಟ್ಟ ಗ್ರಾಮದ ಪಂಚಮರ ಬಡಾವಣೆಗಾಗಿ ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸಿದ್ದರು. ಇಲ್ಲಿಯೂ ಸಹಾ ಬಡಾವಣೆಗಾಗಿ ಕೇಳಿದ ಸ್ಥಳವು ಶ್ರೀಯುತ ಎಸ್.ಸಿ. ಮಲ್ಲಯ್ಯನವರ ಬಂದುಗಳಾಗಿದ್ದ ಕೆಂಪಟ್ಟೆಗೌಡರಿಗೆ ಸೇರಿದ್ದಿತು. ಹಾಗಾಗಿ ಹತ್ತು ವರ್ಷಗಳಿಂದಲೂ ಸಲ್ಲಿಸಿದ್ದ ಅರ್ಜಿಗಳು ಕಾಣೆಯಾಗಿದ್ದವು. ಈ ವಿಷಯ ಕುರಿತು ಅಯ್ಯರ್‌ರವರಿಗೆ ತಿಳಿಸಿದಾಗ ಅಯ್ಯರ್‌ರವರು ಮದ್ದೂರಿನ ಅಮಾಲ್ದಾರರಿಗೆ ಪತ್ರ ಬರೆದು ಸೋಮನಹಳ್ಳಿಯಲ್ಲಿ ತೆಗೆದುಕೊಂಡ ತೀರ್ಮಾನದಂತೆಯೇ ಹೆಮ್ಮನಹಳ್ಳಿಗೂ ತೆಗೆದುಕೊಳ್ಳಿ ಎಂದು ಪತ್ರ ಬರೆದರು. ಈ ಪತ್ರದಿಂದ ಪ್ರಭಾವಿತರಾದ ಅಮಾಲ್ದಾರರು ಕೆಂಪಟ್ಟೆಗೌಡರ ಹೊಲವನ್ನು ಪಂಚಮರ ನಿವಾಸಕ್ಕಾಗಿ ಬಿಡುಗಡೆ ಮಾಡಿದರು. ಪರಿಣಾಮವಾಗಿ ಕೋಪಗೊಂಡ ಗೌಡರು ಪ್ರಭಾವಿ ವ್ಯಕ್ತಿಯಾದ್ದರಿಂದ ಹದಿನೈದು ದಿನಗಳೊಳಗೆ ಗುಮಾಸ್ತರಾಗಿದ್ದ ಜಿ. ವೆಂಕಟಯ್ಯನವರನ್ನು ತಿಪಟೂರಿನ ಹತ್ತಿರವಿದ್ದ ಕೊಪ್ಪ ಎಂಬ ಗ್ರಾಮಕ್ಕೆ ವರ್ಗ ಮಾಡಿಸಿದರು. ಇನ್ನೂ ನಿಡಗಟ್ಟ ವಿಷಯವಾಗಿ ಇಡಿಗ ಜನಾಂಗಕ್ಕೆ ಸೇರಿದ ಅಪ್ಪಾಜಿಗೌಡರು ಹೆಮ್ಮನಹಳ್ಳಿಯಲ್ಲಿ ತೆಗೆದುಕೊಂಡ ನಿರ್ಧಾರಕ್ಕೆ ಹೆದರಿ ಯಾವ ತಕಾರು ಮಾಡದೆ ಪಂಚಮರಿಗೆ ಆರು ಎಕರೆ ಹೊಲವನ್ನು ಬಡಾವಣೆಗಾಗಿ ಬಿಟ್ಟುಕೊಟ್ಟರು.

### ಹುಲಿಯೂರು ದುರ್ಗ

ಗ್ರಾಮೀಣ ಪ್ರದೇಶದಲ್ಲಿರುವ ಹೊಟೆಲ್‌ಗಳು ವಿಕೃತವಾದ ಬಗೆಯಲ್ಲಿ ಅಸ್ಪೃಶ್ಯತೆಯನ್ನು ಆಚರಣೆ ಮಾಡುವುದನ್ನು ನಾವೆಲ್ಲ ಗಮನಿಸಿರುವ ವಿಷಯ. ಸಾಮಾನ್ಯವಾಗಿ ಗ್ರಾಮಗಳಲ್ಲಿ ಲಿಂಗಾಯಿತರು ಕುರುಬರು ಬೆಸ್ತರು ಗಾಣಿಗರು ಆ ಊರಿಗೆ ಸಂಬಂಧಿಸಿದಂತೆ ಸಾರ್ವಜನಿಕ ಸ್ಥಳಗಳಲ್ಲಿ ಹೋಟೆಲ್‌ಗಳನ್ನು ತೆರೆದಿರುತ್ತಾರೆ. ಅಲ್ಲಿ ಅದೇ ಊರಿನ ಹೊಲೆಯ ಮತ್ತು ಮಾದಿಗರು ಚಹ ಸೇವನೆಗೆ ಬಂದರೆ ಸ್ವತಃ ತಮ್ಮ ಮನೆಯಿಂದ ಲೋಟ ತಂದು ಹೋಟೆಲ್ ಹೊರಗಡೆ ನಿಂತು ಚಹಾ ಕುಡಿದು ದೂರದಿಂದಲೇ ಮಾಲಿಕರು ಇಟ್ಟಿರುವ ತಟ್ಟೆಗೆ ನಿಗದಿಪಡಿಸಿದ ಹಣವನ್ನು ಹಾಕಿ ಹೋಗಬೇಕಾಗಿತ್ತು. ಲೋಟ ತರದೇ ಬಂದರೆ ಹೋಟೆಲ್‌ನ ಹೊರಗಡೆ ಇವರಿಗಾಗಿಯೇ ಸವರ್ಣೀಯರು ಪ್ರತ್ಯೇಕವಾಗಿ ಇಟ್ಟಿರುವ ಲೋಟವನ್ನು ತೆಗೆದುಕೊಂಡು ಚಹ ಕುಡಿದ ನಂತರ ಅದನ್ನು ಅವರೇ ತೊಳೆದು ಎಲ್ಲಿತ್ತೋ ಅಲ್ಲಿಯೇ ಇಟ್ಟು ಹೋಗಬೇಕಾದ ನಿಯಮ ಹಿಂದಿನಿಂದ ನಡೆದುಕೊಂಡು ಬಂದಿದೆ. ಇಂದು ಪ್ಲಾಸ್ಟಿಕ್ ಲೋಟಗಳು ಈ ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ಬಗೆಹರಿಸಿವೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುವುದನ್ನು ನಾವು ನೋಡಬಹುದು. ಇದನ್ನು ವಿರೋಧಿಸಿ ಪ್ರತಿಭಟಿಸಿದರೆ ನಡೆಯುವುದೇ ದೌರ್ಜನ್ಯ. ಇಂತಹ ಒಂದು ಘಟನೆಯು ಮಾಗಡಿ ತಾಲೂಕಿನ ಹುಲಿಯೂರು ದುರ್ಗ (ಈಗ ರಾಮನಗರ ತಾಲೂಕಿಗೆ ಸೇರ್ಪಡೆಗೊಂಡಿದೆ.)

ಜಾತ್ರೆಯಲ್ಲಿ ನಡೆದಿತ್ತು. ಜಾತ್ರೆಯಲ್ಲಿ ಹಾಕಿದ ಗುಡಿಸಲು ಹೋಟೆಲ್‌ಗಳಿಗೆ ಅಸ್ಪೃಶ್ಯರು ಹೋದರು. ಅಲ್ಲಿದ್ದ ಊರಿನ ಗೌಡರು ಮತ್ತು ಸವರ್ಣೀಯರು ಒಳಹೋದ ಅಸ್ಪೃಶ್ಯರನ್ನು ಹೋಟೆಲ್‌ನಿಂದ ಹೊರೆಗೆ ದಬ್ಬಿದರು. ಇದನ್ನು ಸಹಿಸದ ಅಸ್ಪೃಶ್ಯರು ಅವರ ವಿರುದ್ಧ ತಿರುಗಿ ಬಿದ್ದರು. ಕಾರಣ ಇದೇ ವೇಳೆಗೆ ಮೈಸೂರು ಸಂಸ್ಥಾನವು ೧೯೩೨ರಲ್ಲಿ ಕಾನೂನು ಒಂದನ್ನು ಜಾರಿಗೆ ತಂದು ಅಸ್ಪೃಶ್ಯರು ಸಾರ್ವಜನಿಕ ಕೆರೆ ಕಟ್ಟೆ ಬಾವಿಗಳಲ್ಲಿ ಹೋಟೆಲ್‌ಗಳಿಗೆ ಮುಕ್ತಪ್ರವೇಶ ಮಾಡಬಹುದೆಂದು ಸರ್ಕಾರಿ ಆಜ್ಞೆಯನ್ನು ಹೊರಡಿಸಿತು. ಇದರಿಂದ ಪ್ರಭಾವಿತರಾಗಿದ್ದ ಈ ಗ್ರಾಮದ ಅಸ್ಪೃಶ್ಯರು ಸವರ್ಣೀಯರ ವಿರುದ್ಧ ತಿರುಗಿ ಬಿದ್ದರು. ಇದನ್ನು ಸಹಿಸದ ಸವರ್ಣೀಯರು ಅಸ್ಪೃಶ್ಯರನ್ನು ಅವಾಚ್ಯ ಶಬ್ದಗಳಿಂದ ನಿಂದಿಸುತ್ತಾ ಹೊರಹಾಕಿದರು. ಇದರಿಂದ ಮನನೊಂದು ಸಂಘಟಿತರಾದ ಅಸ್ಪೃಶ್ಯರು (ಈ ವೇಳೆಗಾಗಲೇ ಅಯ್ಯರ್‌ರವರ ಪ್ರಭಾವದಿಂದ ಶಿಕ್ಷಣ ಪಡೆದು ಅಕ್ಷರ ಜ್ಞಾನ ಬಲ್ಲವರಾಗಿದ್ದರು) ಮತ್ತು ಅಯ್ಯರ್‌ರವರ ಶಿಷ್ಯರುಗಳು ಒಟ್ಟಿಗೆ ಸೇರಿ ನಡೆದ ಘಟನೆಯ ಬಗ್ಗೆ ಅಯ್ಯರ್‌ರವರಿಗೆ ಪತ್ರ ಬರೆದರು. ಪತ್ರ ತಲುಪಿದ ದಿನವೇ ಬೆಂಗಳೂರಿನಿಂದ ಹುಲಿಯೂರು ದುರ್ಗಕ್ಕೆ ಬಂದ ಅಯ್ಯರ್ ಪೋಲೀಸ್ ಅಧಿಕಾರಿಗೆ ದೂರು ನೀಡಿದರು. ಪರಿಣಾಮವಾಗಿ ಪೋಲಿಸರು ಆ ದಿನವೇ ಇಬ್ಬರು ಗೌಡರನ್ನು ಬಂಧಿಸುವಂತೆ ಮಾಡಿದರು. ಇದರಿಂದ ಅಸ್ಪೃಶ್ಯರ ಹೋರಾಟಕ್ಕೆ ಜಯಲಭಿಸಿತು.

**ಸ್ವಾರ್ಟೆ ಕಮಿಟಿ**

ಬಾಬಾಸಾಹೇಬ್ ಡಾ. ಅಂಬೇಡ್ಕರ್‌ರವರು ಮೈಸೂರು ಸಂಸ್ಥಾನದ ಮುಖ್ಯ ಕಾನೂನು ಸಲಹೆಗಾರರಾಗಿದ್ದರು. ೧೯೩೦ರ ಮಾರ್ಚ್ ತಿಂಗಳಿನಲ್ಲಿ ಮೈಸೂರು ಸಂಸ್ಥಾನ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯ ಮುಖ್ಯ ಉದ್ದೇಶ ಅಸ್ಪೃಶ್ಯರಿಗಾಗಿ ಪ್ರಬಲವಾದ ಸಾಮಾಜಿಕ ಕೇಂದ್ರಗಳನ್ನು ತೆರೆದು ದೇಶದ ಸಂಸ್ಕೃತಿಗೆ ಸಂಬಂಧಪಟ್ಟ ಕಲೆಗಳಿಗೆ ಪ್ರೋತ್ಸಾಹ ಕೊಡುವುದಾಗಿತ್ತು. ಈ ಸಮಿತಿಯಲ್ಲಿ ಬಾಬಾಸಾಹೇಬ್ ಅಂಬೇಡ್ಕರ್‌ರವರು ಸೇರಿದರಿದಂತೆ ಶ್ರೀಯುತ ಸೋಲಂಕಿಯವರು ಎ.ವಿ. ಥಕ್ಕರ್ ಬಾಬಾರು ಸದಸ್ಯರಾಗಿದ್ದರು. ಈ ಸಮಿತಿಯ ಸಲಹೆಯಂತೆ ಸಾರ್ವಜನಿಕ ಕೆರೆ ಕಟ್ಟೆ ಬಾವಿ ನಾಲೆ ಮೊದಲಾದ ಸ್ಥಳಗಳಲ್ಲಿ ಅಸ್ಪೃಶ್ಯರು ನೀರು ಬಳಸುವುದನ್ನು ಯಾರಾದರೂ ತಡೆದರೆ ಅವರಿಗೆ ಶಿಕ್ಷೆ ವಿಧಿಸಲಾಗುವುದೆಂದು ಸರ್ಕಾರವು ೧೯೩೦ರ ಮಾರ್ಚ್‌ನಲ್ಲಿ ಆಜ್ಞೆ ಹೊರಡಿಸಿತು. ಹಾಗೂ ಬೊಂಬಾಯಿ (ಮುಂಬೈ) ವಿಧಾನ ಸಭೆಯಲ್ಲಿ ಅಸ್ಪೃಶ್ಯ ಜನಾಂಗವನ್ನು 'ಪಂಚಮ'ರು ಎಂಬುದರ ಬದಲಾಗಿ 'ಹರಿಜನ'ರು ಎಂದು ಕರೆಯುವಂತೆ ಒಂದು ವಿಧೇಯಕವನ್ನು ಕಾಂಗ್ರೆಸ್ ಮಂಡಿಸಿತು. ಆದರೆ ಈ ವಿದೇಯಕವನ್ನು ಅಂಬೇಡ್ಕರ್‌ರವರು ತಿರಸ್ಕರಿಸಿ ವಿಧೇಯಕದ ನಿರ್ಣಯವನ್ನು ಮೈಸೂರು ಸರ್ಕಾರ ಮಾನ್ಯ ಮಾಡಬಾರದೆಂದು ತಮ್ಮ ಆಚಿತ ವಿರೋಧವನ್ನು ವ್ಯಕ್ತಪಡಿಸಿದರು. ಆದರೂ ಸಹ ಸಂಸ್ಥಾನ ಅಂಬೇಡ್ಕರ್ ಮತ್ತು ಕಾಂಗ್ರೆಸ್‌ನ್ನು ಒಲೈಸುವ ದೃಷ್ಟಿಯಿಂದ ೧೯೩೨ರಲ್ಲಿ ಅಸ್ಪೃಶ್ಯರನ್ನು ಪಂಚಮರು ಅಥವಾ 'ಹರಿಜನ' ಎಂದು ಪುನರ್ ನಾಮಕರಣ ಮಾಡಿತ್ತಲ್ಲದೆ ಇದೇ ವರ್ಷದಲ್ಲಿ ಈಗಾಗಲೇ ಪ್ರಸ್ತಾಪಿಸಿದಂತೆ ಸಾರ್ವಜನಿಕ ಕೆರೆ ಕಟ್ಟೆ ಬಾವಿ ಕಾಲುವೆ ಮೊಲಾದ ಸ್ಥಳಗಳಲ್ಲಿ ನೀರು ತೆಗೆದುಕೊಳ್ಳಬಹುದೆಂದು ಆಜ್ಞೆಯನ್ನು ಹೊರಡಿಸಿತು.

## ಮಳವಳ್ಳಿಯ ಕುನ್ನಿರುಕಟ್ಟೆ ಘಟನೆ

ಅಯ್ಯರ್‌ರವರ ದಲಿತೋದ್ಧರಕ ಕಾರ್ಯಗಳಲ್ಲಿ ಕುನ್ನಿರು ಕಟ್ಟಿ ಘಟನೆಯು ಒಂದು. ಮೈಸೂರು ಸಂಸ್ಥಾನ ಹೊರಡಿಸಿದ ಆಜ್ಞೆ ಮತ್ತು ೧೯೨೭ರಲ್ಲಿ ಅಂಬೇಡ್ಕರ್‌ರವರ ಮುಂದಾಳತ್ವದಲ್ಲಿ ನಡೆದ ಚೌಡರ್ ಕೆರೆ ಹೋರಾಟದಿಂದ ಪ್ರಭಾವಿತರಾದ ಮಳವಳ್ಳಿಯ ಅಸ್ಪೃಶ್ಯ ಜನರು ಕುನ್ನಿರು ಕಟ್ಟೆಯ ನೀರನ್ನು ಬಳಸಲು ಮುಂದಾದರು. ಈ ಕುನ್ನಿರು ಕಟ್ಟೆ (ಇಂದು ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣಕ್ಕೆ ಹೊಂದಿಕೊಂಡಂತೆ ಎದುರಿಗೆ ಕಂಡುಬರುವ ಮತ್ತು ಬಲಭಾಗದ ಕಡೆ ಹಸಿರು ಪಾಚಿಗಟ್ಟಿದ ರೀತಿಯಲ್ಲಿ ಕಂಡುಬರುತ್ತವ ಮಲೀನಗೊಂಡ ಸ್ಥಳವಾಗಿದೆ.) ಈ ಕಟ್ಟೆ ಇದ್ದ ಸ್ಥಳದಲ್ಲಿ ತೋಟಗಾರಿಕೆ ಇಲಾಖೆ ಯವರು ಮತ್ತು ಪ್ರಭಾವಿ ಕೆಲವು ವ್ಯಕ್ತಿಗಳು ಸ್ಥಳವನ್ನು ಆವರಿಸಿಕೊಂಡಿರುತ್ತಾರೆ.ಏ ನೀರು ಕುಡಿಯಲು ಯೋಗ್ಯವಾಗಿದ್ದು ಖನಿಜಯುಕ್ತವಾದುದ್ದರಿಂದ ಟಿಪ್ಪುಸುಲ್ತಾನನು ಇಲ್ಲಿಂದ ನೀರನ್ನು ತರಿಸಿ ಕೊಳ್ಳುತ್ತಿದ್ದನಂತೆ. ಎತ್ತಣದಿಂದ ಎತ್ತಣಕ್ಕೆ ಸಂಬಂಧವಯ್ಯ ಎನ್ನುವ ಹಾಗೆ ಮಳವಳ್ಳಿಯಿಂದ ೨೫ ಕಿ.ಮೀ. ದೂರವಿರುವ ಶ್ರೀರಂಗಪಟ್ಟಣಕ್ಕೆ ನೀರು ತೆಗೆದುಕೊಂಡು ಹೋಗುತ್ತಿದ್ದರೆಂದರೆ ನಿಜವಾಗಿಯು ಆಶ್ಚರ್ಯಕರ ಮತ್ತು ನಂಬಲಾಸಾಧ್ಯವಾದ ಮಾತೆ ಎಂದು ಹೇಳಬಹುದು. ಈ ಕಾರಣದಿಂದಾಗಿ ಈ ಕಟ್ಟೆಯಲ್ಲಿ ಯಾರು ಪಾತ್ರೆ ದನ ಕರು ತೊಳೆಯುವುದಾಗಲಿ ಬಟ್ಟೆ ಒಗೆಯುವುದಾಗಲಿ ಮಾಡಬಾರ ದೆಂದು ಪುರಸಭೆಯು ಆಜ್ಞೆಯನ್ನು ಹೊರಡಿಸಿತ್ತು. ಆದರೆ ಈ ಕಟ್ಟೆಯ ನೀರನ್ನು ಅಸ್ಪಶ್ಯರು ಬಳಸುವಂತಿರಲ್ಲಿ. ಆದ್ದರಿಂದ ಮಳವಳ್ಳಿಯ ಎಂ. ಮಾದಯ್ಯ (ಮೇಸ್ಟ್ರು ಮಾದಯ್ಯ ಎಂದು ಪ್ರಸಿದ್ಧಿ ಹೊಂದಿದ್ದವರು. ಈಗಲೂ ಸಹ ಅವರ ಮನೆಯ ವಿಳಾಸ ಕೇಳಿದರೆ ಮೇಸ್ಟ್ರು ಮಾದಯ್ಯನವರ ಮನೆಯಾ ಎಂದು ಹೇಳುತ್ತಾರೆ. ಇವರು ಗಾಂಧೀಜಿಯು ಗುಜರಾತಿನಲ್ಲಿ ಸ್ಥಾಪಿಸಿದ್ದ ಸಬರಮತಿ ಆಶ್ರಮದಲ್ಲಿ ಹತ್ತು ತಿಂಗಳುಗಳ ಕಾಲ ಸೇವೆ ಮಾಡಿ ಗಾಂಧೀಜಿ ಮತ್ತು ಹರಿಜನ ಚಳುವಳಿಯಿಂದ ಪ್ರಭಾವಿತರಾಗಿ ತಮ್ಮ ಸ್ವ ಗ್ರಾಮಕ್ಕೆ ಬಂದಿದ್ದರು. ಇಲ್ಲಿ ಇನ್ನೊಂದು ಮುಖ್ಯವಾದ ವಿಷಾಯವೆಂದರೆ ಮಾದಯ್ಯನವರು ಅಯ್ಯರ್‌ರವರ ಶಿಷ್ಯರಾಗಿದ್ದು ಅವರಿಂದ ಸಬರಮತಿ ಆಶ್ರಮಕ್ಕೆ ಕಳುಹಿಸಲ್ಪಟ್ಟಿದ್ದರು.) ಇದೇ ವೇಳೆಗೆ ಮೈಸೂರು ಸಂಸ್ಥಾನ ಹೊರಡಿಸಿದ ಆಜ್ಞೆಯಿಂದಾಗಿ ಯಾವ ಹೋರಾಟಕ್ಕೆ ಅವಕಾಶ ಮಾಡಿಕೊಡದೆ ಅಮಾಲ್ದಾರರ ಮೂಲಕ ಕುನ್ನಿರುಕಟ್ಟೆಯ ಒಂದು ಭಾಗದಲ್ಲಿ ಅಸ್ಪೃಶ್ಯರು ನೀರು ತೆಗೆದುಕೊಳ್ಳಲು ಮೆಟ್ಟಿಲನ್ನು ಕಟ್ಟಿಸಿ ವ್ಯವಸ್ಥೆ ಮಾಡಿಸಿಕೊಟ್ಟರು. ಪರಿಣಾಮ ೧೯೩೨ ಎಪ್ರಿಲ್ ತಿಂಗಳ ಮೊದಲ ವಾರದಲ್ಲಿ ಕುನ್ನಿರುಕಟ್ಟೆಯ ನೀರು ತರಲು ತಮ್ಮ ಜನರನ್ನು ಮೆರವಣಿಗೆಯ ಮೂಲಕ ಹೋದರು. ಇದನ್ನು ಸಹಿಸಿದ ಸವರ್ಣೀಯರು ಮತ್ತು ಮುಸ್ಲಿಂರು ಮೆಟ್ಟಿಲುಗಳ ಮೇಲೆ ಮಲ ಪಾಪಸ್ ಕಳ್ಳಿಯನ್ನು ಕತ್ತರಿಸಿ ಹಾಕಿದರು.

ಹಾಗೆಯೇ ಹರಿಜನ (ಈ ಪದವನ್ನು ಇತ್ತೀಚೆಗೆ ಬಳಸಬಾರದೆಂದು ಕಾನೂನು ಜಾರಿಗೆ ತಂದಿದ್ದರೂ ನಮ್ಮ ಸವರ್ಣೀಯರೆನಿಸಿಕೊಂಡವರು ಹರಿಜನ ಬೀದಿ, ಎಕೆಸ್ ಬೀದಿ ಎಂದೆಲ್ಲಾ ಬಳಸುವುದನ್ನು ಗಮನಿಸಬಹುದು.) ಕೇರಿಯ ಮೇಲೆ ದಾಳ ಮಾಡಿದರು. ಈ ದಾಳಿಯಲ್ಲಿ ಇಪ್ಪತ್ತೆರಡು ಜನರನ್ನು ಥಳಿಸಿ ಮಾರಾಕಾಸ್ತ್ರಳಿಂದ ಹಲ್ಲೇ ಮಾಡಿದರು. ಹಾಗೂ ಸವರ್ಣೀಯರ ಮನೆಗಳಲ್ಲಿ ಜೀತಕ್ಕಿದ್ದ ಅಸ್ಪೃಶ್ಯರನ್ನು ಹೊಡೆದು ಓಡಿಸಿದರಲ್ಲದೆ ಸೀಮೆಎಣ್ಣೆ ಉಪ್ಪು, ಕಾಳು ಏನೂ ಸಹ

ಸಿಗದಂತೆ ಬಹಿಷ್ಕಾರ ಹಾಕಿದರು. ಇಂತಹ ಘಟನೆಗಳು ೨೧ನೇ ಶತಮಾನದಲ್ಲಿಯೂ ಮುಂದುವರೆದು ಕೊಂಡು ಬಂದಿರುವುದು ಜಾತ್ಯಾತೀತ ಮೌಲ್ಯಗಳನ್ನು ಹೊಂದಿರುವ ದೇಶಕ್ಕೆ ಕಳಂಕ ತರುವ ಸಂಗತಿಯೆಂದೇ ಹೇಳಬಹುದು. ಧೃತಿಗೆಟ್ಟ ಅಸ್ಪೃಶ್ಯರು ಹೋರಾಟ ಮುಂದಾಳುಗಳನ್ನು ದೂರಿದರು. ಕೊನೆಗೆ ದಲಿತ ಮುಂದಾಳುಗಳು ಅಸ್ಪೃಶ್ಯ ಉಪಧ್ಯಾಯರಿಂದ ಒಂದೊಂದು ರೂಪಾಯಿ ಸಂಗ್ರಹಿಸಿ ಆದಿಕರ್ನಾಟಕಕ್ಕೆ ಅಭಿವೃದ್ಧಿ ಸಂಘವನ್ನು ಸ್ಥಾಪಿಸಿದರು. ಈ ಸಂಘದ ವತಿಯಿಂದ ಕೆಲಸ ಕಳೆದುಕೊಂಡ ಜೀತಗಾರರಿಗೆ ಇಟ್ಟಿಗೆ ಅಚ್ಚುಮಾಡುವ ಇಟ್ಟಿಗೆಯ ಗೂಡುಕಟ್ಟಿ ಬೇಯಿಸುವ ಉದ್ದಿಮೆಯನ್ನು ಪ್ರಾರಂಭಿಸಿದರು. ಹಾಗೂ ಬೆಂಗಳೂರಿನ ಬಿನ್ನಿಮಿಲ್‌ನ ಸಹಕಾರದಿಂದ ಬಹಿಷ್ಕಾರಕ್ಕೊಳಗಾದವರಿಗೆ ಅಗತ್ಯ ವಸ್ತುಗಳನ್ನು ಪೂರೈಸಲಾಯಿತು. ಆದರೆ ಜಾತಿಗೆ ಜಾತಿಯೇ ವೈರಿ ನೀರಿಗೆ ಪಾಚಿಯೇ ವೈರಿ ಎಂಬಂತೆ ಮಳವಳ್ಳಿಯ ಆದಿಜಾಂಬವ ಜನಾಂಗದವರು ಈ ಏರ್ಪಾಡನ್ನು ನಿರಾಕರಿಸಿದರೆ ಸವರ್ಣೀಯರ ಜೊತೆ ಸೇರಿದ ಜಾಡಮಾಲಿಗಳು ಮಲಹೊರುವ ಕೆಲಸ ಮಾಡಿ ಅಸ್ಪೃಶ್ಯರ ಬಲವನ್ನು ಕುಗ್ಗಿಸಿದರು.

ಅಸ್ಪೃಶ್ಯರು ಊರಿನಿಂದ ಹೊರಗೆ ಹೋಗದಂತೆ ತಡೆಯಲು ಸವರ್ಣೀಯರು ಕಾವಲು ಕಾಯುತ್ತಿದ್ದರು. ಡಿ. ರುದ್ರಯ್ಯ (ಪಶುಸಂಗೋಪನಾ ಇಲಾಖೆಯ ನಿದೇರ್ಶಕರಾಗಿ ನಿವೃತ್ತರಾದವರು). ಈ ಗಲಾಟೆಯಿಂದ ಗಾಬರಿಗೊಂಡು ಇದನ್ನು ಹೇಗಾದರೂ ತಡೆದು ನಿಲ್ಲಸಬೇಕೆಂದು ಕ್ಷೌರಕತ್ತಿ ಯೊಂದನ್ನು ಕೈಯಲ್ಲಿ ಹಿಡಿದು ಹನ್ನೆರಡು ಕಿ.ಮೀ. ಮಂದ್ದೂರಿನವರೆಗೆ ನಡೆದುಬಂದು ಅಲ್ಲಿಂದ ರೈಲು ಹತ್ತಿ ಬೆಂಗಳೂರು ತಲುಪಿದರು. ಬೆಂಗಳೂರಿನಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆ ಬರೆಯುತ್ತಿದ್ದ ಮಳವಳ್ಳಿಯ ಎಂ. ಶಂಕರಯ್ಯನವರನ್ನು ಹೊರಗೆ ಕರೆದು ಊರಿನಲ್ಲಿ ನಡೆದ ಘಟನೆಯನ್ನು ತಿಳಿಸಿದರು. ಊರಿನಲ್ಲಿ ನಡೆದ ಘಟನೆಯಲ್ಲಿ ಇಪ್ಪತ್ತೆರಡು ಜನರು ಕಾಣೆಯಾಗಿದ್ದನ್ನು ಕೇಳಿ ದಿಗ್ಭ್ರಾಂತರಾದ ಶಂಕರಯ್ಯ ರುದ್ರಯ್ಯನವರನ್ನು ಕರೆದುಕೊಂಡು ಅಯ್ಯರ್‌ರವರ ಬಳಿಗೆ ಹೋಗಿ ವಿಷಯ ತಿಳಿಸಿದರು. ತಕ್ಷಣವೇ ಕಲಾಸಿಪಾಳ್ಯದಲ್ಲಿ ವಾಸವಾಗಿದ್ದ ಮುರುಗೇಶನ್‌ಪಿಳ್ಳೆ ಪಾಮಡಿ ಸುಬ್ಬರಾಯಶೆಟ್ಟಿ ಮತ್ತು ಹರಿಜನ ಸೇವಕ ಸಂಘದ ವಿ. ರಾಮಚಂದ್ರರವನ್ನು ಭೇಟಿಮಾಡಿ ಎಲ್ಲರು ಮಿರ್ಜಾರವರಿಗೆ ವಿಷಯ ತಿಳಿಸಿದರು. ಅವರ ಅಪ್ಪಣೆಯ ಮೇರೆಗೆ ಮೂವತ್ತು ಜನ ಪೋಲೀಸರನ್ನು ಕರೆದುಕೊಂಡು ಮಳವಳ್ಳಿಗೆ ಬಂದು ಮೂರು ಸುತ್ತು ಗುಂಡುಹಾರಿಸಿದರು. ಪರಿಣಾಮವಾಗಿ ಊರಿನ ಕಲಾಟೆಯು ಸಹಜ ಸ್ಥಿತಿಗೆ ಮರಳಿತು. ಹಾಗಾಗಿ ಅಂದು ಟಿ. ಮಾದಯ್ಯನವರ ತಾಯಿ ಮುಂದೆಬಂದು ಪೋಲೀಸರ ಸಮ್ಮುಖದಲ್ಲಿ ಕುನ್ನಿರುಕಟ್ಟೆಯಿಂದ ಒಂದು ಕೊಡ ನೀರುತಂದರು.

ಇದಾದ ಒಂದು ತಿಂಗಳ ತರುವಾಯ ಅಂದರೆ ಮೇ ತಿಂಗಳ ಕೊನೆವಾರದಲ್ಲಿ ಸಿ.ಡಿ. ಮಾದಯ್ಯನವರ ಮಗಳಾದ ಚಿಕ್ಕಣ್ಣಮ್ಮ ಎಂಬ ಯುವತಿ ತಾಮ್ರದ ಕೊಡ ತೆಗೆದುಕೊಂಡು ಕುನ್ನಿರು ಕಟ್ಟೆಯಿಂದ ನೀರು ತರಲು ಹೋರಟಿದ್ದರು. ಇದನ್ನು ಸಹಿಸದ ಸವರ್ಣೀಯರು ಮುಸಲ್ಮಾನರು ಚಿಕ್ಕಣ್ಣಮ್ಮನ ಕೊಡಕಿತ್ತು ಬಾವಿಗೆ ಎಸೆದು ಆಕೆಯನ್ನು ಥಳಿಸಿದರು. ಬಾವಿಯಿಂದ ಕೊಡತಂದ ಅಸ್ಪೃಶ್ಯರು ಮತ್ತೆ ಆಕೆ ನೀರು ತರಲು ಉತ್ತೇಜಿಸಿದರು. ಆಕೆಯು ಕಟ್ಟೆಯಲ್ಲಿ ನೀರು ಮೊಗೆದು ತರುತ್ತಿದ್ದಾಗ ನುರಾರು ಸವರ್ಣೀಯರು ಸೇರಿ ದೊಣ್ಣೆ ಮಚ್ಚು ಕತ್ತಿಗಳನ್ನಿಡಿದು ಕೇರಿಗೆ ನುಗ್ಗಿದರು.

ಹಾಗೂ ಚಿಕ್ಕಣ್ಣಮ್ಮಳನ್ನು ಎಳೆದಾಡಿ ವಿವಸ್ತ್ರಗೊಳಿಸಿದರು. ಅವಮಾನ ತಡೆಯಲಾರದ ಚಿಕ್ಕಣ್ಣಮ್ಮ ಮರವನ್ನಪ್ಪಿ ಬಿಕ್ಕಿದಳು. ಪರಿಣಾಮ ಎರಡು ಕೋಮಿನವರು ಹೊಡೆದಾಡುತ್ತಿರುವಾಗ ಅವೇಶ ಭರಿತರಾದ ಎಂ. ಮಾದಯ್ಯ ಚಿಕ್ಕಲಿಂಗಯ್ಯ ಮತ್ತು ಡಿ. ರುದ್ರಯ್ಯನವರು ಸವರ್ಣೀಯರನ್ನು ಕೆಡವಿಕೊಂಡು ಮನಸ್ಸೆ ಇಚ್ಚೇ ಥಳಿಸಿ ಒಂದು ಅಡ್ಡಗೆರೆ ಎಳೆದು "ನೀವೇನಾದರೂ ಈ ಗೆರೆ ದಾಟಿಬಂದರೆ ಹೆಣಗಳು ಬೀಳುತ್ತವೆ ಹುಷರ್" ಎಂದು ಎಚ್ಚರಿಸಿ ಅಬ್ಬರಿಸಿದರು.[೧೭] ಈ ವೇಳೆಗೆ ಬಂದ ಪೋಲಿಸರು ಕೆಲವರನ್ನು ಬಂಧಿಸಿ ಕೇಸು ದಾಖಲು ಮಾಡಿ ಕೆಲವರ ಕೈಗೆ ಬೇಡಿ ಹಾಕಿದರು. ವಿಷಯ ತಿಳಿದ ಅಯ್ಯರ್ ಮಳವಳ್ಳಿಗೆ ಬಂದು ಇಪ್ಪತ್ತೇಳು ಜನ ಆರೋಪಿಗಳನ್ನು ಬಂಧಿಸಿ ಕೇಸು ದಾಖಲು ಮಾಡಿಸಿದರಲ್ಲದೆ ನೊಂದವರಿಗೆ ಸಾಂತ್ವನ ಹೇಳಿದರು. ಮಳವಳ್ಳಿಯಿಂದ ಶ್ರೀರಂಗಪಟ್ಟಣ ಬಹಳ ದೂರವಿದ್ದು ಕಾರಣ ಪಿರ್ಯಾಧಿಗಾಗಿ ಶ್ರೀರಂಗಪಟ್ಟಣಕ್ಕೆ ಹೋಗಿಬರುವುದು ಅಸ್ಪೃಶ್ಯರಿಗೆ ಕಷ್ಟವಾಗಿದ್ದಿತು. ಆದ್ದರಿಂದ ಅಯ್ಯರ್ ಸರ್ಕಾರದ ಗಮನ ಸೆಳೆದು ಮಳವಳ್ಳಿಯಲ್ಲಿಯೇ ವಿಶೇಷ ನ್ಯಾಯಾಲಯವನ್ನು ಸ್ಥಾಪಿಸುವಂತೆ ಮಾಡಿದರು. ಇದು ಅಸ್ಪೃಶ್ಯರ ಅನುಕೂಲಕೋಸ್ಕರ ನಿರ್ಮಾಣಗೊಂಡ ನ್ಯಾಯಾಲಯ ವನ್ನು ನೋಡಿ ಸವರ್ಣೀಯರು ಗಾಸಿಗೊಂಡಿರಬಹುದೇನು? ಈ ಘಟನೆಯಲ್ಲಿ ಪಾಲ್ಗೊಂಡಿದ್ದ ಸವರ್ಣೀಯ ಅಪರಾದಿಗಳಿಗೆ ನ್ಯಾಯಾಲಯ ಹದಿನಾಲ್ಕು ವರ್ಷ ಜೈಲು ಶಿಕ್ಷೆ ವಿಧಿಸಿತು. ಈ ಹೋರಾಟದ ಪರಿಣಾಮವಾಗಿ ಅಸ್ಪೃಶ್ಯರು ಕುನ್ನಿರುಕಟ್ಟೆ ನೀರನ್ನು ಬಳಸುವ ಹಕ್ಕು ಪಡೆದು ಜಯಶಾಲಿ ಗಳಾದರು.

**ಕೊಮ್ಮರಹಳ್ಳಿ ಘಟನೆ**

"ಹರಿಯುವ ನೀರಿಗೆ ದೊಣ್ಣೆನಾಯಕನ ಅಪ್ಪಣೆ ಬೇಕೆ?" ಎಂಬ ಮಾತಿನಂತೆ ಕುನ್ನಿರು ಕಟ್ಟೆಯ ಘಟನೆಯಂತಹ ಮತ್ತೊಂದು ಘಟನೆಯು ಮಂಡ್ಯದ ಹತ್ತಿರವಿರುವ ಕೊಮ್ಮರಳ್ಳಿ ಕೆರೆಯ ಪ್ರಕರಣವನ್ನು ಸ್ಮರಿಬಹುದು. ಈ ಊರಿನ ಅಸ್ಪೃಶ್ಯರು ಅಂಬೇಡ್ಕರ್ ಮತ್ತು ಅಯ್ಯರ್‌ರವರಿಂದ ಪ್ರಭಾವಿತರಾಗಿದ್ದರಲ್ಲದೆ ಮಳವಳ್ಳಿಯ ಕುನ್ನಿರುಕಟ್ಟೆಯ ಹೋರಾಟ ಇವರಲ್ಲಿ ಹೊಸ ಹುರುಪನ್ನು ನೀಡಿತು. ಪರಿಣಾಮವಾಗಿ ಎಚ್ಚೆತ್ತುಕೊಂಡು ಸಂಘಟಿತರಾದ ಅಸ್ಪೃಶ್ಯರು ಕೆರೆಯ ನೀರು ಬಳಸುವುದು ತಮ್ಮ ಹಕ್ಕು ಎಂದು ತಿಳಿದು ಕೆರೆಯಿಂದ ನೀರು ತರಲು ಮುಂದಾದರು. ಆದರೆ ಈ ಗ್ರಾಮದಲ್ಲಿ ಪ್ರಬಲರಾಗಿದ್ದ ಒಕ್ಕಲಿಗರು ಅಸ್ಪೃಶ್ಯರ ಮೇಲೆ ದಾಳಿ ಮಾಡಿದರು. ಇದರಿಂದ ರೊಚ್ಚಿಗೆದ್ದ ಅಸ್ಪೃಶ್ಯರು ಕುಡುಗೋಲು ಮಚ್ಚು ಕತ್ತಿ ದೊಣ್ಣೆಗಳನ್ನು ಹಿಡಿದು ಹೋರಾಡಿದರು. ಎರಡು ಕೋಮಿನ ನಡುವೆ ಮಾರಾಮರಿ ನಡೆದು ಏಳು ಮಂದಿ ಪ್ರಾಣ ಕಳೆದುಕೊಂಡರು. ಇದರಿಂದಾಗಿ ಗ್ರಾಮದಲ್ಲಿ ಪ್ರಕ್ಷುಬ್ಧ ವಾತಾವರಣ ನಿರ್ಮಾಣವಾಯಿತು. ವಿಷಯ ತಿಳಿದ ಅಯ್ಯರ್ ಮಂಡ್ಯಕ್ಕೆ ಬಂದು ಜಿಲ್ಲಾಧಿಕಾರಿಯು ಸೇರಿದಂತೆ ಮೀಸಲು ಪೋಲಿಸ್ ಪಡೆಯೊಂದಿಗೆ ಕೊಮ್ಮರಳ್ಳಿಗೆ ಬಂದರು. ಎಂಟು ದಿನಗಳ ಕಾಲ ಮಂಡ್ಯದ ಪ್ರವಾಸಿ ತಾಣದಲ್ಲಿ ಉಳಿದುಕೊಂಡು ಪರಿಸ್ಥಿತಿಯನ್ನು ಸುಧಾರಿಸಿದರು. ಇದೇ ವೇಳೆಗೆ ಕೆ.ಎಚ್. ರಾಮಯ್ಯ ಕೆಂಗಲ್ ಹನುಮಂತಯ್ಯನವರು ಮಧ್ಯೆಪ್ರವೇಶ ಮಾಡಿ ಒಕ್ಕಲಿಗರಿಗೆ ತಿಳಿಹೇಳಿದರು. ಇದರೊಂದಿಗೆ ತಗಡೂರಿನ ರಾಮಚಂದ್ರರಾಯರು ಕೆರೆ ನೀರಿಗೆ ದೊಣ್ಣೆ ನಾಯಕನ

ಅಪ್ಪಣೆ ಬೇಕು? ಎಂಬ ಕೈಪಿಡಿಯನ್ನು ಮುದ್ರಿಸಿ ಹಂಚಿದರು. ಕೊನೆಗೆ ಅಸ್ಪೃಶ್ಯರು ತಮ್ಮ ಹಕ್ಕನ್ನು ಪಡೆಯುವಲ್ಲಿ ಯಶಸ್ವಿಯಾದರು. ಅಯ್ಯರ್‌ರವರ ಅಸ್ಪೃಶ್ಯೋದ್ಧಾರ ಕಾರ್ಯ ಚಟುವಟಿಕೆಗಳನ್ನು ಮುಂದಿನ ಅಧ್ಯನದಲ್ಲಿ ಚರ್ಚಿಸಲಾಗಿದೆ.

ಒಟ್ಟಾರೆ ಇಂತಹ ಘಟನೆಗಳಲ್ಲಿ ಘರ್ಷಣೆ ಹಿಂಸೆ ಕ್ರೌರ್ಯ ದೌರ್ಜನ್ಯಗಳು ನಡೆಯುತ್ತಿದ್ದವು ಎನ್ನುವುದಕ್ಕೆ ನಮ್ಮ ಸಮಾಜದ ಉನ್ನತ ಜಾತಿ ವರ್ಗಗಳಲ್ಲಿ ಮನೆಮಾಡಿಕೊಂಡಿರುವ ತಾರತಮ್ಯವಾದಿ ವಿಚಾರಗಳು ಕಾರಣವಾದವು ಎಂಬುದು ಸ್ಪಷ್ಟವಾಗುತ್ತವೆ. ಇಂತಹ ತಾರತಮ್ಯವಾದಿಗಳ ವಿರುಧ್ಧ ಹೋರಾಟ ಮನೋಭಾವ ಬೆಳೆಸಿಕೊಳ್ಳಬೇಕಾದರೆ ಪ್ರತಿಯೊಬ್ಬ ವ್ಯಕ್ತಿಗೂ ಸಹ ಶಿಕ್ಷಣ ಅಗತ್ಯವಾಗಿ ಬೇಕೆ ಬೇಕು. ಶಿಕ್ಷಣದಿಂದಲೇ ವ್ಯಕ್ತಿ ತನ್ನ ಆಸೆ ಆಕಾಂಕ್ಷೆ ಮತ್ತು ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗುತ್ತದೆ. ವೈಚಾರಿಕ ಮನೋಭಾವನೆ ಬೆಳೆಸಿಕೊಂಡು ಸಮಾಜದ ಅಂಕುಡೊಂಕುಗಳನ್ನು ತಿದ್ದಲು ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಒಟ್ಟಾರೆ ಶಿಕ್ಷಣವು ವ್ಯಕ್ತಿಯ ಸರ್ವತೋಮುಖ ಅಭಿವೃಧ್ಧಿಗೆ ಅಗತ್ಯವಾಗಿ ಬೇಕು ಬೇಕು. ಹಾಗಾಗಿ ಶಿಕ್ಷಣದ ಮಹತ್ವವನ್ನು ಸ್ವತಃ ಮನಗಂಡಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಸಂಸ್ಥಾನದಲ್ಲಿ ಪಶುಗಳಿಗಿಂತಲೂ ಕೀಳು ಜೀವನ ನಡೆಸುತ್ತಿದ್ದಂತಹ ಅಸ್ಪೃಶ್ಯರಿಗೆ ಶಿಕ್ಷಣ ನೀಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಕಂಕಣಬಧ್ಧರಾದರು. ನಾಲ್ವಡಿಯವರು ರೂಪಿಸಿದ ವಿಶೇಷ ಅಸ್ಪೃಶ್ಯರ ಕಾರ್ಯಗಳಿಗೆ ಸಹಕಾರಿಗಳಾಗಿ ನಿಂತವರು ಆರ್. ಗೋಪಾಲಸ್ವಾಮಿಅಯ್ಯರ್. ತಮ್ಮ ಇಡೀ ಜೀವನವನ್ನೆ ಯಾವುದೇ ಪ್ರಚಾರಕೋಸ್ಕರ ಹೆಸರಿಗೊಸ್ಕರ ಸೇವಾಕಾರ್ಯವನ್ನು ಕೈಗೊಳ್ಳದೆ ಸೇವೆಯಿಂದ ಪ್ರಗತಿ ಎಂಬ ತತ್ವಕ್ಕೆ ಬಧ್ಧರಾಗಿ ನಿಸ್ವಾರ್ಥ ಸೇವೆ ಮಾಡಿದ ಮಹಾನ್ ವ್ಯಕ್ತಿ.

ಸಾರ್ವಜನಿಕ ವಲಯದಲ್ಲಿ ಅದರಲ್ಲಿಯೂ ಪಂಚಮರ ಶೈಕ್ಷಣಿಕ ಅಭಿವೃಧ್ಧಿಗೆ ನಿರಂತರವಾಗಿ ಸೃಜನಶೀಲ ಕ್ರಾಂತಿಯನ್ನುಂಟು ಮಾಡಿದವರು ಮಾನವತಾವಾದಿ ಆರ್. ಗೋಪಾಲಸ್ವಾಮಿಅಯ್ಯರ್. ಇವರ ಸಾಮಾಜಿಕ ಚಟುವಟಿಕೆ ಜಡ್ಡುಗಟ್ಟಿದ ಅಸ್ಪೃಶ್ಯ ಸಮುದಾಯವನ್ನು ಚಲನಶೀಲಗೊಳಸುಸಿದವು. ತುಳಿತಕ್ಕೊಳಗಾದ ಈ ಸಮುದಾಯ ಮೈಸೂರು ಸಂಸ್ಥಾನದಲ್ಲಿ ವಿಮೋಚನೆಯ ಸುಖ ಅನುಭವಿಸಿದ್ದು ಮತ್ತು ಇಂದು ಅನುಭವಿಸುತ್ತಿರುವುದು ಅಯ್ಯರ್‌ರವರ ಶ್ರಮದಿಂದಲೇ ಎಂದು ಹೇಳಬಹುದು. ಎಂದೂ ತನ್ನ ಸ್ವಾರ್ಥಕ್ಕಾಗಿ ಕಾಲವನ್ನು ಕಳೆಯದೇ ಇಡೀ ಜೀವಮಾನ ಅಸ್ಪೃಶ್ಯ ಸಮುದಾಯದ ಶೈಕ್ಷಣಿಕ ಅಭಿವೃಧ್ಧಿಗಾಗಿ ಕಾಲವನ್ನು ಚರಿತ್ರೆಯಾಗಿಸಿದ ಮಹಾನ್ ವ್ಯಕ್ತಿ. ಅಸ್ಪೃಶ್ಯರ ಸಾಮಾಜಿಕ ಆರ್ಥಿಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಶ್ರಮಿಸಿದ ಇವರ ಜೀವನ ಸಾಧನೆ ಪ್ರಸ್ತುತ ಸಾಮಾಜಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕ್ಷೇತ್ರಕ್ಕೆ ಅಗಾಧವಾದ ಸೃಜನಶೀಲ ಚೈತನ್ಯ ನೀಡಬಲ್ಲದು. ಇಂತಹ ಚೈತನ್ಯ ನಮ್ಮ ಸಮಾಜದಲ್ಲಿ ಮತ್ತೊಮ್ಮೆ ಮೂಡಿಬರಲಿ ಸಾಮಾಜಿಕ ರಂಗದಲ್ಲಿ ಬುಧ್ಧ ಬಸವ ಅಂಬೇಡ್ಕರ್ ಗಾಂಧಿಯಂಥ ಕಣ್ಣುಗಳು ಅರಳಲಿ. ನಾಲ್ವಡಿಯವರಂತಹ ಅಸಂಖ್ಯಾ ಮನಸ್ಸುಗಳು ನಮ್ಮ ಸಮಾಜದಲ್ಲಿ ಹುಟ್ಟಲಿ.

**ಅಡಿಟಿಪ್ಪಣಿ**

೧. Mysore Census Report., 1911

೨. ಸೂರ್ಯನಾಥ ಕಾಮತ್ (ಸಂ)., 'ಇತಿಹಾಸ ದರ್ಶನ'. ಸಂಪುಟ-೯. (೧೯೯೪). ಕರ್ನಾಟಕ ಇತಿಹಾಸ ಅಕಾಡೆಮಿ. ಬೆಂಗಳೂರು. ಪು.೩೨೯

೩. ಡಾ. ಎಂ.ಎಸ್. ಶೇಖರ್ (೨೦೦೬). 'ಮೊದಲ ತಲೆಮಾರಿನ ದಲಿತ ಸಾಹಿತಿಗಳು'. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ಪು.೪೯

೩. ಪ್ರಜಾವಾಣಿ ದಿನಪತ್ರಿಕೆ. ಸಾಪ್ತಾಹಿಕ ಪುರವಣಿ. ದಿನಾಂಕ ೩.೮.೨೦೦೮. ಪು.೩

೪. ಡಾ. ಡಿ.ಎಸ್. ಜಯಪ್ಪಗೌಡ. (೧೯೪೪) ಸರ್ ಎಂ.ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು. ಶುಭೋದಯ ಪ್ರಕಾಶನ. ಮೈಸೂರು. ಪು.೧೧೧

೫. ಡಾ. ಜಿ. ಗೋಪಾಲ್., (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್. ಸ್ನೇಹಾ ಪ್ರಿಂಟರ್ಸ್. ಬೆಂಗಳೂರು. ಪು.೨೧

೬. ಅದೇ ಪು.೩೯

೭. ಅದೇ. ಪು.೧೮

೮. ಅದೇ ಪು.೩೯

೯. ಡಾ. ಎಂ.ಎಸ್. ಶೇಖರ್ (೨೦೦೬). 'ಮೊದಲ ತಲೆಮಾರಿನ ದಲಿತ ಸಾಹಿತಿಗಳು'. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ಪು. ೩೭

೧೧. The Administration of Mysore, 1926-27, P. 12

೧೨. ಅದೇ ಪು.೧೨

೧೩. ಡಿ.ಆರ್. ನಂಜಯ್ಯ. 'ನೆನಪುಗಳು'. ಕಾಮದೇನು ಪ್ರಿಂಟರ್ಸ್. ಬೆಂಗಳೂರು. ಪು.೩೦

೧೪. ಟಿ.ಹೆಚ್. ಮೂರ್ತಿ ಎ೨೦೦೬ಏ ಆರ್. ಗೋಪಾಲಸ್ವಾಮಿ ಅಯ್ಯರ್ಬ್. ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು. ಪು.೨೩

೧೫. ನಾಗತಿಹಳ್ಳಿ ರಮೇಶ್. (೨೦೦೩) 'ಮಾನವತಾವಾದಿ ಮಲ್ಲಯ್ಯ'. ಸೃಷ್ಟಿ ಪ್ರಕಾಶನ. ಬೆಂಗಳೂರು. ಪು. ೧೯

೧೬. ಡಾ. ಜಿ. ಗೋಪಾಲ್., (೨೦೦೧) ಆರ್. ಗೋಪಾಲಸ್ವಾಮಿ ಅಯ್ಯರ್ ಸ್ನೇಹಾ ಪ್ರಿಂಟರ್ಸ್. ಬೆಂಗಳೂರು. ಪು.೪೪

೧೭. ಅದೇ ಪು.೪೪

ಅಧ್ಯಾಯ – ೪

# ನಾಲ್ವಡಿಯವರ ಸರ್ಕಾರ ಮತ್ತು ಅಯ್ಯರ್

* ಪಂಚಮರ ಕಾರ್ಯಗಳು
* ಶೃಂಗೇರಿಯ ಆಜ್ಞೆ
* ಸಿ.ಆರ್. ರೆಡ್ಡಿ
* ಪ್ರಜಾಪ್ರತಿನಿಧಿ ಸಭೆಯ ಅಯ್ಯರ್‌ರವರ ನಿಲುವುಗಳು
* ಅರಮನೆಯ ಪ್ರವೇಶ
* ಹಳ್ಳಿಗಳ ಉದ್ಧಾರ
* ಪಂಚಮರ ಸಮ್ಮೇಳನಗಳು
* ಕೊತ್ತನಹಳ್ಳಿಯ ಹೋರಾಟ
* ಆರ್ಥಿಕ ಸಮ್ಮೇಳನಗಳು
* ನರಸಿಂಹರಾಜ ವಿದ್ಯಾರ್ಥಿನಿಲಯದ ಘಟನೆ

# ನಾಲ್ವಡಿಯವರ ಸರ್ಕಾರ ಮತ್ತು ಅಯ್ಯರ್

**ಪೀಠಿಕೆ**

"ಭರತ ಖಂಡದಲ್ಲಿಯೆ ಅತ್ಯಂತ ಹೆಚ್ಚಿನ ಪ್ರಗತಿಯನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಾಧಿಸಿ ಮುಂದುವರಿಯುತ್ತಿರುವ ರಾಜ್ಯ ಎಂಬ ಹೆಗ್ಗಳಿಕೆಗೆ ನ್ಯಾಯವಾದ ಅರ್ಹತೆಯನ್ನು ಪಡೆದಿರುವ ಹಿಂದೂ ಸಂಸ್ಥಾನವಾದ ಮೈಸೂರು ಮಾದರಿ ಸಂಸ್ಥಾನವಾಗಿದೆ." ಮಾದರಿ ಸಂಸ್ಥಾನ ಎಂಬ ಹೆಗ್ಗಳಿಕೆ ಮತ್ತಾ ್ಯವ ಭಾರತೀಯ ಸಂಸ್ಥಾನನಕ್ಕೂ ಇಲ್ಲ. ಹಾಗೆಯೇ ಮೈಸೂರು ಭಾರತಕ್ಕೆ ಮಾತ್ರ ವಲ್ಲದೆ ಇಡೀ ಜಗತ್ತಿಗೆ ಮಾದರಿಯಾಗಿರುವ ಸಂಸ್ಥಾನವಾಗಿದೆ. ಇದು ಭಾರತದ ಸುಧಾರಣೆಗಳಿಗೆ ಸಂಬಂಧಿಸಿದ ಪ್ರಥಮ ದುಂಡುಮೇಜಿನ ಸಮ್ಮೇಳನದ ಸಂಯುಕ್ತ ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಲಾರ್ಡ್ ಸಾಂಕಿಯವರು ಮಾಡಿರುವ ಶ್ಲಾಘನೆ.[1]

ಈ ಮೇಲಿನ ಮಾತುಗಳು ಒಂದು ರಾಜ್ಯದ ಹಾಗೂ ರಾಜನ ಹೊಗಳಿಕೆಯ ಮಾತುಗಳಲ್ಲ. ಇವುಗಳೆಲ್ಲವೂ ನಾಲ್ವಡಿ ಕೃಷ್ಣರಾಜ ಒಡೆಯರವರ ಆಳ್ವಿಕೆಯ ಅವಧಿಯಲ್ಲಿ ಇದ್ದಂತಹ ಮೈಸೂರು ಸಂಸ್ಥಾನದ ವಸ್ತುಸ್ಥಿತಿಯ ಸ್ಪಷ್ಟ ವಿವರಣೆಯಾಗಿದೆ. ಇಂದಿನ ಕಾಲದಲ್ಲಿನ ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಸಾಧಿಸಲಾಗಿದ್ದ ಸರ್ವಾಂಗೀಣ ಪ್ರಗತಿಯ ವಸ್ತುನಿಷ್ಠ ದೃಷ್ಟಿಯಿಂದ ಅವಲೋಕಿಸಿ ತೆರೆದ ಬುದ್ಧಿಯಿಂದ ವಿಶ್ಲೇಷಿಸಿ ಹೇಳಲಾಗಿರುವ ಮಾತುಗಳಾಗಿವೆ. ಏಕೆಂದರೆ ನಾಲ್ವಡಿಯವರ ಆಳ್ವಿಕೆಯ ಅವಧಿಯಲ್ಲಿಯೇ ಹೊಸ ಶಿಕ್ಷಣ ಮತ್ತು ಸಾಮಾನ್ಯ ಉದ್ಯೋಗವಕಾಶಗಳನ್ನು ಪಡೆಯುವ ಸಲುವಾಗಿ ವಿವಿಧ ಸಾಮಾಜಿಕ ಸಮುದಾಯಗಳು ಸಂಘಟನೆಗೊಂಡವು. ಮಹಿಳೆಯರು ಮತ್ತು ವಿದ್ಯಾವಂತ ಯುವಕರು ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಧ್ವನಿ ಎತ್ತಿದರು. ಜಾತಿ ಪದ್ಧತಿ ಅಸ್ಪೃಶ್ಯತೆ ಇತರ ಸಾಮಾಜಿಕ ಅನಿಷ್ಟ ಪದ್ಧತಿಗಳು ಮತ್ತು ಮೂಢನಂಬಿಕೆಗಳು ವಿಮರ್ಶೆಗೊಳಗಾದವು. ಮಹಾರಾಜ ನಾಲ್ವಡಿ ಕೃಷ್ಣರಾಜರು ಈ ಹೊಸ ಬೆಳವಣಿಗೆಗೆ ವೈಜ್ಞಾನಿಕವಾದ ಹಾಗೂ ಸಮತೋಲ ವಾದ ನಿಲುವನ್ನು ಹೊಂದಿದು.

ಕರ್ನಾಟಕದ ಚರಿತ್ರೆಯಲ್ಲಿಯೇ ಆದರ್ಶ ಪ್ರಿಯರು ರಾಜರ್ಷಿ ಎಂಬ ಬಿರುದನ್ನು ಪಡೆದುಕೊಂಡು.

ತಮ್ಮ ಸಾಮ್ರಾಜ್ಯ ಭರತ ಖಂಡದಲ್ಲಿಯೇ ಮಾದರಿ ಸಂಸ್ಥಾನ ಎಂಬ ಪ್ರಶಸ್ತಿಯನ್ನು ತಂದುಕೊಂಡು ಮೈಸೂರಿನ ಪ್ರಜೆಗಳು ಹಾಗೂ ಅಲ್ಲಿನ ಸಮಾಜ ಕೀರ್ತಿಯ ಕೆಂಪು ಎಲ್ಲೆಡೆ ಹರಡುವಂತೆ ಮಾಡಿದ್ದ ನಾಲ್ವಡಿಯವರು. ಅವರ ರಾಜ್ಯಾಡಳಿತದ ಕಾಲಕ್ಕೆ ಸಂಬಂಧಪಟ್ಟಿರುವ ಅಧಿಕೃತ ದಾಖಲೆಗಳು, ಪ್ರತ್ಯಕ್ಷದರ್ಶಿ ವರದಿಗಳು ಹಾಗೂ ವಿವರಣೆಗಳು ಅಂದು ಕೈಗೊಳ್ಳಲಾದ ಜನೋಪಯೋಗಿ ಕಾರ್ಯಗಳಿಗೆ ಮೂಕವಾದ ಹಾಗೂ ಬಲವಾದ ಸಾಕ್ಷಿಯಾಗಿ ಉಳಿದು ಬಂದಿವೆ. ಇಲ್ಲಿನ ಶಿಕ್ಷಣ ಸಂಸ್ಥೆಗಳು ಪಂಚಮರಿಗಾಗಿ ಪ್ರತ್ಯೇಕ ಶಿಕ್ಷಣ ಸಂಸ್ಥೆಗಳು ಕೇಂದ್ರ ಹಾಗೂ ಸ್ಥಳೀಯ ಆಡಳಿತ ವ್ಯವಸ್ಥೆ ಉನ್ನತ ಹಾಗೂ ಆಧುನಿಕ ಶಿಕ್ಷಣ ಪದ್ಧತಿ ಮೊದಲಾದವುಗಳ ಬಗ್ಗೆ ಸಾಮಾಜಿಕ ಇತಿಹಾಸ ಲೇಖಕರು ಎಚ್ಚರಿಕೆಯಿಂದ ವಸ್ತುನಿಷ್ಠ ದೃಷ್ಟಿಯಿಂದ ವೀಕ್ಷಿಸುತ್ತ ಬಂದಿದ್ದಾರೆ. ಅವರು ತಮ್ಮ ಮನೋಬುದ್ಧಿಗಳ ಪರದೆಯ ಮೇಲೆ ಆ ಕಾಲದಲ್ಲಿ ಜನರು ಅಂಗೀಕರಿಸಿ ಅನುಸರಿಸುತ್ತಿದ್ದ ಆದರ್ಶಗಳು, ಅವರ ವಿಶಿಷ್ಟ ಜೀವನ ಕ್ರಮ ಅವರು ಬೆಳೆಸಿಕೊಂಡಿದ್ದ ಸಹಿಷ್ಣುತಾ ಮನೋಭಾವ ಅವರ ಸಹಕಾರ ನಡುವಳ ಅವರ ಸೇವೆಗಾಗಿಯೇ ರೂಪಿಸಿ ಬೆಳೆಸಲಾಗಿದ್ದ ಸಂಸ್ಥೆಗಳು ಅವರು ಹಿಂದುಳಿದ ವರ್ಗಗಳ ಏಳಿಗೆಗಾಗಿ ಕೈಗೊಳ್ಳಲಾಗಿದ್ದ ಕ್ರಮಗಳು ಚರಿತ್ರೆಯಲ್ಲಿ ಅವಿಸ್ಮರಣೀಯವಾದವುಗಳಾಗಿವೆ. ನಾಲ್ವಡಿಯವರ ಕಾಲವು ಹಿಂದಿನಿಂದ ಪರಂಪರಾಗತವಾಗಿ ಬಂದಿದ್ದ ಉತ್ತಮ ಸಾಮಾಜಿಕ ಆದರ್ಶಗಳನ್ನು ಹಿತಕರ ವ್ಯವಸ್ಥೆಗಳನ್ನು ಸಂರಕ್ಷಿಸಿದ ಕಾಲ. ದೇಶದ ಪರಿಸ್ಥಿತಿಗಳಿಗೆ ತಕ್ಕಂತೆ ಸೂಕ್ತವಾದ ಮಾರ್ಪಾಡುಗಳನ್ನು ಮಾಡಿಕೊಂಡು ಬಂದಿರುವುದು ಕಂಡುಬರುತ್ತದೆ. ನಾಲ್ವಡಿಯವರ ಆಳ್ವಿಕೆಯ ಕಾಲದಲ್ಲಿ ಮೈಸೂರು ಸಂಸ್ಥಾನವು ದಲಿತ ವರ್ಗದವರಲ್ಲಿ ಇಡೀ ಭರತ ಖಂಡದಲ್ಲಿಯೇ ಐವತ್ತು ವರ್ಷಗಳಷ್ಟು ಶೈಕ್ಷಣಿಕವಾಗಿ ರಾಜಕೀಯವಾಗಿ ಹಿರಿತನವನ್ನು ತಂದುಕೊಟ್ಟಿತ್ತು. ಈ ಭಾಗದ ದಲಿತ ವರ್ಗದ ಜನರಲ್ಲಿ ಏಳಿಗೆ ಸಾಧ್ಯವಾಗಿದೆ ಎಂದರೆ ಅದು ನಾಲ್ವಡಿಯವರ ಸಮರ್ಥ ಆಡಳಿತದಿಂದ ಮಾತ್ರ ಸಾಧ್ಯವಾಗಿದೆ.

ವರ್ತಮಾನ ತನ್ನ ಅಸ್ತಿತ್ವವನ್ನು ಪ್ರತಿಪಾದಿಸಬೇಕಾದರೆ ಅದು ಎಲ್ಲಿ ಭೂತದ ಭಿತ್ತಿಯನ್ನು ಮೊದಲು ಬಿಚ್ಚುತ್ತದೆ ಎನ್ನುವ ಹಾಗೆ ಮೈಸೂರು ಸಂಸ್ಥಾನವು ಸಹ ಹಿಂದಿನಿಂದ ಬಂದಿದ್ದ ಸಾಮಾಜಿಕ ಸ್ಥಿರವಿನ್ಯಾಸವನ್ನೇ ಮುಂದುವರೆಸಿಕೊಂಡು ಬಂದಿತ್ತು. ಆದರೆ ಹೆಚ್ಚಾಗಿ ಸಾಮಾಜಿಕ ಸಾಮರಸ್ಯಕ್ಕೆ ಭಂಗವಾಗಿರಲಿಲ್ಲವೆನ್ನಬಹುದು. ಇವುಗಳಲ್ಲದೆ ಇಂದಿನ ಹಾಗೆಯೇ ಒಕ್ಕಲಿಗ ಬೋವಿಗಾರ ಗಾಣಿಗ ತಾಮ್ರಕಾರ ಕಮ್ಮಾರ ಬಡಗಿ ಕುಂಬಾರ ನಾಯಿಂದ ಗೋಪಾಲಕ ಮಲ್ಲ ದೀವಜಿಗ ಪರಿವಾರ ದವರು ಲಿಂಗಾಯಿತರು ನಾಮಧಾರಿ ಹಾಗೂ ಪಂಚಮರು (ಅಸ್ಪೃಶ್ಯರು) ಮೊದಲಾದ ಜಾತಿ ಹಾಗೂ ವೃತ್ತಿಪರ ವಿಭಾಗಗಳಿದ್ದವು. ನಾಲ್ವಡಿಯವರು ತಮ್ಮ ನಾಡಿನ ಸಮಾಜದಲ್ಲಿ ಹಿತಕರವಾಗಿದ್ದ ಶ್ರಮ ವಿಭಜನಾ ಕ್ರಮವನ್ನು ಮತ್ತು ಪರಸ್ಪರ ಸಹಕಾರ ತತ್ವಗಳನ್ನು ಎತ್ತಿ ಹಿಡಿದು ಸಾಮಾಜಿಕ ಸಾಮರಸ್ಯವನ್ನು ಮತ್ತು ರಾಜಕೀಯ ಆರ್ಥಿಕ ಭದ್ರತೆಯನ್ನು ಕಾಪಾಡಿಕೊಂಡು ಬರುವಲ್ಲಿ ಆಸಕ್ತಿ ವಹಿಸಿದ್ದರು. ಅಲ್ಲದೆ ಜಾತಿ ಪಂಗಡಗಳ ಮುಖ್ಯ ಸ್ಥಾವರಗಳು ಸಮಾಜದ ಸದಸ್ಯರಲ್ಲಿರುವ ಐಕಮತ್ಯವನ್ನು ಪ್ರಗತಿಯನ್ನು ಕುಂಠಿತಗೊಳಿಸದೆ ಇನ್ನು ಹೆಚ್ಚು ಬಲವಾಗುವಂತೆ ಮಾಡಬೇಕು ಭಾರತೀಯ ಸಮಾಜದಲ್ಲಿ ಶ್ರೇಷ್ಠರಾದವರೆಂದು ಸ್ವಘೋಷಿಸಿಕೊಂಡು ಶತಶತಮಾನಗಳವರೆಗೂ ಇನ್ನೊಂದು ವರ್ಗವನ್ನು ಪಶುಗಳಿಗಿಂತಲೂ ಹೀನಾಯವಾಗಿ ನೋಡುತ್ತಿದ್ದಂತಹ ಬ್ರಾಹ್ಮಣರೂ

ಸಹ ಇತರ ಪಂಗಡಗಳ ಪ್ರತಿ ದ್ವೇಷಾಸೂಯೆಯನ್ನು ತೋರದೆ ಅವರ ವಿಚಾರದಲ್ಲಿ ವಿಶ್ವಾಸ ತೋರಿ ಸಹಿಷ್ಣತಾ ಭಾವವನ್ನು ಪ್ರದರ್ಶಿಸಿ ಅವರಲ್ಲಿ ಸಹಜವಾಗಿ ತಲೆದೋರುತ್ತಿದ್ದ ನ್ಯಾಯಬದ್ಧ ಆಸೋತ್ತರ ಗಳಿಗೆ ಸರಿಯಾಗಿ ಸ್ಪಂಧಿಸಿ ಅಸ್ಪೃಶ್ಯರ ಏಳಿಗೆಗೆ ಎಲ್ಲಾ ರೀತಿಯ ಸಹಾನುಭೂತಿಯುತ ಸಹಕಾರವನ್ನು ನೀಡಬೇಕೆಂಬುದಾಗಿ ಎದುರು ನೋಡಲಾಗಿದ್ದಿತು. ಇದಕ್ಕೆ ಸದಸ್ಯರು ಸ್ಪಂದಿಸಿದರೋ ಇಲ್ಲವೊ ಅದು ಚರ್ಚೆಯ ವಿಷಯ. ಆದರೆ ಇದಕ್ಕೆ ಎಲ್ಲಾ ಮೇಲ್ವರ್ಗದ ಜನರು ನೀರಿಕ್ಷೆಯ ವಸ್ತುಸ್ಥಿತಿಯಾಗುವ ರೀತಿಯಲ್ಲಿ ವರ್ತಿಸುತ್ತಿದ್ದರು ಎಂಬುದು ಅನೇಕ ದಾಖಲೆಗಳಿಂದ ತಿಳಿದುಬರುತ್ತದೆ.

ಮೇಲೆ ತಿಳಿಸಿದಂತೆ ಅನೇಕ ಮಾರ್ಪಾಡುಗಳ ಮೂಲಕ ಅಸ್ಪೃಶ್ಯತೆಯ ನಿವಾರಣೆಗೆ ಹಾಗೂ ಅಸ್ಪೃಶ್ಯರ ಏಳಿಗೆಗೆ ರಾಜರ ಆಳ್ವಿಕೆಯ ಕಾಲದಲ್ಲಿ ಮುಂದಾದರೂ ಸಹ ಭೂಮಿಯಲ್ಲಿ ಜೀವಜಂತುಗಳು ಸೃಷ್ಟಿಯಾದಾಗಿನಿಂದಲೂ ಜನ್ಮವೆತ್ತಿ ಬಂದಿದ್ದಂತೆ ಈ ಅಸ್ಪೃಶ್ಯತೆ ಎಂಬುದು ಕೇವಲ ಮೈಸೂರು ಮಹಾರಾಜ ನಾಲ್ವಡಿಯವರ ಕೆಲವೇ ಕೆಲವು ಕಾನೂನುಗಳಿಂದ ಮುಕ್ತವಾಗಿರಲಿಲ್ಲ ಎಂಬುದನ್ನು ಒಪ್ಪಬೇಕಾದ ಮಾತು. ಆದರೆ ಪ್ರಪ್ರಥಮ ಬಾರಿಗೆ ನಾಲ್ವಡಿಯವನು ಪಂಚಮ ವರ್ಗದವರಿಗೆ ಶಿಕ್ಷಣ ಹಾಗೂ ಅವರ ರಾಜಕೀಯ ಆರ್ಥಿಕ ಸಾಮಾಜಿಕ ಪರಿಸ್ಥಿಗಳನ್ನು ಉತ್ತಮ ಪಡಿಸಲು ಹಾಗೂ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕೆ ಮೈಸೂರು ಸಂಸ್ಥಾನ ನೀಡಿದ ಪ್ರೋತ್ಸಾಹ ಮಾಡಿದ ಸಹಾಯ ಕೈಗೊಂಡ ಕಾರ್ಯಕ್ರಮ ತೋರಿದ ಕಳಕಳಿಯು ಗಮನಾರ್ಹವಾದವು ಎಂದರೆ ಅಷ್ಟೇ ನಿಜವಾದುದು.

**ಪಂಚಮ ಕಾರ್ಯಗಳು**

"ಮಾನವನ ಸೇವೆಯೇ ಮಾಧವನ ಸೇವೆ" ಎಂಬ ವಿಚಾರ ದೃಷ್ಟಿಯಿಂದ ಸಂಸ್ಥಾನದ ಎಲ್ಲಾ ವರ್ಗ ಜನರ ಏಳಿಗೆಗಾಗಿ ಅದರಲ್ಲಿಯೂ ಪಂಚಮರ ಶ್ರೇಯೋಭಿವೃದ್ಧಿಗಾಗಿ ನಾಲ್ವಡಿಯವರು ಕೈಗೊಂಡ ಕಾರ್ಯಕ್ರಮಗಳು ಸಂಸ್ಥಾನದಲ್ಲಿ ಸಾಂಸ್ಕೃತಿಕ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿ ಉಳಿದಿವೆ. ನಾಲ್ವಡಿಯವರು ಪಂಚಮರ ಏಳಿಗಾಗಿ ರೂಪಿಸಿದ ಎಲ್ಲಾ ಯೋಜನೆಗಳು ಸಮರ್ಪಕವಾಗಿ ಯಶಸ್ವಿ ಯಾಗಲು ಸಹಕಾರಿಗಳಾಗಿ ನಿಂತವರು ಆರ್. ಗೋಪಾಲಸ್ವಾಮಿ ಅಯ್ಯರ್. ಮತ್ತು ಅವರು ಮೂರು ದಶಕಗಳ ಕಾಲ ಸಂಸ್ಥಾನದಲ್ಲಿ ಮಾಡಿದ ನಿಸ್ವಾರ್ಥ ಸೇವೆ ಗಮನಾರ್ಹವಾದುದು. ಹಾಗೂ ಅಯ್ಯರ್‌ರವರಿಗೆ ಹಳ್ಳಿಗಳ ವ್ಯವಹಾರದಿಂದ ಮಂತ್ರಿಮಂಡಲದವರೆಗೂ ನೀಡಿದ ವಿಶೇಷ ಅಧಿಕಾರ ಮೈಸೂರು ಸಂಸ್ಥಾನದಲ್ಲಿ ಪಂಚಮರು ಇಂದು ರಾಜಕೀಯ ಸಾಮಾಜಿಕ ಆರ್ಥಿಕ ಶೈಕ್ಷಣಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರಗತಿ ಸಾಧಿಸಲು ಸಾಧ್ಯವಾಗಿದೆ ಎಂದರೆ ಅದು ಅಯ್ಯರ್‌ರವರು ನಾಲ್ವಡಿಯವರ ಸರ್ಕಾರದಲ್ಲಿ ಕೈಗೊಂಡ ಕಾರ್ಯಗಳಿಂದ ಎಂದು ಹೇಳಿದರೆ ತಪ್ಪಾಗಲಾರದು.

"ಅನಾದಿಕಾಲದಿಂದಲೂ ವಿದ್ಯೆ ಅಸ್ಪೃಶ್ಯರ ಬಳಿಗೆ ಬಂದಿರಲಿಲ್ಲ. ಅವರು ತಾವಾಗಿಯೇ ವಿದ್ಯೆ ಕಲಿಯಲು ಸಮಾಜದ ಸಮ್ಮತಿಯು ಇರಲಿಲ್ಲ". ಈ ಘೋರವಾದ ಪರಿಸ್ಥಿಯನ್ನು ನಿವಾರಿಸಲು ಸರ್ಕಾರವು ೧೯ನೇ ಶತಮಾನದ ಕೊನೆಯಲ್ಲಿ ಹಾಗೂ ೨೦ನೇ ಶತಮಾನದ ಆರಂಭದಲ್ಲಿ ಅಸ್ಪೃಶ್ಯರಿಗಾಗಿಯೇ ಪ್ರತ್ಯೇಕ ಶಾಲೆಗಳನ್ನು ತೆರೆಯಿತು. ಕಾರಣ ಅಸ್ಪೃಶ್ಯರು ಸಾರ್ವಜನಿಕ ಶಾಲೆಗಳಲ್ಲಿ ಸೇರಿ ವಿದ್ಯೆ ಕಲಿಯಲು ಸರ್ಕಾರ ತಾತ್ವಿಕವಾಗಿ ಒಪ್ಪಿಗೆ ಕೊಟ್ಟಿದ್ದಾದರೂ ಸಮಾಜದ ವಿವಿಧ

ವಲಯಗಳಲ್ಲಿ ಅದಕ್ಕೆ ಸಾಕಷ್ಟು ವಿರೋಧವಿತ್ತು. ಇದರಿಂದಾಗಿ ಸರ್ಕಾರವು ಪಂಚಮ ಶಾಲೆಗಳೆಂಬ ಪ್ರತೇಕ ಶಾಲೆಗಳನ್ನು ತೆರೆಯುವತ್ತ ಗಮನಹರಿಸಿತು. ಅನೇಕ ಪಂಚಮ ಶಾಲೆಗಳು ಕ್ರೈಸ್ತ ಮಿಷನ್ ಸಂಸ್ಥೆಗಳ ಆಶ್ರಯದಲ್ಲಿ ನಡೆಯುತ್ತಿದ್ದವು. ೧೯೧೩ರಲ್ಲಿ ವಿ.ಎಸ್. ನರಸಿಂಹ ಅಯ್ಯಂಗಾರ್‌ರವರ ಶ್ರಮದಿಂದಾಗಿ 'ದಲಿತ ಶಿಕ್ಷಣ ಮಿಷನ್' ಎಂಬ ಸಂಸ್ಥೆ ಸ್ಥಾಪಿತವಾಯಿತು. ಇದು ೧೯೧೫ರ ವೇಳೆಗೆ ೧೫ ಶಾಲೆಗಳನ್ನು ನಡೆಸುತ್ತಿತ್ತು. ಈ ಸಂಸ್ಥೆಗೆ ಸ್ವತಃ ಮಹಾರಾಣಿ ವಾಣಿವಿಲಾಸ ಸನ್ನಿಧಾನ ವದವರು ಮಹಾಪೋಷಕರಾಗಿದ್ದರು.

೧೯೧೫ರಲ್ಲಿ ಸರ್ಕಾರ ಒಂದು ಸಾರ್ವಜನಿಕ ಸುತ್ತೋಲೆಯನ್ನು ಹೊರಡಿಸಿ ಯಾರನ್ನು ಸಾಮಾಜಿಕ ಅಥವಾ ಧಾರ್ಮಿಕ ನಿರ್ಬಂಧದ ಆಧಾರದ ಮೇಲೆ ಸಾರ್ವಜನಿಕ ಶಾಲೆಗಳಿಗೆ ಸೇರುವುದನ್ನು ನಿಷೇಧಿಸಕೂಡದು ಎಂದು ತಿಳಿಸಿತು. ಸರ್ಕಾರ ಈ ನಿಟ್ಟಿನಲ್ಲಿಯೇ ಹೆಚ್ಚು ಹೆಚ್ಚು ಪಂಚಮ ಶಾಲೆಗಳನ್ನು ಪ್ರಾರಂಭಿಸಿತು. ೧೯೧೦-೧೧ರಲ್ಲಿ ಪಂಚಮರಿಗಾಗಿ ೩೭ ಸರ್ಕಾರ ಶಾಲೆಗಳು ಮತ್ತು ೩೭ ಅನುದಾನಿತ ಶಾಲೆಗಳು ಹಾಗು ೪ ಅನುದಾನರಹಿತ ಶಾಲೆಗಳನ್ನು ತೆರೆದಿದ್ದ ೧೯೧೫-೧೬ರಲ್ಲಿ ೧೭೧ ಸರ್ಕಾರಿ ಶಾಲೆಗಳು ೧೦೮ ಅನುದಾನಿತ ಶಾಲೆಗಳು ಮತ್ತು ೮೮ ಅನುದಾನರಹಿತ ಶಾಲೆಗಳನ್ನು ತೆರೆಯಲಾಯಿತು. ಮೈಸೂರು ತುಮಕೂರು ಚಿಕ್ಕಮಗಳೂರು ಹಾಸನ ಚಾಮರಾಜ ನಗರಗಳಲ್ಲಿ ಪಂಚಮ ವಿದ್ಯಾರ್ಥಿಗಳಿಗೆ ಶಿಕ್ಷಣದ ಅವಕಾಶವನ್ನು ನೀಡಿ ಅವರಲ್ಲಿ ಅರುಣೋದಯ ವನ್ನುಂಟು ಮಾಡಲು ಶ್ರಮಿಸಿದರು.

### ಶೃಂಗೇರಿ ಆಜ್ಞೆ

ಅಸ್ಪೃಶ್ಯರು ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಇತರ ಸವರ್ಣೀಯರೊಂದಿಗೆ ವಿದ್ಯೆ ಕಲಿಯಲು ಸಾಕಷ್ಟು ಸಾಮಾಜಿಕ ಪ್ರತಿರೋಧವಿತ್ತು. ಹೀಗೆ ವಿರೋಧಿಸುತ್ತಿದ್ದವರಲ್ಲಿ ಎಲ್ಲ ಸವರ್ಣೀಯ ಜಾತಿಗಳು ಸೇರಿದ್ದರು. ಬ್ರಾಹ್ಮಣರು ವಿಶೇಷವಾಗಿ ಅಸ್ಪೃಶ್ಯರೊಂದಿಗೆ ತಮ್ಮ ಮಕ್ಕಳು ವ್ಯಾಸಂಗ ಮಾಡವುದನ್ನು ಸಹಿಸುತ್ತಿರಲಿಲ್ಲ. ಅವರ ಈ ಮನೋಭಾವನೆಗೆ ಕಾರಣ ಶತಮಾನಗಳಿಂದಲೂ ಅವರು ಬೆಳೆಸಿಕೊಂಡು ಬಂದಿದ್ದ ಪ್ರತ್ಯೇಕ ಸಾಂಸ್ಕೃತಿಕ ಆವರಣ ಮತ್ತು ಪಂಚಮರ ಬಗ್ಗೆ ಸಮಾಜ ಹೊಂದಿದ್ದ ಕೀಳು ಭಾವನೆಗಳು. ೧೯೧೫ರಲ್ಲಿ ಸರ್ಕಾರದ ಆಜ್ಞೆಯ ಮೇರೆಗೆ ಶಾಲೆಗಳನ್ನು ಎಲ್ಲ ವರ್ಗದವರಿಗೂ ತೆರೆದಿಡುವ ಸುತ್ತೋಲೆಗೆ ಶೃಂಗೇರಿಯಲ್ಲಿ ಪ್ರಬಲ ವಿರೋಧ ಕಂಡುಬಂದಿತು (ಇದೇ 'ಶೃಂಗೇರಿ ಆಜ್ಞೆ' ಎಂದು ಪ್ರಸಿದ್ಧಿ ಪಡೆದುಕೊಂಡಿದೆ). ಏಕೆಂದರೆ ಅಲ್ಲಿನ ಆಂಗ್ಲೋ ಎರ್ನಾಕ್ಯೂಲರ್ ಶಾಲೆಗೆ ಒಬ್ಬ ದಲಿತ ವಿದ್ಯಾರ್ಥಿಯನ್ನು ಸೇರಿಸಲಾಗಿತ್ತು. ಇದನ್ನು ಪ್ರತಿಭಟಿಸಿ ಮುಸ್ಲಿಂರೂ ಸೇರಿದಂತೆ ಸುಮಾರು ೪೦೦ ವೈಧಿಕ ಬ್ರಾಹ್ಮಣರು ಒಂದು ಸಮಿತಿ ರಚಿಸಿಕೊಂಡು ಸರ್ಕಾರಕ್ಕೆ ಅಹವಾಲು ಸಲ್ಲಿಸಿದರು. ಈ ಬಗ್ಗೆ ಶೃಂಗೇರಿ ಜಹಗೀರನ ಏಜೆಂಟರಿಗೂ ಹಾಗೂ ಸರ್ಕಾರದ ಇನ್ಸ್‌ಪೆಕ್ಟರ್ ಜನರಲ್‌ರ ನಡುವೆ ಅನೇಕ ಪತ್ರ ವ್ಯವಹಾರಗಳು ನಡೆದುವು. ಎಂ. ಶಾಮರಾವ್‌ರವರು ಶಿಕ್ಷಣ ಇಲಾಖೆಯ ಇನ್ಸ್‌ಪೆಕ್ಟರ್ ಜನರಲ್ ಆಗಿದ್ದಾಗ ಪ್ರಾರಂಭವಾದ ಈ ವಿವಾದ ೧೯೧೭ರ ಮಧ್ಯವಧಿಯಲ್ಲಿ ಸಿ.ಆರ್. ರೆಡ್ಡಿಯವರು ಈ ಹುದ್ದೆಗೆ ಬಂದಾಗಲೂ ಮುಂದುವರಿಯಿತು. ಸರ್ಕಾರ ಈ ಸುತ್ತೋಲೆಯನ್ನು ಹಿಂದಕ್ಕೆ ಪಡೆಯಲು ಒಪ್ಪಲಿಲ್ಲ. ಕೊನೆಗೆ ಜಹಗೀರಿದಾರರು ಪ್ರತೇಕ ಆಂಗ್ಲೋ ಏರ್ನಾಕ್ಯೂಲರ್

ಶಾಲೆಯನ್ನು ಸ್ಥಾಪಿಸಿಕೊಳ್ಳಲು ಸರ್ಕಾರದ ಅನುಮತಿ ಕೇಳಿದರು. ಅದಕ್ಕೆ ಸರ್ಕಾರ ಕೆಲವು ಷರುತ್ತುಗಳ ಮೇಲೆ ಅನುಮತಿ ನೀಡಿತು. ಅಂದರೆ ಈ ಶಾಲೆಗೆ ಸರ್ಕಾರ ಅನುದಾನ ನೀಡಲಿಲ್ಲ. ದಲಿತರ ಏಳಿಗೆಯಲ್ಲಿ ಅಪಾರ ಕಾಳಜಿ ಹೊಂದಿದ್ದ ಸಿ.ಆರ್. ರೆಡ್ಡಿಯವರು ಮಹಾರಾಜರ ಬೆಂಬಲ ಪಡೆದು ೧೯೧೮ರ ನವೆಂಬರ್ ೨೯ರಂದು ಒಂದು ಆದೇಶವನ್ನು ಹೊರಡಿಸಿ ರೈಲು ಆಸ್ಪತ್ರೆ ನ್ಯಾಯಾಲಯ ಗಳಂತೆಯೇ ಶಾಲೆಗಳೂ ಸಾರ್ವಜನಿಕ ಸಂಸ್ಥೆಗಳೆಂದು ಘೋಷಿಸಿದರು.[೨] ಈ ರೀತಿ ಸರ್ಕಾರ ಅಸ್ಪೃಶ್ಯರು ವಿದ್ಯೆಕಲಿಯುವ ಹಕ್ಕನ್ನು ಎತ್ತಿಹಿಡಿಯಿತು.

ಅಸ್ಪೃಶ್ಯತೆ ಎನ್ನುವ ಪಿಡುಗು ಕೇವಲ ವ್ಯಕ್ತಿಗತ ಕಾರಣದಿಂದ ಬಂದದ್ದಾಗಿರದೆ ಪರಂಪರಾನುಗತ ಪೂರ್ವಗ್ರಹ ಭಾವನೆಯಿಂದ ಬಂದುದ್ದಾಗಿತು. ಆದ್ದರಿಂದ ಆಗ ಬ್ರಾಹ್ಮಣೇತರ ಚಳುವಳಿ ಒಂದು ಕಡೆ ಬಿರುಸಾಗಿದ್ದರೂ ಸಹ ಅಸ್ಪೃಶ್ಯರ ಶಿಕ್ಷಣದ ವಿಷಯದ ಬಗ್ಗೆ ಬ್ರಾಹ್ಮಣರಲ್ಲದೆ ಇತರ ಶೂದ್ರ ಸವರ್ಣೀಯ ಜಾತಿಗಳವರೂ ವಿರೋಧ ವ್ಯಕ್ತಪಡಿಸಿರುವುದಕ್ಕೆ ಅನೇಕ ಆಧಾರಗಳಿವೆ. ೧೯೧೮–೧೯ರಲ್ಲಿ ಚಿತ್ರದುರ್ಗ ಆಂಗ್ಲೋ ವರ್ನಾಕ್ಯೂಲರ್ ಶಾಲೆಗೆ ಮಾದಿಗರ ಹುಡುಗನೊಬ್ಬನನ್ನು ಮುಖ್ಯೋಪಾಧ್ಯಾಯ ಒತ್ತಾಸೆ ನೀಡಿ ಸೇರಿಸಿದಾಗಲೂ ಇದೇ ರೀತಿ ಪ್ರತಿಭಟನೆ ವ್ಯಕ್ತವಾಯಿತು. ಈ ಸಮಯದಲ್ಲಿ ಬಹುತೇಕ ಸವರ್ಣೀಯರು ಈ ಪ್ರತಿಭಟನೆಯಲ್ಲಿ ಪಾಲ್ಗೊಂಡಿದ್ದರು. ಈ ಪ್ರತಿನಿಭಟನೆಗಳಿಗೆ ಸೊಪ್ಪು ಹಾಕದ ನಾಲ್ವಡಿಯವರ ಆದರ್ಶ ಸರ್ಕಾರವು ಅಸ್ಪೃಶ್ಯರು ಸಾರ್ವಜನಿಕ ಶಾಲೆಗಳಿಗೆ ಪ್ರವೇಶ ಪಡೆಯುವ ಹಕ್ಕನ್ನು ಮಾನ್ಯಮಾಡಿತು. ಇದರಿಂದಾಗಿ ಪ್ರತಿಭಟನೆಗಳಿಗೆ ಹೆಚ್ಚಾಗಿ ನಡೆಯದೆ ತಮ್ಮಲ್ಲಿಯೇ ಈ ಕ್ರಮದ ಬಗ್ಗೆ ಮನವರಿಕೆ ಮಾಡಿಕೊಂಡು ಸುಮ್ಮನಾಗಬೇಕಾಯಿತು.

ಸರ್ಕಾರದ ಆಜ್ಞೆಯಿಂದಾಗಿ ಅಯ್ಯರ್‌ರವರಲ್ಲಿ ಹೊಸ ಬಗೆ ಉತ್ಸಾಹ ತಂದಿತ್ತಲ್ಲದೆ ಅವರ ಆನಂದಕ್ಕೆ ಪಾರವೇ ಇಲ್ಲವಾಗಿ ತಾವೇ ಹುಡುಗರನ್ನು ಕರೆದೊಯ್ದು ಶಾಲೆಗಳಿಗೆ ಸೇರಿಸಿದರು. ಹಾಗೂ ಇದೇ ವೇಳೆಗೆ ಮೈಸೂರು ಸಿವಿಕ್ ಆಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಷಿಯೇಷನ್‌ನ ಉಪಾಧ್ಯಾಕ್ಷರು ಮತ್ತು ಶಿಕ್ಷಣ ಇಲಾಖೆಯ ಇನ್ಸ್‌ಪೆಕ್ಟರ್ ಜನರಲ್ ಆಗಿದ್ದ ಸಿ.ಆರ್. ರೆಡ್ಡಿಯವರು ಪಂಚಮರ ಏಳಿಗಾಗಿ ಪಣತೊಟ್ಟು ಸಮಯ ಸಿಕ್ಕಾಗೆಲ್ಲ ಪಂಚಮರ ಏಳಿಗಾಗಿ ಅವರ ಬಗ್ಗೆ ಸವರ್ಣೀಯರಲ್ಲಿರು ಮನೋಭಾವನೆಯನ್ನು ಹೋಗಲಾಡಿಸಲು ಸಲುವಾಗಿ ಭಾಷಣ ಮಾಡುತ್ತಿದ್ದರು. ಹಾಗೂ ಪಂಚಮರಿಗಾಗಿಯೇ ಮೈಸೂರಿನಲ್ಲಿ ೧೯೨೦ರಲ್ಲಿ ಮರಗೆಲಸ ನೇಯ್ಗೆ ಹೋಲಿಗೆ ತೋಟಗಾರಿಕೆ ಮೊದಲಾದ ತರಬೇತಿ ಉದ್ಯೋಗ ಶಾಲೆಗಳನ್ನು ತೆರೆದು ಉಚಿತವಾಗಿ ಊಟ ವಸತಿ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು. ಪರಿಣಾಮವಾಗಿ ಈ ಉದ್ಯೋಗ ತರಬೇತಿ ಶಾಲೆ ಯೊಂದರಲ್ಲೇ ೩೦೦ ಜನ ವಿದ್ಯಾರ್ಥಿಗಳು ತರಬೇತಿ ಪಡೆಯುತ್ತಿದ್ದರು. ಇದರೊಂದಿಗೆ ಪಂಚಮರಿಗೆ ಸಾಮಾನ್ಯ ವಿದ್ಯಾಭ್ಯಾಸ ಮಾತ್ರವಲ್ಲದೆ ವೃತ್ತಿಪರ ಶಿಕ್ಷಣವನ್ನು ನೀಡಲು ಸರ್ಕಾರ ವ್ಯವಸ್ಥೆ ಮಾಡಿತು. ಪಂಚರಿಗಾಗಿ ಮೈಸೂರು ಸೇರಿದಂತೆ ತುಮಕೂರು ಚಿಕ್ಕಮಗಳೂರು ಹಾಗೂ ಬೆಂಗಳೂರು ಮೊದಲಾದ ಕಡೆಗಳಲ್ಲಿ ವಸತಿ ಶಾಲೆಗಳನ್ನು ತೆರೆಯಲಾಯಿತು. ಸಿ.ಆರ್. ರೆಡ್ಡಿಯವರ ಕಾರ್ಯ ಮತ್ತು ಸರ್ಕಾರ ತಾಳಿದ ನಿಲುವು ಅಯ್ಯರ್‌ರವರಲ್ಲಿ ಹೊಸ ಹುರಪನ್ನು ತಂದಿದ್ದರ ಪರಿಣಾಮ ತಾವೇ ಹುಡುಗರನ್ನು ಕರೆದುತಂದು ಈ ಉದ್ಯೋಗ ತರಬೇತಿ ಶಾಲೆಗಳಿಗೆ ಸೇರಿಸಿದರು.

**ಸಿ.ಆರ್. ರೆಡ್ಡಿ**

ಸಿ.ಆರ್. ರೆಡ್ಡಿ (ಕಟ್ಟಿ ಮಂಚಿರಾಮಲಿಂಗರೆಡ್ಡಿ)ಯವರು ಇಂಗ್ಲೆಂಡ್‌ನ ಕೇಂಬ್ರಿಡ್ಜ ವಿಶ್ವವಿದ್ಯಾಲಯದಲ್ಲಿ ಎಂ.ಎ. ಪದವಿಯನ್ನು ಪ್ರಥಮ ರ್‍ಯಾಂಕ್‌ನಲ್ಲಿ ಉತ್ತೀರ್ಣರಾದ ಶ್ರೇಷವಿ ಪ್ರತಿಭಾವಂತರು. ವಿದ್ಯಾರ್ಥಿ ದಿಶೆಯಲ್ಲಿಯೇ ತಮ್ಮನ್ನು ಸಾಮಾಜಿಕ ಕ್ಷೇತ್ರಕ್ಕೆ ತೊಡಗಿಸಿಕೊಂಡ ಇವರು ೧೯೧೬ರಲ್ಲಿ ಅಸ್ತಿತ್ವಕ್ಕೆ ಬಂದ 'ಜಸ್ಟೀಸ್ ಪಾರ್ಟಿ'ಯ ಪ್ರಣಾಳಿಕೆಯಲ್ಲಿ 'ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ' ಎಂದಿತ್ತು. ಇದನ್ನು ಮನಗಂಡ ರೆಡ್ಡಿಯವರು ಈ ಪಕ್ಷದ ಸದಸ್ಯರಿಗೆ ಪತ್ರ ಬರೆದು "ನಿಮ್ಮ ಸಾಮಾಜಿಕ ನ್ಯಾಯ ಕಲ್ಪನೆಯ ಪರಿಧಿಯಲ್ಲಿ ದಲಿತರೂ ಸೇರುತ್ತಾರೆಂದು ಭಾವಿಸುತ್ತೇನೆ ಹಾಗೂ ಅವರ ಏಳಿಗೆಗೆ ನೀವೆಲ್ಲಾ ದುಡಿಯಬೇಕು ಎಂದು ಆಗ್ರಹಪಡಿಸಿದರು. ಮೈಸೂರು ಸಂಸ್ಥಾನದ ಶಿಕ್ಷಣ ಇಲಾಖೆಯ ಅಧಿಕಾರಿಗಳಾಗಿದ್ದ ವೇಳೆಯಲ್ಲಿ ಸರ್ಕಾರದಿಂದ ಅನುದಾನ ಪಡೆಯುತ್ತಿದ್ದ ಎಲ್ಲಾ ಶಾಲೆಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ಕಲ್ಪಿಸುವುದರ ಜೊತೆಗೆ ಉದಾರವಾದ ಶಿಕ್ಷಣದ ಸೌಲಭ್ಯಗಳನ್ನು ಮತ್ತು ಉಚಿತ ಊಟ ವಸತಿ ನೇಮಕಾತಿ ಮತ್ತು ವಿದ್ಯಾರ್ಥಿ ವೇತನಗಳನ್ನು ನಾಲ್ವಡಿಯವರ ಸಹಕಾರದಿಂದ ದೊರಕಿಸಿಕೊಟ್ಟರು. ಇದಕ್ಕೆ ಬ್ರಾಹ್ಮಣೇತರು ಮತ್ತು ಪ್ರಜಾಮಿತ್ರ ಮಂಡಲಿಯವರು ವಿರೋಧಿಸುತ್ತಿದ್ದರು. ಈ ವಿರೋಧವನ್ನು ತಡೆಗಟ್ಟುವ ಉದ್ದೇಶದಿಂದ ೧೯೨೦ರಲ್ಲಿ ನಡೆಯಲಿದ್ದ ಅಸ್ಪೃಶ್ಯರ ಸಮಾವೇಶವನ್ನು ಕರೆದು ಅವರನ್ನು ಸಂಘಟಿಸಲು ತೀರ್ಮಾನಿಸಿ ಈ ಸಮಾವೇಶಕ್ಕೆ ಅಧ್ಯಕ್ಷತೆ ವಹಿಸುವಂತೆ ಬಾಬಾಸಾಹೇಬ್ ಅಂಬೇಡ್ಕರ್‌ರವರನ್ನು ಕೇಳಿಕೊಂಡರು. ಆದರೆ ಕೆಲವು ಮಿತ್ರರು ಈ ಸಮಾವೇಶದ ಬಗ್ಗೆ ನಿರಾಸಕ್ತಿಯನ್ನು ತಾಳಿದ್ದರಿಂದ[8] ಮನನೊಂದು ೧೯೨೧ರಲ್ಲಿ ತಮ್ಮ ಹುದ್ದೆಗೆ ರಾಜಿನಾಮೆ ನೀಡಿದರು. ಒಟ್ಟಾರೆ ಅಯ್ಯರ್‌ರವರ ಸೇವಾಕಾರ್ಯಕ್ಕೆ ಬೆನ್ನೆಲುಬಾಗಿ ನಿಂತ ಇವರು ಅನೇಕ ಸುಧಾರಣಾ ಕಾರ್ಯ ಚಟುವಟಿಕೆಗಳ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದು ಕೊಳ್ಳುತ್ತಿದ್ದರು.

ಸಿ.ಆರ್. ರೆಡ್ಡಿಯವರು ಪಂಚಮರ ಬಗ್ಗೆ ಅಪಾರ ಕಾಳಜಿಹೊಂದಿದ್ದರು ಮತ್ತು ದಕ್ಷ ಅಧಿಕಾರಿ ಗಳಾಗಿದ್ದರು. ಅಯ್ಯರ್‌ರವರು ಈಗಾಗಲೆ ಪ್ರಸ್ತಾಪಿಸಿದಂತೆ ಸರ್ಕಾರ ಹೊರಡಿಸಿದ ಆಜ್ಞೆ ಮತ್ತು ರೆಡ್ಡಿಯವರು ಮೈಸೂರಿನಲ್ಲಿ ಸ್ಥಾಪಿಸಿದ ಉದ್ಯೋಗ ತರಬೇತಿ ಶಾಲೆಗಳಿಂದ ಪ್ರಭಾವಿತರಾಗಿ ತಾವೇ ಸ್ವತಃ ಹುಡುಗರನ್ನು ಶಾಲೆಗಳಿಗೆ ಕರೆದುಕೊಂಡು ಹೋಗಿ ಮುಖ್ಯೋಪಾಧ್ಯರನ್ನು ಭೇಟಿ ಮಾಡಿ ತಾವೇ ಅರ್ಜಿಗಳನ್ನು ಬರೆದು ಪೋಷಕರ ಸಹಿ ಮಾಡಿ ದಾಖಲು ಮಾಡಿಸುತ್ತಿದ್ದರು. ಈ ಹಿನ್ನಲೆಯಲ್ಲಿ ಮತ್ತೊಮ್ಮೆ ನಂಜನಗೂಡಿಗೆ (ಮೂರನೆಯ ಅಧ್ಯಾಯದಲ್ಲಿ ಪ್ರಾಸ್ತಪಿಸಲಾಗಿದೆ.) ಭೇಟಿ ನೀಡಿದರು. ಕಾರಣ ಸರ್ಕಾರದ ಆಜ್ಞೆಯಾಗಿದ್ದರೂ ಬ್ರಾಹ್ಮಣರು ಮತ್ತು ಲಿಂಗಾಯಿತರು ಅಸ್ಪೃಶ್ಯರನ್ನು ಶಾಲೆಗೆ ಸೇರಿಸಲು ನಿರಾಕರಿಸಿದ್ದರು. ವಿಷಯ ತಿಳಿದು ನಂಜನಗೂಡಿಗೆ ಬಂದ ಅಯ್ಯರ್ ಮುಖ್ಯೋಪಾಧ್ಯಯ ರನ್ನು ಭೇಟಿ ಮಾಡಿ ಸರ್ಕಾರದ ಆಜ್ಞೆಯಾಗಿದೆ. ನೀವು ನಿರಾಕರಿಸುವಂತಿಲ್ಲ ಎಂದು ಹೇಳಿದರಲ್ಲದೆ ಒಂದು ವೇಳೆ ಕಾನೂನನ್ನು ಅಲ್ಲಗೆಳೆದರೆ ಪರಿಣಾಮ ಬೇರೆಯಾಗುತ್ತದೆ ಎಂಬ ಎಚ್ಚರಿಕೆ ನೀಡಿದರು. ಇದರಿಂದ ಕೋಪೋದ್ರಿಕ್ತರಾದ ಇಲ್ಲಿನ ಸವರ್ಣಿಯರು ಮತ್ತೆ ಬಂದೆಯಾ ಹೊಲೆಯರ ಗೋಪಾಲ ಪಂಚಮ ನಿಕೃಷವಿ ಎಂದೆಲ್ಲ ಬೈಯುತ್ತಾ ಅವರನ್ನು ಹೊಡೆದು ತಮ್ಮ ಬೀದಿಯಿಂದ ಓಡಿಸಿದರು.

ವಿಷಯ ತಿಳಿದು ಕೋಪಗೊಂಡ ಪಂಚಮರು ರಾತ್ರಿ ಒಂದೆಡೆ ಸೇರಿ ಸೆಡು ತೀರಿಸಿಕೊಳ್ಳಲು ಮುಂದಾದರು. ಅಯ್ಯರ್ ಅವರನ್ನು ತಡೆದು ರಾತ್ರಿ ಅಲ್ಲೇ ಮಲಗಿದ್ದು ಬೆಳಗ್ಗೆ ಬೆಂಗಳೂರಿಗೆ ಬಂದು ಸಿ.ಆರ್. ರೆಡ್ಡಿಯವರಿಗೆ ವಿಷಯ ತಿಳಿಸಿದರು. ವಿಷಯ ತಿಳಿದ ರೆಡ್ಡಿಯವರು ಅಯ್ಯರ್‌ರೊಡನೆ ನಂಜನಗೂಡಿಗೆ ಬಂದು ಬ್ರಾಹ್ಮಣರಿಗೆ ಬುದ್ಧಿವಾದ ಹೇಳಿದರು. ಆದರೂ ಅವರ್‍ಯಾರು ಇವರ ಮಾತನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಇದರಿಂದ ಕೋಪಗೊಂಡ ರೆಡ್ಡಿಯವರು ನಾಳೆಯಿಂದಲೇ ಶಾಲೆಯನ್ನು ಪಂಚಮರ ಕೇರಿಗೆ ವರ್ಗಾಯಿಸುತ್ತೇನೆಂದು ಹೇಳಿ ಪಂಚಮರ ಕೇರಿಗೆ ಶಾಲೆಯನ್ನು ವರ್ಗಾಯಿಸಿ ಆಜ್ಞೆ ಹೊರಡಿಸಿದರು. ಇದನ್ನು ವಿರೋಧಿಸಿ ಚಳವಳಿಗಳು ನಡೆದರೂ ಮಹಾರಾಜರು ಬಹಿರಂಗ ವಾಗಿಯೇ ಈ ಆಜ್ಞೆಯನ್ನು ಸಮರ್ಥಿಸಿಕೊಂಡಿದ್ದರಿಂದ ವಿರೋಧಿಗಳು ತಣ್ಣಗಾಗಬೇಕಾಯಿತು.

**ಪ್ರಜಾಪ್ರತಿನಿಧಿ ಸಭೆಯಲ್ಲಿ ಅಯ್ಯರ್‌ರ ನಿಲುವುಗಳು**

ಮೈಸೂರು ಸಂಸ್ಥಾನದ ಆಳ್ವಿಕೆಯ ಕಾಲದಲ್ಲಿ ಭಾರತದಲ್ಲಿಯೇ ಮೊದಲ ಬಾರಿಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಿವಾನರಾದ ಸಿ. ರಂಗಚಾರ್ಲುರವರು ೧೮೮೧ರಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಎರಡು ಉದ್ದೇಶಗಳನ್ನಿಟ್ಟುಕೊಂಡು ಸ್ಥಾಪಿಸಿದರು. ಮೊದಲನೆಯದಾಗಿ ಹಿಂದಿನ ಸಾಲಿನ ಆಡಳಿತದ ಬಗೆಗಿನ ವರದಿಯನ್ನು ತಿಳಿಯುವುದು ಮತ್ತು ಮುಂದಿನ ಸಾಲಿನ ಆಡಳಿತ ಬಗ್ಗೆ ತಮ್ಮ ಸಲಹೆಗಳನ್ನು ನೀಡುವುದಾಗಿತ್ತು. ಎರಡನೆಯದು ಅಧಿಕಾರಶಾಹಿಯೂ ಎಂದಿಗೂ ಜನ ಹಿತದ ವಿರುದ್ಧ ವರ್ತಿಸದಂತೆ ನೋಡಿಕೊಳ್ಳುವುದಾಗಿತ್ತು. ಇದರ ಮೊದಲ ಸಭೆಯನ್ನು ಅಕ್ಟೋಬರ್ ೭, ೧೮೮೧ರಲ್ಲಿ ನಡೆಸಲಾಯಿತು. ಇದರಲ್ಲಿ ಜಿಲ್ಲಾಧಿಕಾರಿಗಳಿಂದ ನೇಮಕ ಮಾಡಲಾದ ೧೪೪ ಸದಸ್ಯರು ಭಾಗವಹಿಸಿ ಪ್ರಜೆಗಳ ಕುಂದುಕೊರತೆಗಳನ್ನು ಜೊತೆಗೆ ಸಕಾರ್ರದ ನೀತಿಗಳನ್ನು ಮತ್ತು ಸರ್ಕಾರ ಕೈಗೊಂಡ ನಿರ್ಧಾರಗಳನ್ನು ಸಭೆಯಲ್ಲಿ ಮಂಡಿಸಲಾಯಿತು. ಈ ಸಭೆಯು ಜಮೀನ್ದಾರರನ್ನು ವರ್ತಕರನ್ನು ಪ್ಲಾಂಟರ್‌ಗಳನ್ನು ಹಾಗೂ ಕೃಷಿಕರನ್ನೊಳಗೊಂಡಿತು. ನಾಲ್ವಡಿಯವರ ಕಾಲದಲ್ಲಿ ೧೯೦೭ರಲ್ಲಿ ಲೆಜಿಸ್ಲೆಟಿವ್ ಕೌನ್ಸಿಲ್‌ನ್ನು ಸ್ಥಾಪಿಸಿಲಾಯಿತ್ತಲ್ಲದೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯತ್ವನ್ನು ೩೦ಕ್ಕೆ ಏರಿಸಲಾಯಿತು. ಕೊನೆಗೆ ೧೯೨೪ರ ವೇಳೆಗೆ ಇದರ ಸದಸ್ಯತ್ವದ ಸಂಖ್ಯೆ ೨೭೯ಕ್ಕೆ ಹೆಚ್ಚಿಸ ಲಾಯಿತು. ೧೯೧೭ರಲ್ಲಿ ಸ್ಥಾಪಿಸಲ್ಪಟ್ಟ ಪ್ರಜಾಮಿತ್ರ ಮಂಡಲಿಯವರು ಸರ್ಕಾರದೊಡನೆ ಅನ್ಯೋನ್ಯತೆ ಯಿಂದಿದ್ದು ಸವಲತ್ತುಗಳನ್ನು ಗಳಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಅಂದರೆ ರಾಜ್ಯದಲ್ಲಿ ಶೇ. ೯೩ ರಷ್ಟಿದ್ದ ಎಲ್ಲಾ ಬ್ರಾಹ್ಮಣೇತರರನ್ನು ಪ್ರತಿನಿಧಿಸುತ್ತದೆ ಎಂದು ಹೇಳಿಕೊಳ್ಳುತ್ತಾ ಬ್ರಾಹ್ಮಣೇತರರಿಗೆ ಗಮನಾರ್ಹ ಸವಲತ್ತುಗಳನ್ನು ಗಳಿಸಿಕೊಳ್ಳುವಲ್ಲಿ ಯಶಸ್ವಿಗಿದ್ದರು. ಆದರೆ ವಿದ್ಯಾರ್ಹತೆಯುಳ್ಳ ಕೆಲವು ಬ್ರಾಹ್ಮಣೇತರರು ಮಾತ್ರ ಸವಲತ್ತಿನ ಪ್ರಯೋಜನ ಪಡೆದುಕೊಂಡರು. ಇದರಲ್ಲಿ ಹೆಚ್ಚಿನ ಸವಲತ್ತುಗಳನ್ನು ಪಡೆದು ಕೊಂಡವರೇ ಚಳುವಳಿಯ ನಾಯಕರು ಹಾಗೂ ಅವರ ಸಂಬಂಧಿಗಳು. ಆದರೆ ಪ್ರಜಾಮಿತ್ರ ಮಂಡಳಿಯ ನಾಯಕರು ಅಸ್ಪೃಶ್ಯರ ಬಗೆಗಿನ ತಮ್ಮ ಧೋರಣೆಯಲ್ಲಿ ನಿರ್ಲಿಪ್ತರಾಗಿದ್ದರಲ್ಲದೆ ಅನೇಕ ವೇಳೆ ಅಸ್ಪೃಶ್ಯರಿಗೆ ಸರ್ಕಾರ ಕೊಟ್ಟ ಸವಲತ್ತುಗಳ ಬಗೆಗೆ ತಕರಾರು ತೆಗೆದು ವಿರೋಧಿಸುತ್ತಿದ್ದುದೂ ಉಂಟು.[೪]

ಗ್ರಾಮೀಣ ಪ್ರದೇಶದಲ್ಲಿ ಅಸ್ಪೃಶ್ಯರನ್ನು ಆರ್ಥಿಕವಾಗಿ ಹೆಚ್ಚು ಶೋಷಣೆ ಮಾಡುತ್ತಿದ್ದವರೇ

ಮಾಡುತ್ತಿರವವರೇ ಬ್ರಾಹ್ಮಣೇತರ ಪ್ರಬಲ ವರ್ಗ ಹಾಗೂ ಅವರ ಬೆಳವಣಿಗೆಯನ್ನು ಸಹಜವಾಗಿಯೇ ತಡೆಯಲು ಮೇಲ್ವರ್ಗಗಳು ಪ್ರಯತ್ನಿಸುತ್ತಿದ್ದವು ಹಾಗೂ ಪ್ರಯತ್ನಿಸುತ್ತಿವೆ. ಹಾಗಾಗಿ ೧೯೮೧ರಲ್ಲಿ ಮಹಾರಾಜರಿಗೆ ಮನವಿಯನ್ನು ಸಲ್ಲಿಸಲು ಹೋದ ನಿಯೋಗದಲ್ಲಿ ಅಸ್ಪೃಶ್ಯರಿಗೆ ಪ್ರಾತಿನಿಧ್ಯ ಕೊಡದಿದ್ದುದು ಅಸ್ಪೃಶ್ಯರ ಯಾವುದೇ ಸಮಸ್ಯೆಯನ್ನು ಒಳಗೊಳ್ಳದೆ ಇದ್ದುದನ್ನು ಈ ಹಿನ್ನೆಲೆಯಲ್ಲಿ ನಾವು ಗಮನಿಸಬಹುದು. ಅಸ್ಪೃಶ್ಯ ವರ್ಗವು ಪ್ರಜಾಮಿತ್ರ ಮಂಡಲಿಯ ನಾಯಕತ್ವ ಒಪ್ಪಿಕೊಳ್ಳಲು ಮುಂದೆಬಾರದೆ ಈ ನಾಯಕರ ಬಗ್ಗೆ ಅಪನಂಬಿಕೆ ಹೊಂದಿ ಪ್ರತ್ಯೇಕವಾಗಿ ತನ್ನದೆಯಾದ ಒಂದು ಮನವಿಯನ್ನು ದಿವಾನರಾಗಿದ್ದ ಕಾಂತರಾಜಅರಸರಿಗೆ ಸಲ್ಲಿಸಿತು. ಈ ಹಿನ್ನಲೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಯುವರಾಜರಾದ ಕಂಠೀರವನರಸಿಂಹರಾಜಒಡೆಯರ ಸಲಹೆಯ ಮೇರೆಗೆ ೧೯೧೮ರಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್‌ರವನ್ನು ಪ್ರಜಾಪ್ರತಿನಿಧಿಸಭೆಗೆ ನಾಮಕರಣ ಮಾಡಲಾಯಿತು. ಇದರ ಉದ್ದೇಶ ಪಂಚಮರ ಹಿತರಕ್ಷಣೆ ಮತ್ತು ಅವರ ಬಾಳನ್ನು ಹಸನುಗೊಳಿಸಿ ಸಮಾಜದ ಮುಖ್ಯವಾಹಿನಿಗೆ ತರುವುದಾಗಿತ್ತು. ಹಾಗಾಗಿ ಪಂಚಮರ ಕಾರ್ಯದಲ್ಲಿ ಅಯ್ಯರ್‌ರವರಿಗೆ ಸಂಪೂರ್ಣವಾಗಿ ಹಳ್ಳಿಗಳ ವ್ಯವಹಾರದಿಂದ ಹಿಡಿದು ಮಂತ್ರಿಮಂಡಲದವರೆಗೂ ಸಂಪೂರ್ಣ ಅಧಿಕಾರ ವನ್ನು ನೀಡಲಾಗಿತ್ತು. ಈ ಅಧಿಕಾರದ ಪರಿಣಾಮವೇ ಪಂಚಮರು ಮೈಸೂರು ಸಂಸ್ಥಾನದಲ್ಲಿ ಬೆಳವಣಿಗೆ ಹೊಂದಲು ಕಾರಣವಾಯಿತೆಂದು ಹೇಳಬಹುದು.

ಹಿಮಾಲಯದಿಂದ ಕನ್ಯಾಕುಮಾರಿವರೆಗೂ ಹಬ್ಬಿರುವ ಹಿಂದೂ ಸಮಾಜದಲ್ಲಿ ಅಸ್ಪೃಶ್ಯತೆಯು ಆಚರಣೆಯಲ್ಲಿದೆ. ಈ ಅಸ್ಪೃಶ್ಯರನ್ನು ನೀಚ ನಿಕೃಷ್ಟ ಹೊಲಸಿನ ಜನಾಂಗವನ್ನಾಗಿ ಸೃಷ್ಟಿ ಮಾಡಿದ ಮನುವಿನಿಂದಾಗಿ ಈ ದೇಶದಲ್ಲಿ ಎಲ್ಲರಿಗೂ ಸಾಮಾಜಿಕ ನ್ಯಾಯ ದೊರಕುವುದು ಸಾಧ್ಯವಾಗದ ಮಾತಾಗಿದೆ. ಏಕೆಂದರೆ ಅಸ್ಪೃಶ್ಯತೆ ಮಾಯವಾಗುವುದು ಒಟ್ಟಾರೆ ಹಿಂದೂ ಸಾಮಾಜಿಕ ವ್ಯವಸ್ಥೆ ಅದರಲ್ಲಿಯೂ ಮುಖ್ಯವಾಗಿ ಜಾತಿಪದ್ಧತಿ ಪೂರ್ಣ ನಿರ್ನಾಮವಾದಾಗ ಮಾತ್ರ. ಇದು ಭಾರತದಂತಹ ರಾಷ್ಟ್ರದಲ್ಲಿ ಸಾಧ್ಯವೇ? ಇದು ಸಾಧ್ಯವಾಗದ ಮಾತೆ. ಜಾತಿ ಪದ್ಧತಿಯು ದಿನೇ ದಿನೇ ವಿದ್ಯಾವಂತ ವರ್ಗದಲ್ಲಿಯೇ ಹೆಚ್ಚಾಗುತ್ತಿರುವ ಇಂದಿನ ದಿನಗಳಲ್ಲಿ ಇನ್ನು ಅಸ್ಪೃಶ್ಯತೆ ಮಾಯವಾಗುವ ಬಗೆ ಹೇಗೆಲ ಹೀಗಿರುವಾಗ ಸಾಮಾಜಿಕ ನ್ಯಾಯದ ಕಲ್ಪನೆಯನ್ನು ಭಾರತೀಯ ಜಾತಿ ವ್ಯವಸ್ಥೆಯ ರಚನೆಯಲ್ಲಿ ಹೇಗೆ ನೀರಿಕ್ಷಿಸಲು ಸಾಧ್ಯ? ಇಂತಹ ಪರಿಸ್ಥಿತಿಯು ೨೧ನೇ ಶತಮಾನದಲ್ಲಿ ಹೀಗಿರ ಬೇಕಾದರೆ ಇನ್ನೂ ರಾಜರ ಆಳ್ವಿಕೆಯ ಕಾಲಘಟ್ಟದಲ್ಲಿ ಅಸ್ಪೃಶ್ಯರ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ಗ್ರಹಿಸಿಕೊಳ್ಳುವುದು ಕಷ್ಟ ಸಾಧ್ಯವಾಗುತ್ತದೆ.

ಅಸ್ಪೃಶ್ಯರು ರೈತರಿಗೆ ಬಿಟ್ಟಿ ಬೇಗಾರಿ ಕೆಲಸ ಮಾಡುವುದು ನೀರಗಂಟಿಯಾಗಿ ಕೆಲಸ ಮಾಡುತ್ತಿದ್ದರು. ಈ ನೀರಗಂಟಿಗಳನ್ನೇ ತೋಟಿತಳವಾರ ಎನ್ನುತ್ತಾರೆ. ಗೌಡರ ಹೊಲ-ಗದ್ದೆ ಕಾಯುವುದು ಇವರ ಕೆಲಸ. ಈ ಗುಲಾಮಗಿರಿ ಕಾರ್ಯಕ್ಕೆ ಅಲ್ಪಸ್ವಲ್ಪ ದವಸಧಾನ್ಯ ಕಾಳು-ಕಡಿಯನ್ನು ವರ್ಷಕ್ಕೊಮ್ಮೆ ಕಣಗಳಲ್ಲಿ ಇವರಿಗೆ ಇವರ ಸೇವೆಗಾಗಿ ಸವರ್ಣಿಯರು ಕೊಡುತ್ತಿದ್ದರು. ಈ ಪದ್ಧತಿಗೆ 'ಮಾಮೂಲು' 'ವೇತ' 'ಮಿರಾಸ್' ಎಂದು ಸರ್ಕಾರ ಹೆಸರಿತ್ತು. ಈ ಸೌಲಭ್ಯವನ್ನು ತಪ್ಪಿಸಲು ಮಾಲೂರು ತಾಲ್ಲೂಕಿನ ವೆಂಕಟಸ್ವಾಮಿಗೌಡರು ಒಂದು ನಿಮಯವಳಿಯನ್ನು ತಯಾರಿಸಿ

ಪ್ರಜಾಪ್ರತಿನಿದಿ ಸಭೆಯಲ್ಲಿ ದಿನಾಂಕ ೧೧.೧೦.೧೯೨೪ರಲ್ಲಿ ಮಂಡಿಸಿದರು. ಈ ತೋಟಿತಳವಾರರು ರೈತರಿಗೆ ನೆರವಾಗುವುದಿಲ್ಲವಾದ್ದರಿಂದ ಈ ಪದ್ಧತಿಗಳನ್ನು ತಪ್ಪಿಸಬೇಕು ಎಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ವಾದಿಸಿದರು. ಚಿತ್ರದುರ್ಗದ ಛಾಯಚಿತ್ರಗ್ರಾಹಕ ಪಂಚಮರ ದೊಡ್ಡಯ್ಯ ಪಂಚಮರ ಪ್ರತಿನಿಧಿಗಳಾದ ಮುರುಗೇಶನ್‌ಪಿಳ್ಳೆ ಆದಿದ್ರಾವಿಡ ಸಂಘದ ಅಸಿಸ್ಟೆಂಟ್ ವೂಲನ್ ಮಾಸ್ಟರ್ ಇವರುಗಳು ಮಾತನಾಡಿ 'ಮಿರಾಸ್' ಪದ್ಧತಿಯನ್ನು ತೆಗೆದುಹಾಕಿ ಈ ಜನರಿಗೆ ಸರ್ಕಾರ ಜಮೀನು ನೀಡಬೇಕೆಂದು ತಿಳಿಸಿದರು. ಅಯ್ಯರ್‌ರವರು ಈ ಜನರಿಗೆ ಸರ್ಕಾರದಿಂದ ಮಾಮೂಲಾಗಲಿ ಸಂಬಳದೋಪಾದಿ ಯಲ್ಲಾಗಲಿ ಏನೂ ಸಿಗುತ್ತಿಲ್ಲ. ಅಲ್ಲದೆ ಮಾಮೂಲನ್ನು ಕೆಲವು ಜಿಲ್ಲೆಗಳಲ್ಲಿ ಮಾತ್ರ ಕೊಡಲಾಗುತ್ತಿದೆ ಎಂದು ಹೇಳಿದರು. ಆದ್ದರಿಂದ ಈ ದಿನದಲಿತರಿಗೆ ಸಂಭಾವನೆ ಕೊಡದಿದ್ದರೆ ಹಸಿವಿನಿಂದ ಸಾಯುತ್ತಾರೆ. ಹಾಗಾಗಿ ರೈತರೇ ಮೇಲುತೆರಿಗೆ (ಸೆಸ್ಸ್) ನೀಡಿ ಇವರ ಸಂಭಾವನೆಗೆ ನೆರವಾಗಬೇಕು. ಇಲ್ಲವಾದರೆ ಸರ್ಕಾರವೇ ಈ ಕೆಲಸ ಮಾಡಬೇಕೆಂದು ಸಲಹೆ ಮಾಡಿದರು. ಮುಂದುವರೆದು.

**ಕಡ್ಡಾಯ ಶಿಕ್ಷಣ**

ಅಯ್ಯರ್‌ರವರು ೧೮.೧೦.೧೯೨೪ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಕಡ್ಡಾಯ ಶಿಕ್ಷಣದ ಬಗ್ಗೆ ಮಾತನಾಡಿದರು. ಕಡ್ಡಾಯ ಶಿಕ್ಷಣದ ವ್ಯವಸ್ಥೆಯನ್ನು ಭರತಖಂಡದಲ್ಲಿ ಜಾರಿಗೆ ತಂದ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನ ಎರಡನೆಯದು. ಮೊದಲನೆಯದು ಬರೋಡ ಸಂಸ್ಥಾನ. ಬರೋಡ ಸಂಸ್ಥಾನದಲ್ಲಿ ೧೯೦೫-೦೬ನೇ ಸಾಲಿನಲ್ಲಿ ಈ ಪದ್ಧತಿಯನ್ನು ಜಾರಿಗೆ ತಂದರೆ ಮೈಸೂರು ಸಂಸ್ಥಾನ ೧೯೦೯ರಲ್ಲಿ ಈ ಯೋಜನೆಯನ್ನು ಜಾರಿಗೆ ತಂದಿತು. ಈ ಕಾನೂನಿನಲ್ಲಿಯೆ ಮಹಾರಾಜರು ಪಂಚಮರಿಗೂ ಸಹ ಕಡ್ಡಾಯ ಶಿಕ್ಷಣದ ವ್ಯವಸ್ಥೆಯನ್ನು ಜಾರಿಗೆ ತಂದಿದ್ದರು. ಇದಕ್ಕಾಗಿ ಗ್ರಾಮದ ಶಾಲಾ ಸಮಿತಿಗಳ ರಚನೆ ನಡೆಯಿತು. ಈ ಸಮಿತಿಯು ಶಾಲೆಯ ಉಸ್ತುವಾರಿ ಹೊಣೆಯನ್ನು ಹೊಂದಿತ್ತು.[೫] ಈ ಕಡ್ಡಾಯ ಶಿಕ್ಷಣವನ್ನು ಇತ್ತೀಚೆಗೆ ಸರ್ಕಾರವು ಸಹ ಮುಂದುವರೆಸಿಕೊಂಡು ಬರುತ್ತಿರುವುದನ್ನು ಗಮನಿಸಬಹುದು. ಇದರ ಮುಖ್ಯ ಉದ್ದೇಶ ಪ್ರಾಥಮಿಕ ಶಿಕ್ಷಣದಿಂದ ಪಡೆದ ಅಕ್ಷರಜ್ಞಾನ ಮಾಸದೇ ಉಳಿದು ಫಲಕಾರಿಯಗಬೇಕಾದರೆ ೪ ರಿಂದ ೫ ವರ್ಷಗಳವರೆಗಾದರೂ ಆ ಶಿಕ್ಷಣ ಎಲ್ಲರಿಗೂ ಕಡ್ಡಾಯವಾಗಿ ದೊರೆಯಬೇಕು ಎಂದು ಪ್ರಾರಂಭದಲ್ಲಿ ಹೇಳಲಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಈ ಕಡ್ಡಾಯ ಶಿಕ್ಷಣವನ್ನು ೫ ರಿಂದ ೧೪ ವರ್ಷದ ಎಲ್ಲ ಮಕ್ಕಳಿಗೂ ದೊರೆಯುವಂತೆ ಮಾಡಿ ಎಲ್ಲರು ಅಕ್ಷರಸ್ಥರಾಗಬೇಕೆಂಬುದಾಗಿದೆ. ಇದರಿಂದಾಗಿ ರಾಷ್ಟ್ರದ ಹಿತ ಮತ್ತು ಭದ್ರತೆಗೆ ನೆರವಾಗುವಂತೆ ನೋಡಿಕೊಳ್ಳಲೆಂದೆ ಕಡ್ಡಾಯ ಶಿಕ್ಷಣ ಜಾರಿಗೆ ತರಲಾಗಿದೆ.[೬]

ದೇಶದ ಮತ್ತು ಈ ನಾಡಿನ ಹಿತದೃಷ್ಟಿಯಿಂದಾಗಿ ನಾಲ್ವಡಿಯವರು ತಮ್ಮ ದೂರದೃಷ್ಟಿಯಿಂದಾಗಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದಿದ್ದು ಸ್ಪಷ್ಟವಾಗಿ ತಿಳಿಯುತ್ತದೆ. ಇದರ ಬಗ್ಗೆ ಮಾತನಾಡಿದ ಅಯ್ಯರ್ ಕಡ್ಡಾಯ ಶಿಕ್ಷಣ ರಾತ್ರೋರಾತ್ರಿ ಸಾಧ್ಯವಾಗದ ಮಾತು. ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಕಡ್ಡಾಯ ಶಿಕ್ಷಣ ಜಾರಿಗೆ ತಂದಿದ್ದರೂ ಅದರ ಉದ್ದೇಶ ಇಡೇರಲಿಲ್ಲ. ಏಕೆಂದರೆ ಬೆಂಗಳೂರು ನಗರದಲ್ಲಿಯೇ ಸುಮಾರು ಮೂರ ಸಾವಿರ ಪಂಚಮರಿದ್ದಾರೆ. ಅವರಿಗೆಲ್ಲಾ ಒಂದೇ ಒಂದು ಶಾಲೆಯಿದ್ದು ಇಲ್ಲಿ ೨೦ ಮಕ್ಕಳಿಗೆ ಅವಕಾಶವಿದೆ. ಬೇರೆಯವರ ಶಾಲೆಗಳಲ್ಲಿ ಇವರಿಗೆ

ಪ್ರವೇಶವಿಲ್ಲ. ಸ್ಥಿತಿ ಹೀಗಿರುವಾಗ ಕಡ್ಡಾಯ ಶಿಕ್ಷಣದ ಧ್ಯೇಯವಾದರೂ ಏನು? ಎಂದು ವಾಸ್ತವದ ವಿಚಾರವನ್ನು ಮುಂದಿಟ್ಟು ಸರ್ಕಾರದ ಉದ್ದೇಶ ಸಫಲವಾಗಬೇಕಿದ್ದರೆ ಕೊನೆ ಪಕ್ಷ ೫ ಲಕ್ಷ ರೂಪಾಯಿ ಗಳನ್ನಾದರೂ ಸರ್ಕಾರ ನೀಡಬೇಕು ಎಂದು ಸಲಹೆ ನೀಡಿದರು. ಅಯ್ಯರ್‌ರವರ ಮಾತುಗಳಲ್ಲಿ ವ್ಯಕ್ತವಾಗುವ ಅಂಶವೆಂದರೆ ಈ ಮೂಲಕವಾದರೂ ಪಂಚಮರನ್ನು ಸಂಪೂರ್ಣ ಸಾಕ್ಷರನ್ನಾಗಿ ಮಾಡಿದರೆ ತಮ್ಮ ಹಕ್ಕುಬಾಧ್ಯತೆಗಳನ್ನು ಅರಿತುಕೊಂಡು ಸಮಾಜದಲ್ಲಿ ಒಬ್ಬ ಯಶಸ್ವಿ ಪೌರರಾಗಿಯೇ ನಾಗರಿಕರಾಗಿಯೋ ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಶಕ್ತರಾಗುವರು ಎಂಬುದಾಗಿತ್ತೇನು.

**ಅರಮನೆಯ ಪ್ರವೇಶ**

ಒಡೆಯರು ಮೊದಲ ಬಾರಿಗೆ ೧೯೨೫ರಲ್ಲಿ ಪಂಚಮ ಪ್ರತಿನಿಧಿಗಳಿಗೆ ಅರಮನೆಯಲ್ಲಿ ನಡೆಯುತ್ತಿದ್ದ ದರ್ಬಾರಗಳಿಗೆ ಪ್ರವೇಶ ನೀಡಿ ಸರ್ಕಾರದ ಆಜ್ಞೆಯನ್ನು ರಾಜಮುದ್ರೆಯೊಂದಿಗೆ ಹೊರಡಿಸಿದರು. ಇದರೊಂದಿಗೆ ಪಂಚಮರ ವಿಷಯದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರಿಗೆ ಎಂತಹ ಕಾಳಜಿ ಹಾಗೂ ಆ ಕಾಲದ ಸಮಾಜದ ಮನೋಭಾವ ಎಷ್ಟು ಪ್ರಗತಿಪರವಾಗಿದ್ದಿತು ಎಂಬುದು ಮೇಲಿನ ಘಟನೆಯು ತಿಳಿಸುತ್ತದೆ. ಅಂದರೆ ಪ್ರಪ್ರಥಮ ಬಾರಿಗೆ ಅರಮನೆಯನ್ನು ಪ್ರವೇಶಿಸಲು ಪಂಚಮರಿಗೆ ನೀಡಿದ ಅವಕಾಶ ನಿಜವಾಗಿಯೂ ಅಭೂತಪೂರ್ವವಾದ ಒಂದು ಸಾಮಾಜಿಕ ಬದಲಾವಣೆ ಎಂದು ಹೇಳಬಹುದು. ಪಂಚಮರು ಸಹ ಅರಮನೆಯನ್ನು ಪ್ರವೇಶಿಸಬಹುದೆಂಬುದಾಗಿ ಹೇಳಿ ಅದರಂತೆ ಅವಕಾಶ ಮಾಡಿಕೊಟ್ಟ ಭಾರತದ ಸಂಸ್ಥಾನಧೀಶರುಗಳಲ್ಲಿ ನಾಲ್ವಡಿಯವರೇ ಮೊಟ್ಟ ಮೊದಲನೆಯವರು ಎಂಬುದಾಗಿ ಬ್ರಿಟ್ಯಾನಿಕ್ ವಿಶ್ವಕೋಶದಲ್ಲಿರುವ ಈ ಹೊಗಳಿಕೆಯ ಮಾತುಗಳು ಎಷ್ಟು ಹೆಮ್ಮೆ ಪಡುವಂತಹವಾಗಿವೆ.[೬] ಸ್ವತಂತ್ರ ಭಾರತದಲ್ಲಿ ಪಂಚಮರ ಬದುಕಿನ ಉತ್ತಮೀಕರಣಕ್ಕಾಗಿ ಯೋಜನೆ ಕೈಗೊಳ್ಳಲಾಗಿರುವ ಕ್ರಮಗಳನ್ನೆಲ್ಲಾ ನಾಲ್ವಡಿಯವರು ತಮ್ಮ ಕಾಲದ ಸಮಾಜದಲ್ಲಿ ಆಗಲೇ ಮುಂಭಾವಿಸಲಾಗಿದ್ದಿರಲ್ಲದೆ ಅವುಗಳನ್ನು ಜಾರಿಗೆ ತರಲಾಗಿದ್ದಿತು ಎಂಬುದು ಅತ್ಯಂತ ಗಮನಾರ್ಹವಾದ ವಿಷಯ. ಈ ಕಾರ್ಯದ ಹಿಂದೆ ಅಯ್ಯರ್‌ರವರ ಕಾರ್ಯವೈಖರಿಯಿರುವುದು ಕಂಡುಬರುತ್ತದೆ. ಏಕೆಂದರೆ ಅವರು ಯುವರಾಜ ಶ್ರೀ ನರಸಿಂಹರಾಜ ಒಡೆಯರವರಲ್ಲಿ ಭಿನ್ನವಿಸಿ ಮಂಡ್ಯದ ಆದಿ ಕರ್ನಾಟಕರ ಚಲುವಯ್ಯನವರನ್ನು ಮತ್ತು ಮುರುಗೇಶನ್ ಪಿಳ್ಳೆಯವರನ್ನು ಪ್ರಜಾಪ್ರತಿನಿಧಿ ಸಭೆಗೆ ನಾಮಕರಣ ಮಾಡಿಸಿದರು. ಈ ಹಿನ್ನೆಲೆಯಲ್ಲಿ ಪಂಚಮರು ಅರಮನೆಯ ಪ್ರವೇಶವನ್ನು ಪಡೆದು ಕೊಳ್ಳಲು ಸಾಧ್ಯವಾಗಿರಬಹುದು.

**ಭಿಕ್ಷುಕರ ನಿರ್ಮೂಲನೆ**

ಅಯ್ಯರ್‌ರವರು ದೂರದೃಷ್ಟಿಯುಳ್ಳವರಾಗಿದ್ದರೆಂಬುದಕ್ಕೆ ೧೯೨೫ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಭಿಕ್ಷುಕರ ನಿರ್ಮೂಲನೆಯ ಬಗ್ಗೆ ಮಾತನಾಡುತ್ತಾ ಭಿಕ್ಷೋಚಾಟನೆ ಕೇವಲ ಕಾನೂನಿಂದಲೇ ಮಾತ್ರ ಸಾಧ್ಯವಿಲ್ಲ. ಆದ್ದರಿಂದ ದುಡಿಯಲು ಯೋಗ್ಯರಲ್ಲದ ಭಿಕ್ಷುಕರಿಗೆ ಸಂತಾನ ನಿಂಯತ್ರಣ ಶಸ್ತ್ರಚಿಕಿತ್ಸೆ ಮಾಡಿಸಬೇಕು ಮತ್ತು ಆ ಕುಟುಂಬ ನಿಯಂತ್ರಣವನ್ನು ಸರ್ಕಾರವೇ ಮಾಡಬೇಕೆಂದು ಅಯ್ಯರ್‌ರವರು ಸಲಹೆ ನೀಡಿದರು. ಅವರ ಮುಂದಾಲೋಚನೆಯ ಕ್ರಮದಲ್ಲಿ ವ್ಯಕ್ತವಾಗುವ ಅಂಶವೆಂದರೆ ಭಿಕ್ಷಾಟನೆಯು ವ್ಯಕ್ತಿಯ ವ್ಯಕ್ತಿತ್ವವನ್ನು ಕುಂಠಿತಗೊಳಿಸುವುದಲ್ಲದೆ ರಾಷ್ಟ್ರದ ಮತ್ತು ನಾಡಿನ ಗೌರವವನ್ನು

ಆರ್ಥಿಕ ಅಭದ್ರತೆಗೆ ಕಾರಣವಾಗುತ್ತದೆ ಎಂಬುದನ್ನು ಸ್ವತಂತ್ರ ಪೂರ್ವದಲ್ಲಿಯೇ ಆಲೋಚಿಸಿರುವುದು ನಿಜವಾಗಿಯು ಪ್ರಶಂಸನೀಯವಾದುದು. ಈ ಕಾರಣದಿಂದಲೇ ಕರ್ನಾಟಕ ರಾಜ್ಯವು ೧೯೪೪ರ ಮತ್ತು ೧೯೭೫ರಲ್ಲಿ ಭಿಕ್ಷುಕರ ಪ್ರತಿಬಂಧಕ ಕಾಯಿದೆಯನ್ನು ಜಾರಿಗೆ ತಂದಿದೆ. ಭಾರತದ ಪ್ರಕ್ರಿಯೆ ಸಂಹಿತೆಯ ೧೩೩ನೇ ವಿಧಿಯು ಭಿಕ್ಷುಕರಿಗೆ ಸಂಬಂಧಿಸಿದ್ದು ಈ ಕಾನೂನು ಹಾಗೂ ಕಾಯಿದೆಗಳು ಸಾರ್ವಜನಿಕ ಸ್ಥಳಗಳಲ್ಲಿ ಭಿಕ್ಷಾಟನೆಯನ್ನು ನಿಷೇಧಿಸಿವೆ.[೮]

### ಹಳ್ಳಿಗಳ ಉದ್ಧಾರ

ಚರ್ಚೆಯು ಮುಂದುವರೆದು ಮುರುಗೇಶನ್‌ಪಿಳ್ಳೆಯವರು ಹಳ್ಳಿಗಳ ಜನರ ಜೀವನ ಚಿಂತಾಜನಕವಾಗಿದೆ ಎಂದು ಹೇಳಿದಾಗ ಅಯ್ಯರ್‌ರವರು ಹಳ್ಳಿಗಳಿಗಿಂತಲೂ ಊರ ಹೊರಗೆ ಓಣಿಯಲ್ಲಿ ವಾಸಿಸುವ ಆದಿಕರ್ನಾಟಕ ಜನರ ಜೀವನ ಚಿಂತಾಜನಕವಾಗಿದೆ. ಆದ್ದರಿಂದ ಸರ್ಕಾರ ಅವರ ಬದುಕನ್ನು ಹಸನುಗೊಳಿಸಲು ಮೊದಲು ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ನಂತರ ಉಳಿದ ಗ್ರಾಮಸ್ತರ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಬೇಕು ಎಂದು ಹೇಳಿದರು. ಈ ವಿಚಾರ ವಾಗಿಯೇ ಮುಂದೆ ಅಂಬೇಡ್ಕರ್ ಮತ್ತು ಗಾಂಧೀಜಿಯವರ ನಡುವೆ ತಾತ್ವಿಕ ಭಿನ್ನಾಭಿಪ್ರಾಯ ವೇರ್ಪಡುವುದನ್ನು ಗಮನಿಸಬಹುದು. ಅಂದರೆ ಗಾಂಧೀಯು ಗ್ರಾಮದ್ಯೋಗಕ್ಕೆ ಹೆಚ್ಚಿನ ಒತ್ತನ್ನು ನೀಡಿದರೆ ಅಂಬೇಡ್ಕರ್ ಗ್ರಾಮದಿಂದ ಹೊರಗೆ ವಾಸಿಸುವವರಿಗೆ ಅಂದರೆ ಪಂಚಮರಿಗೆ ಹೆಚ್ಚು ಒತ್ತನ್ನು ನೀಡಿದರು. ಏಕೆಂದರೆ ಗ್ರಾಮದಲ್ಲಿ ವಾಸಮಾಡುವ ಸ್ಪೃಶ್ಯರು ಆರ್ಥಿಕವಾಗಿ ಪ್ರಬಲವಾದ ಮತ್ತು ಆಳುವ ಸಮುದಾಯಗಳಾಗಿದ್ದು ಎಲ್ಲಾ ಸೌಲಭ್ಯಗಳನ್ನು ಪಡೆದುಕೊಂಡಿರುತ್ತಾರೆ. ಆದರೆ ಅಸ್ಪೃಶ್ಯರು ಇನ್ನೊಬ್ಬನ ಅಧೀನದಲ್ಲಿ ಜೀವನ ನಡೆಸಬೇಕಾದ ಅನಿವಾರ್ಯತೆಯಿದ್ದು ಕನಿಷವಿ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿ ಜೀವನ ನಡೆಸುತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ. ಈ ಹಿನ್ನೆಲೆಯಿಂದಲೇ ಬಾಬಾಸಾಹೇಬ್ ಅಂಬೇಡ್ಕರ್‌ರವರು "ಗ್ರಾಮ ಒಂದು ಸಂಕುಚಿತ ಪ್ರಮೇಯತೆಯ ತವರು ಮೌಢ್ಯತೆ ಸಣ್ಣತನ ಮತ್ತು ಜಾತ್ಯಾಂಧತೆಯಿಂದ ಕೂಡಿದ ಗೂಡು" ಎಂದು ಕರೆದರು. ಈ ಮಾತು ಇಂದಿಗೂ ನೂರರಷ್ಟು ಸತ್ಯವೆನ್ನಿಸುತ್ತದೆ. ಒಟ್ಟಾರೆ ಅಯ್ಯರ್‌ರವರು ಇಂತಹ ಸತ್ಯಕ್ಕೆ ಹತ್ತಿರವಾದ ಈ ಮಾತನು ಗಾಂಧೀಜಿ ಮತ್ತು ಅಂಬೇಡ್ಕರ್ ರವರಿಗಿಂತ ಮೊದಲೇ ಬಳಸಿರುವುದು ನಿಜವಾಗಿಯೂ ಒಂದು ಅಭೂತಪೂರ್ವವಾದ ಚಿಂತನೆ ಎನ್ನಬಹುದು.

### ಪಂಚಮರ ಸಮ್ಮೇಳನ

೧೯೨೫ರಲ್ಲಿ ಅಯ್ಯರ್‌ರವರ ನೇತೃತ್ವದಲ್ಲಿ ಪಂಚಮರ ಸಮ್ಮೇಳನವು ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ ನಡೆಯಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ತುಮಕೂರಿನ ಜಿಲ್ಲಾಧಿಕಾರಿಗಳಾದ ಕೆ.ವಿ. ಅನಂತರಾಮನ್‌ರವರು ವಹಿಸಿದರೆ ಈ ಸಭೆಯ ಕಾರ್ಯಕರ್ತರಾದ ನರಸಿಂಹಶಾಸ್ತ್ರಿಗು ಭಾಗವಹಿಸಿದ್ದರು. ಈ ಸಮ್ಮೇಳನದಲ್ಲಿ ಭಾಗವಹಿಸಿದ್ದ ಎಲ್ಲಾ ಸದಸ್ಯರು ಮತ್ತು ಕಾರ್ಯಕರ್ತರು ಸರ್ವಾನುಮತದಿಂದ ಇನ್ನು ಮುಂದೆ ಪಂಚಮರನ್ನು ಒಂದು ಜಾತಿಯ ಹೆಸರಿನಿಂದ ಗುರುತಿಸುವುದು ಸರಿಯಲ್ಲ ನಮ್ಮನ್ನು 'ಆದಿಕರ್ನಾಟಕ'ರು ಎಂದು ಕರೆಯಬೇಕೆಂದು ತೀರ್ಮಾನಿಸಿ ನಾಲ್ವಡಿಯವರ

ಸರ್ಕಾರಕ್ಕೆ ಒಂದು ಮನವಿಯನ್ನು ಸಲ್ಲಿಸಲಾಯಿತು. ಈ ವಿಷಯಕ್ಕೆ ಸ್ಪಂದಿಸಿದ ನಾಲ್ವಡಿಯವರ ಸರ್ಕಾರ ಅದೇ ವರ್ಷ ಅಂದರೆ ೧೯೨೨ರ ಅಕ್ಟೋಬರ್ ೧೩ರಂದು ಸರ್ಕಾರಿ ಆಜ್ಞೆಯನ್ನು ಹೊರಡಿಸಿ ಇನ್ನು ಮುಂದೆ ಪಂಚಮರನ್ನು 'ಆದಿಕರ್ನಾಟಕ'ರು ಎಂದು ಕರೆಯಬೇಕೆಂದು ಸೂಚಿಸಿತು. ಆದಿ ಕರ್ನಾಟಕ ಎಂಬ ಪದವನ್ನು ಏಕೆ ಬಳಸಲಾಯಿತು ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಆದಿಕರ್ನಾಟಕ ಅಂದರೆ 'ಕನ್ನಡದ ದಲಿತರು' ಅನ್ನುವ ಪರಿಭಾಷೆಯಲ್ಲಿ ಬಂದದ್ದು. ಈ 'ನೆಲದ ಕನ್ನಡಿಗರು'. ಒಟ್ಟಾರೆ ಇವರು ಬೇರೆ ಕಡೆಯಿಂದ ವಲಸೆ ಬಂದವರಾಗಿದೇ ಮೂಲತಃ ಈ ನಾಡಿನ ಮೂಲನಿವಾಸಿಗಳು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದರೆ ಅದು ಒಂದು ಜಾತಿಯ ಪರಿಭಾಷೆಯಾಗಿ ಬಳಕೆಯಾಗುತ್ತಿರುವುದು ಒಂದು ದೊಡ್ಡ ದುರಂತ.

**ಕೊತ್ತನಹಳ್ಳಿಯ ಹೋರಾಟ**

ಈ ಹಿಂದಿನ ಅಧ್ಯಾಯದಲ್ಲಿ ಈಗಾಗಲೇ ಪ್ರಸ್ತಾಪಿಸಿದಂತೆ ಕುನ್ನಿರುಕಟ್ಟೆಯ ಘಟನೆಯ ಮಾದರಿಯಂತೆಯೇ ಮದ್ದೂರು ತಾಲ್ಲೂಕಿನ ಕೊಪ್ಪ ಹೋಬಳಿಯ ಕೊತ್ತನಹಳ್ಳಿಯಲ್ಲೂ ಹೋರಾಟ ನಡೆಯಿತು. ಈ ಊರಿನ ಎಲ್ಲಾ ಅಸ್ಪೃಶ್ಯ ಜನಾಂಗದವರು ಒಂದುಗೂಡಿ ಕೆರೆಯ ನೀರನ್ನು ಮುಟ್ಟಿ ಕುಡಿಯಲು ಮುಂದಾದರು. ಕಾರಣ ಈಗಾಗಲೇ ಮೈಸೂರು ಸಂಸ್ಥಾನವು ಹೊರಡಿಸಿದ್ದ ಸರ್ಕಾರಿ ಆಜ್ಞೆ. ಇದರಿಂದ ಪ್ರೇರೇಪಿತರಾದ ಈ ಊರಿನ ಜನರು ಪ್ರತಿ ಮನೆಯಿಂದ ಎರಡು ಮೂರು ಬಿಂದಿಗೆ ಗಡಿಗೆಗಳನ್ನು ತೆಗೆದುಕೊಂಡು ಸುಮಾರು ೪೦೦ ಜನರು ಜೈಕಾರ ಹಾಕಿಕೊಂಡು ನೀರು ತರಲು ಹೋದರು. ಈ ವಿಷಯ ಒಕ್ಕಲಿಗರ ಕೇರಿಗೆ ಮಿಂಚಿನಂತೆ ಹರಡಿದರ ಪರಿಣಾಮ ಎರಡು ಕೋಮಿನ ಜನರ ನಡುವೆ ಹೊಡೆದಾಟ ನಡೆದಿದ್ದರಿಂದ ಅನೇಕ ಗಾಯಗಳಾದವು. ಏಟು ತಿಂದ ಹೆಂಗಸರು ಗೌಡರನ್ನು ಶಪಿಸಿದರು. ಅಷ್ಟರಲ್ಲಿ ಪೋಲೀಸರು ಬಂದು ಗಲಾಟೆಯನ್ನು ಶಮನ ಗೊಳಿಸಿದರು. ಒಕ್ಕಲಿಗರ ದೌರ್ಜನ್ಯಕ್ಕೊಳಗಾಗಿದ್ದ ಈ ಊರಿನ ಅಸ್ಪೃಶ್ಯರು ಬ್ರಿಟಿಷ್ ಅಧಿಕಾರಿಯಾಗಿದ್ದ ರೆವರೆಂಡ್ ಸಾಡೆಯವರನ್ನು ಭೇಟಿ ಮಾಡಿ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದುವ ಅಭಿಲಾಷೆಯನ್ನು ವ್ಯಕ್ತಪಡಿಸಿದರು(ಇಲ್ಲಿ ತಮ್ಮ ಸಾಮಾಜಿಕ ಭದ್ರತೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಮತಾಂತರಗೊಳ್ಳಲು ಮುಂದಾಗಿರ ಬಹುದು). ಈ ವಿಷಯ ಪತ್ರಿಕೆಯಲ್ಲಿ ಪ್ರಕಟಗೊಂಡು ವಿಷಯ ತಿಳಿದ ಅಯ್ಯರ್ ಮುರುಗೇಶನ್‌ಪಿಳ್ಳೆ, ಎಂ.ವಿ. ಥಕ್ಕರ್ ಬಾಬಾರೊಡನೆ ಮೈಸೂರಿಗೆ ಬಂದು ಅಲ್ಲಿನ ಜಿಲ್ಲಾಧಿಕಾರಿಗಳೊಂದಿಗೆ ಕೊತ್ತನಹಳ್ಳಿಗೆ ಬಂದರು. ಎರಡು ಕೋಮಿನ ಜನರು ಲಕ್ಷ್ಮೀದೇವಿಯ ಗುಡಿಯಲ್ಲಿ ಸೇರಿ ಪಂಚಾಯಿತಿ ನಡೆಸಿ ಅಸ್ಪೃಶ್ಯರು ಕೆರೆಯ ನೀರು ತೆಗೆದುಕೊಳ್ಳುವಂತೆ ತೀರ್ಮಾನಿಸಿ "ನಿಮ್ಮಗೆಲ್ಲಾ ಸ್ವಾತಂತ್ರ್ಯ ಬರುತ್ತದೆ ಆಗ ನೀವು ಓಟು ಹಾಕುವ ಹಕ್ಕನ್ನು ಪಡೆಯುತ್ತಿರಿ ನಿಮ್ಮಲ್ಲಿ ಅನೇಕರು ಶಾಸಕರು ಮಂತ್ರಿಗಳು ಆಗಬಹುದು. ಮತಾಂತರಗೊಂಡರೆ ಈ ಅವಕಾಶ ತಪ್ಪುತ್ತದೆ" ಎಂದು ಹೇಳಿದರು. ಈ ಸಂದರ್ಭದಲ್ಲಿ ಅಯ್ಯರ್ ಒಕ್ಕಲಿಗರ ಮನಪರಿವರ್ತನೆ ಮಾಡುವಲ್ಲಿ ಯಶಸ್ವಿಯಾದರು.

ಈ ಊರಿನ ಜನರು ಏಕೆ ಮತಾಂತರ ಹೊಂದಲು ಮುಂದಾಗಿರಬಹುದೆಂದರೆ ಕ್ರೈಸ್ತಧರ್ಮದಲ್ಲಿ ಯಾವುದೇ ಸಮಾಜಿಕ ಸಂಕೋಲೆಗಳಿರಲಿಲ್ಲ. ಮತ್ತು ಅಸ್ಪೃಶ್ಯರಿಗೆ ಆರೋಗ್ಯದ ಮಹತ್ವದ ಬಗ್ಗೆ

ತಿಳುವಳಿಕೆ ನೀಡುವುದು ಶಾಲೆ ಮತ್ತು ದೇವಾಲಯಗಳಿಗೆ ಮುಕ್ತ ಪ್ರವೇಶಾವಕಾಶ ನೀಡಿದದು ಮತ್ತು ಇವರ ವ್ಯಕ್ತಿತ್ವ ರೂಪಿಸಿಕೊಡುವುದಕ್ಕೆ ಯಾವುದೇ ತೊಡರುಗಳಿಲ್ಲದಿದ್ದರಿಂದ ಮೈಸೂರು ಸಂಸ್ಥಾನದಲ್ಲಿ ಅಂದಿನ ದಿನಗಳಲ್ಲಿ ಅಸ್ಪೃಶ್ಯರು ಮತಾಂತರ ಹೊಂದಲು ಮುಂದಾದರು ಎನ್ನಬಹುದು. ಆದರೆ ಅನೇಕ ಮಂದಿ ದಲಿತ ಹಿಂದೂಗಳು ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದಿದ್ದ ಅಸ್ಪೃಶ್ಯರನ್ನು ಮತ್ತೆ ಹಿಂದೂ ಧರ್ಮಕ್ಕೆ ಬರುವಾಗ ಹಾಗೆ ಮಾಡಿ 'ಶುದ್ಧಿ' ಕಾರ್ಯವನ್ನು ಕೈಗೊಂಡರು. ಅಂತಹವರುಗಳಲ್ಲಿ ತಗಡೂರು ರಾಮಚಂದ್ರರಾಯರು ಮತ್ತು ಗೋವಿಂದಾಚಾರ್ಯ ಸ್ವಾಮಿಗಳು ಪ್ರಮುಖರು.[೯]

ಹಿಗಿದ್ದರೂ ಸಹ ಕೊತ್ತನಹಳ್ಳಿಯಂತಹ ಅನೇಕ ಘಟನೆಗಲು ಇಂದಿಗೂ ನಡೆಯುತ್ತಿದ್ದು ಊರಿನಿಂದ ಬಹಿಷ್ಕಾರ ಹಲ್ಲೆ ನಡೆಸುವದು ಕಬ್ಬಿಣದ ಸರಪಳಿ ಬಿಗಿದು ದುಡಿಸಿಕೊಳ್ಳುವಂತಹ ದುಷ್ಕೃತ್ಯಗಳು ನಡೆಯುತ್ತಿದ್ದು ಅಸ್ಪೃಶ್ಯರು ಸಾಮೂಹಿಕವಾಗಿ ಮತಾಂತರ ಹೊಂದುವ ನಿರ್ಧಾರಕ್ಕೆ ಬರುತ್ತಿದ್ದಾರೆ. ಹೀಗಾಗಿ ಈ ನಿರ್ಧಾರದಿಂದ ಭಾರತದ ಹಿಂದೂ ಸಮಾಜಕ್ಕೆ ಗಂಭೀರ ಪರಿಣಾಮ ಬೀರಬಹುದು.

### ಪ್ರಿವೆನ್ಷಿಯಲ್ ಕೊ ಆಪರೇಟಿವ್ ಸೊಸೈಟಿ

ಅಯ್ಯರ್‌ರವರ ನೇತೃತ್ವದಲ್ಲಿ ದಿನಾಂಕ ೧೨.೧೦.೧೯೨೩ರಲ್ಲಿ ಮೈಸೂರು ಪ್ರಿವೆನ್ಷಿಯಲ್ ಕೊ ಆಪರೇಟಿವ್ ಸೊಸೈಟಿ ಕಾರ್ಯಕಲಾಪಗಳು ನಡೆದವು. ಈ ಕಾರ್ಯಕ್ರಮದಲ್ಲಿ "ಡಿಪ್ರಸ್ಡ್‌ಕ್ಲಾಸ್‌ನ ಸಂಘ ಸಂಸ್ಥೆಗಳು ವಿಶೇಷ ಸೌಲಭ್ಯಗಳು ಮತ್ತು ಅಭಿವೃದ್ಧಿಯ ಬಗ್ಗೆ ಗಮನ" ಎಂಬ ವಿಷಯ ಕುರಿತು ಚರ್ಚೆ ನಡೆಯಿತು. ಈ ಚರ್ಚೆಯಲ್ಲಿ ವಿ.ವಿ. ರಾಮನಾಥನ್ ಮೈಸೂರು ಜಿಲ್ಲಾಧಿಕಾರಿಗಳು ಭಾಗವಹಿಸಿ ಮಾತನಾಡುತ್ತಾ ಸರ್ಕಾರ ಅಸ್ಪೃಶ್ಯರಿಗೆ ತೆಕ್ಕಾವಿ ಜಮೀನು ನೀಡಿದೆ. ಆದರೆ ಅವರಲ್ಲಿ ಹಣದ ಕೊರತೆಯಿಂದಾಗಿ ಕೃಷಿ ಮಾಡಲು ಸಾಧ್ಯವಾಗುತ್ತಿಲ್ಲ ಹಾಗಾಗಿ ಧನಸಹಾಯ ಮಾಡಲು ಸಂಘಸಂಸ್ಥೆಗಳು ಮುಂದೆ ಬರಬೇಕು ಎಂದು ತಿಳಿಸಿದರು. ಈ ಕಾರ್ಯಕ್ರಮದ ಅಧ್ಯಕ್ಷರಾಗಿದ್ದ ದಿವಾನ್ ಸರ್. ಮಿರ್ಜಾ ಇಸ್ಮಾಯಿಲ್‌ರವರು ಮಾತನಾಡಿ "ಅಸ್ಪೃಶ್ಯ ಜನಾಂಗ ಉತ್ತಮ ಸ್ಥಿತಿಗೆ ಬರಬೇಕಾದರೆ ಅಗತ್ಯವಾಗಿ ಆಗಬೇಕಾದ ಎಲ್ಲಾ ಕಾರ್ಯಗಳನ್ನು ಸಂಘಸಂಸ್ಥೆಗಳು ಹಮ್ಮಿಕೊಳ್ಳಬೇಕು. ಇದರಿಂದ ಸಮಾಜದ ಅಥವಾ ನಾಡಿನ ಉದ್ಧಾರಕ್ಕೆ ಸಹಾಯಕವಾಗುತ್ತದೆ. ಆದ್ದರಿಂದ ಅಸ್ಪೃಶ್ಯರ ಆರ್ಥಿಕ ವ್ಯವಸ್ಥೆ ಉತ್ತಮಗೊಂಡರೆ ಇಡೀ ಭಾರತದ ಆರ್ಥಿಕ ಸ್ಥಿತಿ ಭದ್ರವಾಗುತ್ತದೆ ಎಂದು ಹೇಳಿದರು".[೧೦] ಇದರಿಂದ ಪ್ರಭಾವಿತರಾದ ಅನೇಕ ಮಂದಿ ಈ ಜನಾಂಗಕ್ಕೆ ಉದಾರವಾಗಿ ದಾನ ಮಾಡಿದರು. ಅಂದರೆ ವ್ಯವಸಾಯಕ್ಕೆ ಬೇಕಾದ ಸಲಕರಣೆಗಳು ಮತ್ತು ಹಸುಗಳನ್ನು ಕಡಿಮೆ ಬೆಲೆಗೂ ವ್ಯವಸಾಯ ವಿಭಾಗದ ಅಧಿಕಾರಿಗಳಾದ ಯಜ್ಞನಾರಾಯಣ್‌ರವರು ಅಸ್ಪೃಶ್ಯರಿಗೆ ಗೊಬ್ಬರವನ್ನು ಕೈಗಾರಿಕಾ ವಿಭಾಗದ ಜಾಹಿರುದ್ಧೀನ್ ಮೆಕ್ಕಿಯವರು ರಾಟೆಗಳನ್ನು ನೀಡಿದರು. ಹಾಗೂ ರಾಜ್ಯದಲ್ಲಿ ತಯಾರು ಮಾಡಲಾದ ಚಪ್ಪಲಿ ಮತ್ತು ಶೂಗಳನ್ನು ಪೋಲಿಸರು, ಅಬಕಾರಿ ಅಧಿಕಾರಿಗಳು ಮತ್ತು ಅರಣ್ಯವಿಭಾಗದವರು ಕೊಂಡಕೊಳ್ಳಬೇಕೆಂದು ತೀರ್ಮಾನಿಸಲಾಯಿತು. ಹಾಗೂ 'ಲ್ಯಾನ್‌ಟ್ರನ್ ಲೆಕ್ಚರ್ಸ್'ಗೆ ಬೇಕಾದ ಸಲಕರಣೆಗಳನ್ನು ಯುವರಾಜರು ನೀಡಿದರು. ಅಯ್ಯರ್‌ರವರು ಕಾರ್ಯಕ್ರಮವನ್ನು ಆಯೋಜಿಸಿರುವ ಹಿನ್ನೆಲೆಯನ್ನು ಗಮನಿಸಿದರೆ ಪಂಚಮರಲ್ಲಿ ಸ್ವಾಭಿಮಾನದ ಬದುಕನ್ನು ಗಟ್ಟಿಸಿ

ಗೊಳಿಸುವ ಸಲುವಾಗಿ ಮತ್ತು ಇನ್ನೊಬ್ಬರ ಅಧೀನದಲ್ಲಿ ಜೀವನ ನಡೆಸುವ ಬದಲು ಸ್ವತಂತ್ರ ಜೀವನ ನಡೆಸಿ ಸ್ವಾವಲಂಬಿಗಳಾಗಲಿ ಎಂಬ ಕಾರಣದಿಂದ ಆಯೋಜಿಸಿರಬಹುದು.

ಮೈಸೂರು ಗೆಜೆಟಿಯರ್‌ನ ಪ್ರಕಾರ ೧೯೩೦ರಲ್ಲಿ ಮೈಸೂರು ಸಂಸ್ಥಾನದ ಒಟ್ಟು ಜನ ಸಂಖ್ಯೆಯಲ್ಲಿ ೧,೩೮,೪೯೭ ರಷ್ಟು ಪಂಚಮ ಜನರಿದ್ದರು.[೧೧] ಇವರುಗಳಲ್ಲಿ ೮,೪೧೮ ಜನ ಗಂಡಸರು ಶಿಕ್ಷಣ ಪಡೆದಿದ್ದರೆ ಕೇವಲ ೬೮೩ ಜನ ಮಹಿಳೆಯ ಅಕ್ಷರ ಜ್ಞಾನಬಲ್ಲವರಾಗಿದ್ದರು.[೧೨] ಆದ್ದರಿಂದ ೧೯೩೦ ಆಕ್ಟೋಬರ್ ೧೫ ರಂದು ಪಂಚಮ ಜನಾಂಗಕ್ಕೆ ಅನುಗುಣವಾಗಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಬೇಕೆಂಬ ವಿಷಯವಾಗಿ ಸಲಹೆ ನೀಡಲು ಒಂದು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ನಾಯಕರಾದ ಅಯ್ಯರ್‌ರವರು ಪಂಚಮರ ಅಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ನಾಲ್ವಡಿ ಅವರ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದರು. ಈ ಮನವಿ ಪತ್ರದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರ ಸಂಖ್ಯೆಯನ್ನು ೬ ರಿಂದ ೧೦ಕ್ಕೆರಿಸಲು ಸಲಹೆ ನೀಡಿದರಲ್ಲದೆ ಪಂಚಮರ ಅಭಿವೃದ್ಧಿ ಸಂಸ್ಥೆಗೆ ಒಬ್ಬ ನಿಷ್ಠಾವಂತ ಅಧ್ಯಕ್ಷರನ್ನು ನೇಮಿಸಬೇಕೆಂದು ಮತ್ತು ಈ ಜನಾಂಗದ ಅಭಿವೃದ್ಧಿ ಕಾರ್ಯದಲ್ಲಿ ಸೇವಾಮನೋಭಾವವುಳ್ಳ ಕೆಲವು ಸ್ತ್ರೀಯರನ್ನು ನೇಮಿಸಬೇಕೆಂದು ಸಲಹೆ ನೀಡಿದರು. ಇದನ್ನು ಒಪ್ಪಿಕೊಂಡ ಮಹಾರಾಜರು ಅಯ್ಯರ್‌ರವರು ನೀಡಿದ ಸಲಹೆಯಂತೆ ಪ್ರಜಾಪ್ರತಿನಿಧಿಸಭೆಯ ಪಂಚಮರ ಸದಸ್ಯರ ಸಂಖ್ಯೆಯನ್ನು ೬ ರಿಂದ ೧೦ಕ್ಕೆ ಏರಿಸಿದರು. ಹಾಗೂ ಜನಾಂಗದ ಅಭಿವೃದ್ಧಿಗೆ ಸಂಸ್ಥೆಯೊಂದನ್ನು ಸ್ಥಾಪಿಸಿ ಅದಕ್ಕೆ ಪ್ರಥಮ ಹಂತದಲ್ಲಿ ೫ ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿ ೫ ವರ್ಷಗಳಲ್ಲಿ ವರ್ಷಕ್ಕೆ ೨ ಲಕ್ಷ ರೂ.ಗಳಂತೆ ಹೆಚ್ಚಿಸಿಕೊಂಡು ಹೋಗಬೇಕೆಂದು ಅಯ್ಯರ್‌ರವರು ತಿಳಿಸಿದರು. ಮುಂದುವರೆದು ಈ ಸಂಸ್ಥೆಗೆ ಬೇಕಾದ ಅಧಿಕಾರವನ್ನು ನೀಡಬೇಕೆಂದು ಸಲಹೆ ನೀಡಿದರು. ಈ ಎಲ್ಲಾ ವಿಚಾರಗಳನ್ನು ಬಿ. ಗೋಪಾಲಚಾರ್‌ರವರು ಅನುಮೋದಿಸಿದರೆ ಎಲ್ಲರ ಗಮನ ಸೆಳೆವ ವಿಚಾರಗಳನ್ನು ಮಂಡಿಸಿದ್ದಾಕ್ಕಾಗಿ ರಾವ್‌ಸಾಹೆಬ್ ರಾಮಸ್ವಾಮಿಯವರು ಅಯ್ಯರ್‌ರವನ್ನು ವಂದಿಸಿದರು. ಇವರ ಸಲಹೆಯಂತೆ ಮಹಾರಾಜರು ಕೆಲವು ಕಾರ್ಯಗಳನ್ನು ತಮ್ಮ ಸಂಸ್ಥಾನದಲ್ಲಿ ಯಶಸ್ವಿಯಾಗಿ ಜಾರಿಗೆ ತಂದರು. ಇದು ಅಯ್ಯರ್‌ರವರು ನಾಲ್ವಡಿಯವರ ಸರ್ಕಾರದಲ್ಲಿ ಕೈಗೊಂಡ ಕಾರ್ಯಕ್ರಮಗಳು.

**ಆರ್ಥಿಕ ಸಮ್ಮೇಳನ**

ಬೆಂಗಳೂರಿನ ಪಬ್ಲಿಕ್ ಆಫಿಸ್‌ನ ಸಭಾಂಗಣದಲ್ಲಿ ಮೈಸೂರು ಸಂಸ್ಥಾನದ ಆರ್ಥಿಕ ಸಮ್ಮೇಳನವನ್ನು ೧೯೩೦ ಆಕ್ಟೋಬರ್ ೨೩ ಮತ್ತು ೨೪ರಂದು ಜರುಗಿತು. ಈ ಸಮ್ಮೇಳನದಲ್ಲಿ ಅಯ್ಯರ್‌ರವರು ಸಹ ಪಾಲ್ಗೊಂಡಿದ್ದರು. ಈ ಸಮ್ಮೇಳನದಲ್ಲಿ ಮಂಡಲಿಯ ಸದಸ್ಯರು ಪಂಚಮರ ಕಾಲೇಜು ವಿದ್ಯಾರ್ಥಿಗಳಿಗೆ ನೀಡುವ ವಿದ್ಯಾರ್ಥಿ ವೇತನವನ್ನು ೧೫ ರೂಪಾಯಿಂದ ೧೨ ರೂಪಾಯಿಗೆ ಪ್ರೌಢಶಾಲಾ ವಿದ್ಯಾರ್ಥಿಗಳ ವಿದ್ಯಾರ್ಥಿ ವೇತನವನ್ನು ೧೦ ರೂ.ಗಳಿಂದ ೮ ರೂಪಾಯಿಗಳಿಗೆ ಇಳಿಸಿದರೆ ಇನ್ನೂ ಅನೇಕ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ನೀಡಬಹುದೆಂದು ಸಲಹೆ ನೀಡಿದರು. ಆದರೆ ಅಯ್ಯರ್‌ರವರು ವಿರೋಧಿಸಿ ಹಣವನ್ನು ಕಡಿಮೆ ಮಾಡಿದರೆ ವಿದ್ಯಾರ್ಥಿಗಳಲ್ಲಿ ಅತೃಪ್ತಿಯುಂಟಾಗಿ ವಿದ್ಯಾಭ್ಯಾಸವು ಕುಂಟಿತಗೊಳ್ಳುತ್ತದೆ. ಹಾಗೂ ಈ ಜನಾಂಗ ತಮ್ಮದೆಯಾದ ಹಣ ಸಂಗ್ರಹಿಸುವಂತಹ

ಯಾವುದೇ ಸಂಘ ಸಂಸ್ಥೆಗಳ ಸಂಘಟನೆಯಾಗಿಲ್ಲ ಹಾಗೂ ನೋಟ್‌ಬುಕ್‌ಗಳ ಬೆಲೆ ಹೆಚ್ಚಳವಾಗಿರುವಾಗ ವಿದ್ಯಾರ್ಥಿವೇತನವನ್ನು ಹೆಚ್ಚಿಸಬೇಕೇ ವಿನಃ ಕಡಿಮೆ ಮಾಡಬಾರದು ಎಂದು ವಾದಿಸಿದರು. "ನೊಂದವರ ನೋವ ನೋಯದವರೆತ್ತ ಬಲ್ಲರು" ಎಂಬ ಮಾತಿನಂತೆ ನೊಂದವರ ಬಗ್ಗೆ ಚೆನ್ನಾಗಿ ಬಲ್ಲವರಾಗಿದ್ದ ಅಯ್ಯರ್ ಅಕ್ಷರವನ್ನೇ ಕಾಣದ ಅಂದಿನ ಪಂಚಮರಿಗೆ ಅಕ್ಷರ ಜ್ಞಾನವ ನೀಡಲು ಮುಂದಾದರು ಹಾಗೂ ಇದೇ ವೇಳೆಗೆ ನಾಲ್ವಡಿಯವರ ಸರ್ಕಾರ ಪಂಚಮರಿಗಾಗಿ ತೆಗೆದುಕೊಂಡ ನಿರ್ಧಾರಗಳ ಬಗ್ಗೆ ಪ್ರಸ್ತಾಪಿಸಲಾಯಿತು.

ಕೆ.ವಿ. ಅನಂತರಾಮನ್‌ರವರು ಮಳವಳ್ಳಿ ಮತ್ತು ನಂಜನಗೂಡುಗಳಲ್ಲಿ ಆದಿಕರ್ನಾಟಕ ವಿದ್ಯಾರ್ಥಿನಿಲಯಗಳನ್ನು ತೆರೆಯಲಾಗಿದೆ ಎಂದು ತಿಳಿಸಿದರು. ತುಮಕೂರಿನ ಜಿಲ್ಲಾಧಿಕಾರಿ ಜೆ.ಬಿ. ಹೆಬ್ಬಿಕರ್‌ರವರು ೩೦ಳ ಸಂಘ ಸಂಸ್ಥೆಗಳನ್ನು ಪಂಚಮರಿಗಾಗಿ ತರೆಯಲಾಗಿದೆ ಎಂದು ತಿಳಿಸಿದರು. ಇದು ೧೯೩೦ ಅಕ್ಟೋಬರ್ ೧೫ರಲ್ಲಿ ಅಯ್ಯರ್‌ರವರು ನಾಲ್ವಡಿಯವರ ಸರ್ಕಾರಕ್ಕೆ ನೀಡಿದ ಸಲಹೆಗೆ ಪ್ರತಿಫಲವಾಗಿ ಮೈಸೂರು ಸಂಸ್ಥಾನದಲ್ಲಿ ಪಂಚಮರಿಗಾಗಿ ಸಂಘ ಸಂಸ್ಥೆಗಳನ್ನು ಪ್ರಾರಂಭಿಸಿದರು. ಹಾಗೆಯೇ ಶಿವಮೊಗ್ಗದ ಜಿಲ್ಲಾಧಿಕಾರಿ ಜಿ. ರುದ್ರಪ್ಪನವರು ೧೦೦ ಎಕರೆ ಜಮೀನು ಮಂಜೂರು ಮಾಡಿ ಆ ಜಮೀನನಲ್ಲಿ ೩೦ ಸಂಸಾರಗಳು ವ್ಯವಸಾಯ ನಿರತರಾಗಿದ್ದರೆಂದು ಹಾಗೂ ವ್ಯವಸಾಯ ಸಲಕರಣೆ ಮತ್ತು ಹಸುಗಳನ್ನು ಕೊಂಡುಕೊಳ್ಳಲು ಎರಡು ಸಾವಿರ ರೂಪಾಯಿಗಳನ್ನು ಕೊಡಲಾಗಿದೆ ಎಂದು ತಿಳಿಸಿದರು. ಚಿತ್ರದುರ್ಗದ ಜಿಲ್ಲಾಧಿಕಾರಿ ಸಿ.ಎಸ್. ಕುಪ್ಪುಸ್ವಾಮಿಯವರು ಆದಿಕರ್ನಾಟಕರಿಗೆ ನೇಯ್ಗೆ ತರಬೇತಿ ಶಾಲೆಗಳನ್ನು ಮತ್ತು ಬಾವಿಗಳನ್ನು ಮಂಜೂರು ಮಾಡಲಾಗಿದೆ ಎಂದು ತಿಳಿಸಿದರು. ಈ ಎಲ್ಲಾ ಕಾರ್ಯಗಳು ಅಯ್ಯರ್ ಪ್ರಾಜಪ್ರತಿನಿಧಿ ಸಭೆಯಲ್ಲಿ ಮಹಾರಾಜರು ಮತ್ತು ಯುವರಾಜರ ಗಮನಕ್ಕೆ ತಂದಿದ್ದರ ಫಲವಾಗಿ ಸಂಸ್ಥಾನದಲ್ಲಿ ಪಂಚಮರಿಗೆ ಈ ಎಲ್ಲಾ ಸೌಲಭ್ಯಗಳನು ದೊರೆಯಲು ಸಾಧ್ಯವಾಯಿತು.

**ದೇವಾಲಯಗಳಿಗೆ ಪ್ರವೇಶ**

ಪ್ರಜಾಮಿತ್ರ ಮಂಡಲಿಯಲ್ಲಿ ೧೯೩೨ರ ಡಿಸೆಂಬರ್ ಕೊನೆಯ ವಾರದಲ್ಲಿ ಮತ್ತು ೧೯೩೩ರ ಜೂನ್ ತಿಂಗಳಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯಲ್ಲಿ ಮುಜರಾಯಿ ಇಲಾಖೆಯ ದೇವಾಲಯಗಳಿಗೆ ಪಂಚಮರ ಪ್ರವೇಶದ ಬಗ್ಗೆ ಒಂದು ಮಸೂದೆಯನ್ನು ಮಂಡಿಸಲಾಯಿತು. ಇದಕ್ಕೆ ಕಾರಣ ತಿರುವಾಂಕೂರು ಸಂಸ್ಥಾನಗಳಲ್ಲಿ ದೇವಾಲಯದ ಪ್ರವೇಶದ ಮಸೂದೆಯು ಜಾರಿಗೆ ಬಂದದ್ದು ಮೈಸೂರು ಸಂಸ್ಥಾನದವರಿಗೆ ಒಂದು ಹೊಸ ಚೈತನ್ಯವನ್ನೇ ತಂದು ಕೊಟ್ಟಿರಬೇಕು. ಆದ್ದರಿಂದ ಮೈಸೂರಿನ ಉದಾರವಾದಿಗಳು. ಪ್ರತಿನಿಧಿ ಸಂಘಗಳು ಸರ್ಕಾರವು ಮುಜರಾಯಿ ದೇವಾಲಯಗಳನ್ನು ಪಂಚಮರಿಗೆ ಪ್ರವೇಶಕ್ಕೆ ತೆರೆಯಬೇಕೆಂದು ನಿರ್ಣಯ ಮಂಡಿಸಿದದರಿಂದ ೧೨೧:೫೭ ಮತಗಳಿಂದ ಈ ಮಸೂದೆಯು ಪಾಸಾಯಿತು. ಹಾಗಾಗಿ ಸರ್ಕಾರವು ಈ ನಿರ್ಣಯವನ್ನು ತಾತ್ವಿಕವಾಗಿ ಒಪ್ಪಿಕೊಂಡ ಪರಿಣಾಮ ೧೯೩೩ರ ಸಪ್ಟೆಂಬರ್ ೩ನೇ ವಾರದಲ್ಲಿ ಸಾರ್ವಜನಿಕ ಧರ್ಮಶಾಲೆ ರಸ್ತೆ ಬಾವಿ ಕೆರೆಗಳ ಪ್ರವೇಶಕ್ಕೆ ಅನುಮಾಡಿಕೊಟ್ಟರು. ಈ ನಿರ್ಣಯವನ್ನು ಹಿಂತೆಗೆದುಕೊಳ್ಳಲಾಯಿತು. ಏಕೆಂದರೆ ಸಂಪ್ರದಾಯಸ್ಥರ ವಿರೋಧವನ್ನು ಕಟ್ಟಿಕೊಳ್ಳುವುದು ರಾಜಮನೆತನಕ್ಕೆ ಬೇಡವಾದ್ದರಿಂದಲೇ

ಒಲ್ಲದ ಮನಸ್ಸಿನಿಂದ ಹಿಂತೆಗೆದುಕೊಳ್ಳಲಾಯಿತು. ಇದೇ ವೇಳೆಯಲ್ಲಿ "ಮೊದಲು ಹರಿಜನರನ್ನು ನಿಮ್ಮ ಮನೆಯೊಳಗೆ ಕರೆದುಕೊಳ್ಳಿ, ನಂತರ ದೇವಸ್ಥಾನ ಪ್ರದೇಶವನ್ನು ಕುರಿತು ವಿಚಾರದ ಬಗ್ಗೆ ಚರ್ಚೆ ಮಾಡೋಣ" ಎಂಬ ಮಾತುಗಳು ಮತ್ತು ಪ್ರಶ್ನೆಗಳು ಸಹ ಕೇಳಬಂದವು.

ಮೈಸೂರು ಸಂಸ್ಥಾನದ ಅಸ್ಪೃಶ್ಯತ ವಿರೋಧಿ ಲೀಗ್‌ಗೆ ಸೇರಿದ ಪ್ರತಿನಿಧಿಗಳು ಹರಿಜನರ ವಿದ್ಯಾಭಿವೃದ್ಧಿಯ ಬಗ್ಗೆ ಚರ್ಚಿಸಲು ಸರ್ಕಾರ ಆಹ್ವಾನಿಸಿತು. ಲೀಗ್‌ನಲ್ಲಿದ್ದ ಉದಾರವಾದಿಗಳ ಪ್ರಯತ್ನ ಗಳು ಪ್ರಾಮಾಣಿಕವಾದವುಗಳು ಎಂದು ಹೇಳುವುದಕ್ಕಿಂತ ಕೇವಲ ತೋರ್ಪಡಿಕೆಯಾಗಿದ್ದವೂ. ಅಲ್ಲದೆ ಜನಪ್ರಿಯತೆಯ ಅಕಾಂಕ್ಷೆಯೂ ಸಹ ಆಗಿದ್ದವು ಎಂದು ಹೇಳಬಹುದು. ತಾವು ಹೇಳುವ ಮಾತಿಗೆ ತಕ್ಕ ಹಾಗೆ ನಡೆಯುವರಾಗಿರಲಿಲ್ಲ. ಇವರ ಮುಖ್ಯ ಉದ್ದೇಶ ಕೇವಲ ಭಾವಾವೇಶದ ಮಾತು ಹಾಗೂ ಸರ್ಕಾರವನ್ನು ಟೀಕಿಸುವುದು ಮಾತ್ರವಾಗಿತ್ತು ಎನ್ನಬಹುದು. ಏನೇ ಇದ್ದರೂ ಸಹ ನಿಷ್ಕಂಳಕ ಸೇವಾ ಮನೋವನ್ನಿಟ್ಟುಕೊಂಡು ಸರ್ಕಾರಕ್ಕೆ ಅಯ್ಯರ್‌ರವರು ನೀಡಿದ ಸಲಹೆಯಂತೆ ಲೀಗ್‌ನ ಕಾರ್ಯದರ್ಶಿಯಾಗಿದ್ದ ರಾಮಚಂದ್ರರಾವ್‌ರವರು ಹರಿಜನರಿಗೆ ಮುಜರಾಯಿ ದೇವಾಲಯ ವಿಶ್ರಾಂತಿ ಗೃಹ ಕೆರೆ ಕಟ್ಟೆ ಬಾವಿಗಳಗೆ ಪ್ರವೇಶ ನಿಷೇಧಿಸಿದವರಿಗೆ ದಂಡವಿಧಿಸಲಾಗುವುದೆಂದು ತಿದ್ದುಪಡಿ ಮಾಡಲಾಯಿತು. ಹಾಗೆಯೇ ಅಯ್ಯರ್‌ರವರು ಮತ್ತೊಂದು ಮಸೂದೆಯಲ್ಲಿ ಒಬ್ಬ ವಿಶೇಷ ಅಧಿಕಾರಿ ಯನ್ನು ಸಿಬ್ಬಂದಿಗಳ ಸಮೇತ ಹರಿಜನೋದ್ಧಾರ ಕಾರ್ಯಕ್ಕೆ ನೇಮಿಸಬೇಕೆಂದು ಸಲಹೆ ನೀಡಿದರು. ಇದೇ ಸಂದರ್ಭದಲ್ಲಿ ದಿವಾನರು ತಮ್ಮ ಭಾಷಣದಲ್ಲಿ "ಆದಿ ಕರ್ನಾಟಕದ ಅಭಿವೃದ್ಧಿಯು ಸರ್ಕಾರದ ಮುಂದಿರುವ ಕಾರ್ಯಕಲಾಪಗಳಲ್ಲಿ ಒಂದು. ವಿದ್ಯಾರ್ಥಿವೇತನ, ಶುಲ್ಕವಿನಾಯಿತಿಯನ್ನು ಸರ್ಕಾರವು ನೀಡಿದೆ ಹಾಗೂ ಉಚಿತ ವಿದ್ಯಾರ್ಥಿನಿಲಯಗಳನ್ನು ಬೆಂಗಳೂರು ಮೈಸೂರು ತುಮಕೂರು ಚಿಕ್ಕಮಗಳೂರು ಮತ್ತು ಹಾಸನಗಳಲ್ಲಿ ಸ್ಥಾಪಿಸಲಾಗಿದೆ. ಆದಿಕರ್ನಾಟಕದವರಿಗಾಗಿ ೬೦೫ ವಿಶೇಷ ಶಾಲೆಗಳನ್ನು ತೆರೆಯಲಾಗಿದ್ದು ಎಲ್ಲಾ ವರ್ಗದ ಶಾಲೆಗಳಿಗೂ ಪ್ರವೇಶ ಕಲ್ಪಿಸಲಾಗಿದೆ. ಹಾಗಾಗಿ ಈ ಎಲ್ಲಾ ಶಾಲೆಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ೧೩,೫೭೫ ಆದರೂ ಅಂತರಾಳದ ಪರಿವರ್ತನೆ ಧೈರ್ಯ ಅಶಾಭಾವನೆ ಅಕಾಂಕ್ಷೆಗಳಿಲ್ಲದ ಈ ಅಭಿವೃದ್ಧಿ ಕಾರ್ಯಗಳು ಬಹಳ ದಿನ ಬದುಕಲಾರವು. ಇದಕ್ಕೆ ಮುಖ್ಯವಾಗಿ ಬೇಕಾಗಿರುವ ಸಹಕಾರ" ಎಂದು ಹೇಳಿದರು. ಒಟ್ಟಾರೆ ಸಾಮಾಜಿಕ ಚಳುವಳಿಯ ಸಂದರ್ಭದಲ್ಲಿ ಒಬ್ಬ ಅಲ್ಪಸಂಖ್ಯಾತರಾದ ಮಿರ್ಜಾ ಇಸ್ಮಾಯಿಲ್‌ರು ಸಾಮಾಜಿಕ ರಾಜಕೀಯ ವಿರೋಧವಿರುವಂತಹ ವಾತಾವರಣದಲ್ಲಿ ಅಶ್ಪ್ರುಶ್ಯತೆಗೆ ಸಂಬಂಧಪಟ್ಟಂತೆ ಸೂಕ್ಷ್ಮವಿಚಾರಗಳಲ್ಲಿ ತೀರ್ಮಾನ ತೆಗೆದುಕೊಂಡಿರುವುದು ನಿಜವಾಗಿಯೂ ಪ್ರಶಂಸನೀಯವಾದುದು.

**ಸೋಮನಹಳ್ಳಿಯ ಘಟನೆ**

೧೯೩೨ರಲ್ಲಿ ಸೋಮನಹಳ್ಳಿಯ ರಾಮಸಿಂಗಯ್ಯ ಎಂಬ ಪಂಚಮ ಯುವಕನ ಮದುವೆ ನಡೆಯಿತು. ಈ ಮದುವೆಯ ಕಾರ್ಯಕ್ರಮಕ್ಕೆ ಅಯ್ಯರ್‌ರವರು ಬಂದಿದ್ದರು. ಏಕೆಂದರೆ ಅಯ್ಯರ್‌ರವರ ಅಚ್ಚುಮೆಚ್ಚಿನ ವಿದ್ಯಾರ್ಥಿಗಳಲ್ಲಿ ರಾಮಸಿಂಗಯ್ಯನವರು ಸಹ ಒಬ್ಬರಾಗಿದ್ದರು. ಸೋಮನಹಳ್ಳಿಯ ಗೌಡರು ಬಹಳ ಪ್ರಬಲರಾಗಿದ್ದು ಪಂಚಮರು ಗೌಡರ ಅಥವಾ ಸವರ್ಣೀಯರ ಬೀದಿಯಲ್ಲಿ ಚಪ್ಪಲಿ ಹಾಕಿಕೊಂಡು ನಡೆಯುವಂತಿರಲಿಲ್ಲ. ಈಗಾಗಲೇ ಆಯ್ಯರ್‌ರವರ ಪ್ರಭಾವಕ್ಕೊಳಗಾಗಿ ವಿದ್ಯೆ ಕಲಿತ

ಮೊದಲ ತಲೆಮಾರಿನ ಯುವಕರು ಚರ್ಚಿಸಿ ನಾವು ಸವರ್ಣೀಯರ ಬೀದಿಯಲ್ಲಿ ಚಪ್ಪಲಿ ಹಾಕಿಕೊಂಡು ನಡೆದೆ ತಿರುಗುತ್ತೇವೆ ಎಂಬ ಪ್ರತಿಜ್ಞೆ ಮಾಡಿದ್ದರು. ಇವರ ಪ್ರತಿಜ್ಞೆಯ ಹಿಂದೆ ಬದಲಾಗುತ್ತಿದ್ದ ರಾಜಕೀಯ ಪರಿಸ್ಥಿತಿ ಮತ್ತು ದಲಿತ ಪರವಾದ ಕಾನೂನುಗಳ ಬಗ್ಗೆ ವಿದ್ಯಾವಂತಾ ದಲಿತರಿಗೆ ಜ್ಞಾನವಿದ್ದು. ಹಾಗಾಗಿ ರಾಮಸಿಂಗಯ್ಯನವರು ತಮ್ಮ ಮದುವೆಯ ದಿನವೇ ನನ್ನ ಹೆಣ ಬಿದ್ದರೂ ಸರಿಯೇ ನಾನು ಚಪ್ಪಲಿ ಹಾಕಿಕೊಂಡು ಸವರ್ಣೀಯರ ಬೀದಿಯಲ್ಲಿ ನಡೆದು ಬರುತ್ತೇನೆ ಎಂದು ಪ್ರತಿಜ್ಞೆ ಮಾಡಿ ಅದರಂತೆ ಮದುವೆ ಮನೆಗೆ ನಡೆದು ಬಂದರು". ಇದರಿಂದ ಕೋಪೊದ್ರಿಕ್ತರಾದ ಸವರ್ಣೀಯರು ರಾಮಸಿಂಗಯ್ಯನವರನ್ನು ಶಪಿಸಿದರು.

ಊರಿನ ಸವರ್ಣೀಯರೆಲ್ಲ ಒಂದಾಗಿ ಚಿಕ್ಕರಸಿನಕೆರೆಯಲ್ಲಿ ಚರ್ಚಿಸಿ ದಲಿತರ ಸೊಕ್ಕನ್ನು ಅಡಗಿಸಬೇಕೆಂದು ನಿರ್ಧರಿಸಿದ್ದರು. ಆದರೆ ಮಹಾರಾಜರ ಮತ್ತು ಆಯ್ಯರ್‌ರವರ ಕೃಪಕಟಾಕ್ಷ ದಲಿತರ ಪರವಾಗಿ ಇದ್ದುದರಿಂದ ಅದು ಸಾಧ್ಯವಾಗಲಿಲ್ಲ. ಚಿಕ್ಕರಸಿನಕೆರೆಯಲ್ಲಿ ನಡೆದ ಚರ್ಚೆಯ ನಂತರದ ದಿನವೇ ರಾಮಸಿಂಗಯ್ಯನವರು ಅದೇ ಸ್ಥಳದಲ್ಲಿ ಹರಿಜನರ ಸಮ್ಮೇಳನವನ್ನು ಕರೆದಿದ್ದರು. ಈ ವಿಷಯ ಅಯ್ಯರ್‌ರವರಿಗೆ ಮೊದಲೇ ತಿಳಿದ್ದರಿಂದ ಮದ್ದೂರಿನ ಆಮೂಲ್ದಾರಿಗೆ ಪತ್ರ ಬರೆದು ರಾಮಸಿಂಗಯ್ಯನವರಿಗೆ ಎಲ್ಲಾ ರಕ್ಷಣೆಯನ್ನು ನೀಡಿ ಇಲ್ಲವಾದರೆ ನಿಮಗೆ ತೊಂದರೆಯಾಗುತ್ತದೆ ಎಂದು ಎಚ್ಚರಿಸಿದ್ದರು.

**ರೈಲ್ವೇ ಕಛೇರಿಯ ಪ್ರಕರಣ**

೧೯೩೫ ಜೂಲೈ ತಿಂಗಳ ಶನಿವಾರ ಕೆ.ಎಸ್. ಬೋರಯ್ಯನವರಿಗೆ ಅಯ್ಯರ್‌ರವರು ಮೈಸೂರು ನಗರದ ರೈಲ್ವೆ ಕಛೇರಿಯಲ್ಲಿ ನೌಕರಿಯನ್ನು ಕೊಡಿಸಿದರು. ಮರುದಿನವೇ ಕಛೇರಿಯಲ್ಲಿ ಮುಖ್ಯ ಗುಮಾಸ್ತರಾಗಿ ಸೇವೆಸಲ್ಲಿಸಿ ನಿವೃತ್ತಿ ಹೊಂದಿದ ಮಹಾದೇವಪ್ಪನವರಿಗೆ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಲಾಗಿತು. ಆದರೆ ಈ ಕಾರ್ಯಕ್ರಮಕ್ಕೆಂದು ಬೋರಯ್ಯನವರಿಂದ ಒಂದು ರೂ. ತೆಗೆದು ಕೊಂಡಿದ್ದರೂ ಸಹ ಅವರು ಹೊಲೆಯ ಎಂಬ ಕಾರಣಕ್ಕಾಗಿ ಮಾರ್ಡನ್ ಹಿಂದೂ ಹೊಟೇಲ್‌ನಲ್ಲಿ ಏರ್ಪಡಿಸಲಾಗಿದ್ದ ಬೋಜನಕ್ಕೆ ಆಹ್ವಾನಿಸಲಿಲ್ಲ. ಇದೇ ಕಛೇರಿಯಲ್ಲಿ ನೌಕರಿಯಲ್ಲಿದ್ದ ಮೊಹಿಯುದ್ಧೀನ್ ಸ್ಟಿಫನ್ ಮತ್ತು ದೇವಾಂಗದ ದೇವರತ್ನರು ಇದನ್ನು ವಿರೋಧಿಸಿ ಬೋರಯ್ಯನವರಿಗೆ ಬೆಂಬಲಿಗರಾಗಿ ನಿಂತರು. ಮೈಸೂರು ವಿಭಾಗದ ಕಮ್ಯುನಿಸಂನ ಕಾರ್ಯದರ್ಶಿಯಾಗಿದ್ದ ಬೋರಯ್ಯನವರು ತಮಗಾದ ವಿಷಯ ಕುರಿತು ಹಿಂದೂ ಪತ್ರಿಕೆಯಲ್ಲಿ ಪ್ರಕಟಿಸಿದರು. ವಿಷಯ ತಿಳಿದ ಅಯ್ಯರ್ ಮೈಸೂರಿಗೆ ಬಂದು ಸಂಚಾರ ನಿಂಯತ್ರಣ ವ್ಯವಸ್ಥಾಪಕರಾಗಿದ್ದ ಎ.ಎ. ಖಾನ್‌ರವರಿಗೆ ದೂರು ನೀಡಿ ಸಹಾಯಕ ಸಂಚಾರ ನಿಯಂತ್ರಣ ವ್ಯವಸ್ಥಾಪಕರಾದ ಕೆ. ಗುಂಡಪ್ಪನವರಿಗೆ "ಹೀಗೆಲ್ಲ ನಡೆದರೆ ರೈಲ್ವೆ ಸಂಚಾರವನ್ನು ಬಂದ್ ಮಾಡಲಾಗುವುದು" ಎಂದು ಎಚ್ಚರಿಕೆ ನೀಡಿದರು. "ಮಾಡುವದೆಲ್ಲಾ ಅನಾಚಾರ ಮನೆ ಮುಂದೆ ಬೃಂದಾವನ" ಎಂಬ ಮಾತಿನಂತೆ ಬಹಳ ವಿನಯತೆಯಿಂದ ಎದ್ದು ನಿಂತು ತಪ್ಪಾಯಿತು ಸಾರ್ ಎಂದರು. ಒಟ್ಟಾರೆ ಇದರಿಂದ ತಿಳಿದುಬರುವ ಅಂಶವೆಂದರೆ ಬಾಬಾಸಾಹೇಬ್ ಅಂಬೇಡ್ಕರ್ ರವರು ಹೇಳಿದಂತೆ ಭಾರತದಲ್ಲಿ ಸವರ್ಣೀಯರ ಮನೋಭಾವ ಬದಲಾವಣೆಯಾಗದೆ ಹೊರತು ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಸಾಧ್ಯವಿಲ್ಲ" ಎಂಬಂತೆ ನಾಲ್ವಡಿಯವರ ಸರ್ಕಾರ ಪಂಚಮರ

ಪರವಾಗಿ ಯಾವುದೇ ಆಜ್ಞೆಯನ್ನು ಜಾರಿಗೆ ತಂದರೂ ಸಹ ಸವರ್ಣೀಯರ ಮನಭಾವ ಮಾತ್ರ ಬದಲಾಗಲೇ ಇಲ್ಲ ಮತ್ತು ಬದಲಾಗುವುದಿಲ್ಲ ಎಂದು ಹೇಳಬಹುದು.

ರಾಮಸಿಂಗಯ್ಯನವರು ೧೯೪೦ ೪೧ರಲ್ಲಿ ಇಂಜಿನಿಯರಿಂಗ್ ಓದಬೇಕೆಂದು ಅಭಿಲಾಷೆಯನ್ನು ಹೊಂದಿ ಇಂಜನಿಯರಿಂಗ್ ಕಾಲೇಜಿನ ಪ್ರಾಚಾರ್ಯರಾದ ಗೋವಿಂದಪಿಳ್ಳೆಯವರನ್ನು ಭೇಟಿ ಮಾಡಿದರು. ಆದರೆ ಅವರು ಸೀಟೆಲ್ಲ ಮುಗಿದು ಹೋಗಿವೆ ಎಂದು ಉಡಾಫೆಯಿಂದ ಉತ್ತರಿಸಿದರು. ಏಕೆಂದರೆ ರಾಮಸಿಂಗಯ್ಯ ಅಸ್ಪೃಶ್ಯ ಎಂಬ ಕಾರಣಕ್ಕಾಗಿ ಹೀಗೆ ಹೇಳಿರಬಹುದು. "ಹಲ್ಲಿದ್ದರೆ ಕಡ್ಲೆ ಇಲ್ಲ ಕಡ್ಲೆ ಇದ್ದರೂ ಹಲ್ಲಿಲ್ಲ" ಎಂಬ ಮಾತಿನಂತೆ ಓದಬೇಕೆಂಬ ಹಂಬಲ ರಾಮಸಿಂಗಯ್ಯನವರಿಗೆ ಇದ್ದರೂ ಅದಕ್ಕೆ ಕಾಲೇಜಿನ ಪ್ರಾಚಾರ್ಯರು ಅವರ ಆಸೆಗೆ ತಣ್ಣೀರು ಹಾಕಿದರು. ಆದರೂ ಧೈರ್ಯಗೆಡದೆ ರಾಮಸಿಂಗಯ್ಯನವರು ಅಂದಿನ ಉಪಕುಲಪತಿಗಳಾಗಿದ್ದ ಎನ್.ಎಸ್. ಸುಬ್ಬರಾಯ್‌ರವನ್ನು ಭೇಟಿ ಮಾಡಿದರು. ಆದರೂ ಅವರ ಆಸೆ ಇಡೇರಲಿಲ್ಲ. ಈ ವಿಷಯ ಅಯ್ಯರ್‌ರವರಿಗೆ ತಿಳಿದು ಅಯ್ಯರ್‌ರವರನ್ನು ಭೇಟಿ ಮಾಡಿ ವಿಷಯ ತಿಳಿಸಿದರು. ತಕ್ಷಣವೇ ಪ್ರಾಚಾರ್ಯರಿಗೆ ದೂರವಾಣಿ ಮೂಲಕ ವಿಚಾರಿಸಿದಾಗ ಆಗಲ್ಲೂ ಸಹ ಪ್ರಾಚಾರ್ಯರು ಮೊದಲಿನಂತೆಯೇ ಉತ್ತರಿಸಿದರು. ಅದಕ್ಕೆ ಪ್ರತಿಕ್ರಿಯಿಸಿದ ದಿವಾನರು. ಹಾಗಾದರೆ ಇನ್ನೊಂದು ತರಗತಿಯನ್ನು ತೆರೆದು ರಾಮಸಿಂಗಯ್ಯ ಮತ್ತು ಇತರರಿಗೂ ಪ್ರವೇಶ ನೀಡಿ ನಾನು ವಿಳಾಸ ಕಳುಹಿಸುತ್ತೇನೆ ಎಂದರು. ಈ ಹಿಂದೆಯೇ ಪ್ರಸ್ತಾಪಿಸಿದಂತೆ ಯಾವುದೇ ಒತ್ತಡಗಳಿಗೆ ಒಳಗಾಗದೆ ಮಹಾರಾಜರ ಅವಕೃಪೆಯಿಂದ ದಿವಾನರು ದಲಿತಪರ ಕಾರ್ಯಗಳನ್ನು ಕೈಗೊಳ್ಳುವಲ್ಲಿ ಯಶಸ್ವಿಯಾದರು. ಇಲ್ಲಿ ಇನ್ನೊಂದು ವಿಷಯ ಸ್ಪಷ್ಟವಾಗುವುದೆನೆಂದರೆ ಸಂಸ್ಥಾನದ ರಾಜಮನೆತನವು ದಲಿತರಿಗೆ ಕೆಲವು ವಿಶೇಷ ಸವಲತ್ತುಗಳನ್ನು ಕೊಡುವುದನ್ನು ಬಿಟ್ಟರೆ ಅಸ್ಪೃಶ್ಯತೆಯನ್ನು ತೊಡೆದು ಹಾಕುವ ಯಾವುದೇ ತೀವ್ರವಾದ ಕ್ರಮಗಳನ್ನು ಕೈಗೊಳ್ಳಲಿಲ್ಲ ಎಂದು ಹೇಳಬಹುದು.

ರೆವಿನ್ಯೂ ಟ್ರಿಬ್ಯುನಲ್ ಮೆಂಬರ್ ಆಗಿ ನಿವೃತ್ತಿ ಪಡೆದ ವೈ.ಸಿ. ಹೊಂಬಾಳಯ್ಯನವರು ಎಲ್.ಎಲ್.ಬಿ. ಕಾನೂನು ಪದವಿಯನ್ನು ಪಡೆದ ಕರ್ನಾಟಕ ರಾಜ್ಯದ ಮೊದಲ ದಲಿತ ವಿದ್ಯಾರ್ಥಿ. ದಲಿತ ಸಮುದಾಯವೆಂಬ ಕಗ್ಗತ್ತಲ ನಡುವಿನಿಂದ ಬೆಳಕನ್ನು ಹೊತ್ತು ತಂದ ಅಯ್ಯರ್ ತುಂಬಾ ಹೆಮ್ಮೆಪಟ್ಟರಲ್ಲದೆ ದಿವಾನರಾಗಿದ್ದ ಎನ್. ಮಾಧವರಾವ್‌ರವರಲ್ಲಿಗೆ ಕರೆದುಕೊಂಡು ಹೋಗಿ ಹೊಂಬಾಳಯ್ಯನವರನ್ನು ಪರಿಚಯಿಸಿ ಉಪ ಆಯುಕ್ತ ಹುದ್ದೆಗೆ ಶಿಫಾರಸ್ಸು ಮಾಡಿದರು. ಇದರಿಂದ ಸಂತೋಷಗೊಂಡ ದಿವಾನರು ಹೊಂಬಾಳಯ್ಯನವರನ್ನು ಉಪ ಆಯುಕ್ತರನ್ನಾಗಿ ನೇಮಕ ಮಾಡಿದರು. ಅಯ್ಯರ್‌ರವರ ಈ ಕಾರ್ಯವು ವ್ಯಕ್ತಿಯ ಸಾಮರ್ಥ್ಯ ಮತ್ತು ಅರ್ಹತೆಯ ಆಧಾರದ ಮೇಲೆಯೇ ಸರ್ಕಾರಿ ಉದ್ಯೋಗವನ್ನು ಪಂಚಮರಿಗೆ ಕೊಡಿಸಿಕೊಡಬೇಕೆಂಬ ನಿಲುವನ್ನು ಹೊಂದಿದ್ದರಿಂದ ಹೊಂಬಾಳಯ್ಯನವರಿಗೆ ಉಪ ಆಯುಕ್ತ ಹುದ್ದೆಯನ್ನು ನಾಲ್ವಡಿಯವರ ಸರ್ಕಾರದಿಂದ ಕೊಡಿಸಿದರು. ಆದಿನಾರಾಯಣ್ ಎಂಬ ವಿದ್ಯಾರ್ಥಿ ದೃಢಕಾಯ ಮತ್ತು ಎತ್ತರವಾಗಿದ್ದರು. ಇವರಿಗೆ ಐ.ಜಿ.ಪಿ. ಹ್ಯಾಮಿಲ್ಟನ್‌ರವನ್ನು ಭೇಟಿ ಮಾಡಿ ಸಬ್‌ಇನ್ಸ್‌ಪೆಕ್ಟರ್ ಹುದ್ದೆಯನ್ನು ಕೊಡಿಸಿದರು. ಇವರು ಆದಿಕರ್ನಾಟಕ ಜಾತಿಯ ಮೊದಲ ಸಬ್‌ಇನ್ಸ್‌ಪೆಕ್ಟರ್‌ರಾದರು. ಒಟ್ಟಾರೆ ಮೈಸೂರು ಸಂಸ್ಥಾನದ

ಎಲ್ಲಾ ಹಂತಗಳಲ್ಲೂ ಬ್ರಾಹ್ಮಣರೆ ತುಂಬಿಕೊಡಿದ್ದರಿಂದ ಬ್ರಾಹ್ಮಣೇತರರಿಗೆ ಪ್ರಾತಿನಿಧ್ಯ ನೀಡಿದ್ದು ಅದರಲ್ಲಿಯೂ ಪಂಚಮರಿಗೂ ವಿಶೇಷ ಪ್ರಾತಿನಿಧ್ಯ ನೀಡಿದ್ದು ನಾಲ್ವಡಿಯವರ ಸರ್ಕಾರಕ್ಕೆ ಒಂದು ಭದ್ರತೆಯನ್ನು ತಂದುಕೊಟ್ಟಿತ್ತೆಂದು ಹೇಳಬಹುದು.

**ನರಸಿಂಹರಾಜ ವಿದ್ಯಾರ್ಥಿನಿಲಯದ ಘಟನೆ**

ಎನ್.ಎಸ್. ಸುಬ್ಬರಾವ್‌ರವರು ೧೯೩೫ರಲ್ಲಿ ನರಸಿಂಹರಾಜ ವಿದ್ಯಾರ್ದಿ‍ನಿಲಯವನ್ನು ಮೂರು ಭಾಗಗಳಾಗಿ ಮಾಡಿದರು. ಕಾರಣ ವಿದ್ಯಾರ್ಥಿನಿಲಯದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ೧೫೦ಕ್ಕೆ ಹೆಚ್ಚಾಯಿತು. ಈ ಒತ್ತಡದಿಂದ ಹೊರಬರುವ ಸಲುವಾಗಿ ಮೈಸೂರು ನಗರದಲ್ಲಿ ಮತ್ತೆರಡು ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಬೇಕಾಯಿತು. ಈ ಹಿನ್ನಲೆಯಲ್ಲಿ ನರಸಿಂಹರಾಜ ವಿದ್ಯಾರ್ಥಿನಿಲಯವನ್ನು ಮೂರು ಭಾಗಗಳಾಗಿ ಮಾಡಿದ್ದು ಆಯಾ ವಿಭಾಗದ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಬೆಂಗಳೂರಿನಲ್ಲಿ ೭೫ ವಿದ್ಯಾರ್ಥಿಗಳಿಗೂ ಹಾಸನದಲ್ಲಿ ೪೫ ವಿದ್ಯಾರ್ಥಿಗಳಿಗೂ ಮತ್ತು ಕೋಲಾರದಲ್ಲಿ ೩೫ ವಿದ್ಯಾರ್ದಿಗಳಿಗೂ ಸ್ಥಳಾವಕಾಶ ಮಾಡಿಕೊಡಲಾಯಿತು.[೧೩] ಇದರಿಂದಾಗಿ ಅಲ್ಲಿನ ವಿದ್ಯಾರ್ಥಿಗಳ ಮನಸ್ಸನ್ನು ಕಲಕಿತು. ಏಕೆಂದರೆ ೩ ರಿಂದ ೪ ವರ್ಷಗಳ ಕಾಲ ಸ್ನೇಹಬಾಂಧವ್ಯದ ಹೊಸ ವಾತಾವರಣದಲ್ಲಿದ್ದ ವಿದ್ಯಾರ್ಥಿಗಳಿಗೆ ಈ ವಿಷಯ ಅಳಿಸಲಾರದ ಬರೆಯಾಯಿತು. ಈ ಬಗೆಯ ನೋವು ವಿದ್ಯಾರ್ಥಿನಿಲಯದಲ್ಲಿ ಓದಿದ ಮತ್ತು ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಕಂಡುಬರುವ ಸಹಜ ಗುಣ ಎಂದು ಹೇಳಬಹುದು. ಏಕೆಂದರೆ ತಮ್ಮ ಎಲ್ಲಾ ಭಾವನೆಗಳನ್ನು ಮತ್ತು ಬೇಕು ಬೇಡಗಳನ್ನು ತಮ್ಮ ಆತ್ಮೀಯ ಸ್ನೇಹಿತರೊಂದಿಗೆ ಹಂಚಿಕೊಳ್ಳುತ್ತಿದ್ದವರಿಗೆ ಅಗಲಿಕೆಯ ಸಂದರ್ಭ ಬಂದಾಗ ಮನಸ್ಸಿಗೆ ದುಃಖವಾಗುವುದು ಸಹಜವೆಂದೆ ಹೇಳಬಹುದು. ಇದೇ ಕಾರಣವನ್ನು ಮುಂದಿಟ್ಟು ಕೊಂಡ ವಿದ್ಯಾರ್ಥಿಗಳು ಉಪವಾಸ ಸತ್ಯಾಗ್ರಹ ಮಾಡಲು ಮುಂದಾದರು. ಈ ಉಪವಾಸ ಸತ್ಯಗ್ರಹದ ಮುಂಚೂಣಿ ನಾಯಕರಾಗಿ ಕೆ. ಭಿಮಯ್ಯ ಮುಖ್ಯ ನ್ಯಾಯಧೀಶರಾಗಿದ್ದರು ಮತ್ತು ಎಸ್. ರಾಮಸಿಂಗಯ್ಯ(ಬಿ.ಡಿ.ಓ.ಆಗಿ ನಿವೃತ್ತರಾದವರು)ನವರು ಊಟ ಮತ್ತು ಇತರ ಸೌಕರ್ಯಗಳೂ ಸಹ ಕಳಪೆಯಾಗಿದ್ದವು ಎಂಬ ಕಾರಣಗಳನ್ನಿಟ್ಟುಕೊಂಡು ಸತ್ಯಾಗ್ರಹ ಪ್ರಾರಂಭಿಸಿದರು. ಮೊದಲೆ ಎನ್.ಎಸ್. ಸುಬ್ಬರಾವ್‌ರವರ ಕೃಪಾಶೀರ್ವಾದವಿದ್ದ ವಿದ್ಯಾರ್ಥಿನಿಲಯದ ಮೇಲ್ವಿಚಾರಕರಾಗಿದ್ದ ನರಸಿಂಗಪ್ಪ ಮತ್ತು ಅಧ್ಯಕ್ಷರಾಗಿದ್ದ ಡಾ. ಪಾಲ್‌ಚನ್ನಪ್ಪನವರು ವಿದ್ಯಾರ್ಥಿಗಳ ಸತ್ಯಾಗ್ರಹವನ್ನು ಕಡೆಗಣಿಸಿದರು. ಹಾಗಾಗಿ ಅಧಿಕಾರಿಗಳ ಗಮನ ಸೆಳೆಯಲು ಸತ್ಯಾಗ್ರಹ ನಿರತರು ವಾಗ್ವಾದಕ್ಕೆ ಇಳಿದು ಮಾತಿನ ಚಕಾಮುಖಿಯಲ್ಲಿ ಗಲಾಟೆಗಳಾದವು. ಈ ಗಲಾಟೆಯಲ್ಲಿ ಮೇಲ್ವಿಚಾರಕರ ಪೇಟ ಕೆಳಗೆ ಬಿದ್ದಿತು. ಇದೇ ಸಕಾರಣವೆಂದು ತಿಳಿದು ೮ ಜನ ವಿದ್ಯಾರ್ದಿಗಳನ್ನು ಪೋಲಿಸರು ಬಂಧಿಸಿ ಅದೇ ದಿನ ಬಿಡುಗಡೆ ಮಾಡಿದರು. ಈ ವಿಷಯ ಪತ್ರಿಕೆಗಳಲ್ಲಿ ಪ್ರಕಟವಾಯಿತು.

೧೪.೮.೧೯೩೮ರಲ್ಲಿ ಆಯ್ಯರ್‌ರವರ ನೇತೃತ್ವದಲ್ಲಿ ಚಿತ್ರದುರ್ಗ ಜಿಲ್ಲೆಯ ಹಿರಿಯೂರನಿಂದ ೩ ಮೈಲಿ ದೂರದ ಬೆಟ್ಟದ ಸಾಲುಗಳ ತಪ್ಪಲಿನಲ್ಲಿ ನರಸಿಂಹರಾಜರ ಇಚ್ಛೆಯ ಮೇರೆಗೆ ರಾಜ್ಯಮಟ್ಟದ ಸ್ಕೌಟ್ ರ್‍ಯಾಲಿಯನ್ನು ಏರ್ಪಡಿಸಲಾಗಿತ್ತು. ಈ ರ್‍ಯಾಲಿಯಲ್ಲಿ ನರಸಿಂಹರಾಜ ವಿದ್ಯಾರ್ಥಿಗಳ ಸ್ಕೌಟ್ ತಂಡವು ಭಾಗವಹಿಸುವುದರ ಜೊತೆಗೆ ಸ್ವತಃ ಯುವರಾಜರು ಸಹ ಪಾಲ್ಗೊಂಡಿದ್ದರು. ವಿದ್ಯಾರ್ಥಿಗಳನ್ನು

ಬಂಧಿಸಿದ ವಿಚಾರವನ್ನು ಯುವರಾಜರಿಗೆ ಆಪ್ತ ಸಹಾಯಕನಾಗಿದ್ದ ತಮ್ಮಯ್ಯ ತಿಳಿಸಿದನು. ಪತ್ರಿಕೆಯನ್ನು ನೋಡಿದ ಯುವರಾಜರು ಬಿಡಾರದಲ್ಲಿದ್ದ ಅಯ್ಯರ್‌ರವರನ್ನು ಕರೆದು ವಿಷಯ ತಿಳಿಸಿ ತಕ್ಷಣವೇ ಅಲ್ಲಿಂದ ಬೆಂಗಳೂರಿಗೆ ಹೊರಡುವಂತೆ ತಿಳಿಸಿ ಹುಡುಗರು ಊಟ ಮಾಡುವಂತೆ ಮನವೊಲಿಸಿ ಎಂದು ಆದೇಶಿಸಿದರು. ಏಕೆಂದರೆ ಯುವರಾಜರ ಘನತೆ ಗೌರವದ ಪ್ರಶ್ನೆಯ ಜೊತೆಗೆ ತಮ್ಮ ವ್ಯಕ್ತಿತ್ವಕ್ಕೆ ಎಲ್ಲಿ ಕಳಂಕವಾಗುವುದು ಎಂಬ ಭಾವನೆ ಯುವರಾಜರಿಗಿದ್ದರಬಹುದು. ತಕ್ಷಣವೇ ಪ್ರಯಾಣ ಕೈಗೊಂಡ ಅಯ್ಯರ್ ಏನು ನಡೆದಿರಬಹುದು ಕಾರಣವೇನಿರಬಹುದೆಂದು ದಾರಿಯುದ್ಧಕ್ಕೂ ಚಿಂತಿಸುತ್ತಲೇ ಬಂದರು. ಎಷ್ಟೇ ಆದರು ಪಂಚಮರ ಬಗ್ಗೆ ಅಪಾರ ಪ್ರೀತಿ ಗೌರವ ಮತ್ತು ಕಾಳಜಿಯನ್ನು ಹೊಂದಿದ್ದರಿಂದ ಈ ಬಗೆಯ ಚಿಂತನೆಗಳು ಮೂಡುವುದು ಸಹಜ.

ಅಯ್ಯರ್ ಬರುತ್ತಿರುವ ವಿಷಯ ತಿಳಿದ ವಿದ್ಯಾರ್ಥಿಗಳು ಗಡಗಡನೆ ನಡುಗುತ್ತ ವಿದ್ಯಾರ್ಥಿ ನಿಲಯದ ಕೋಣೆಗಳಲ್ಲಿ ಅವಿತು ಬಾಗಿಲು ಹಾಕಿಕೊಂಡರು. ಏಕೆಂದರೆ ಅಯ್ಯರ್‌ರವರ ಮೇಲಿದ್ದ ಗೌರವ ನಂಬಿಕೆಯಿಂದ ಹೀಗೆ ಮಾಡಿರಬಹುದು ಅಥವಾ ಬೈಯುತ್ತಾರೆ ಎಂಬ ಕಾರಣಕ್ಕಾಗಿಯೂ ಇರಬಹುದು. ವಿದ್ಯಾರ್ಥಿನಿಲಯಕ್ಕೆ ಬಂದ ಆಯ್ಯರ್ ನೀವೆಲ್ಲಾ ಮುರ್ಖರೂ ನಿಮ್ಮಲ್ಲೆಲ್ಲಾ ಡಿಸ್‌ಮಿಸ್ ಮಾಡಿಸಿ ಬಿಡುತ್ತೇನೆಂದು ಸಮಾಧಾನ ತಂದುಕೊಂಡು ಬೈದರು. ಊಟ ಮಾಡ್ತಿರೋ ಇಲ್ಲವೋ ಎಂದು ಜೋರಾಗಿ ಗದರಿಸಿದರು. ವಿದ್ಯಾರ್ಥಿಗಳ ಮುಖ ನೋಡಿ ಮರುಕಗೊಂಡ ಅಯ್ಯರ್ ಲೋ ಭಿಮಯ್ಯ ರಾಮಸಿಂಗಯ್ಯ ನಿಮಗೇನಾದರೂ ಸಮಸ್ಯೆ ಆದರೆ ನಾನಿಲ್ಲವೆನೋ ಎಂದು ಹೇಳಿ ಮನ ಒಲಿಸಿ ಊಟ ಮಾಡುವಂತೆ ಮಾಡಿದರು. ಊಟವಾದ ಮೇಲೆ ಮುತ್ತುರಾಜ್ ಎಂಬ ವಿದ್ಯಾರ್ಥಿ ದುಃಖದಿಂದ ಸಾರ್ ನೀವು ಬ್ರಾಹ್ಮಣಂ ಭೋಜನ ಪ್ರಿಯ ಅಂತ ಆಗಾಗ್ಗೆ ಮದ್ರಾಸ್ಸಿಗೆ ಹೋಗತ್ತೀರಿ. ನಮ್ಮ ಸಮಸ್ಯೆಯನ್ನು ಯಾರ ಹತ್ತಿರ ಹೇಳಿಕೊಳ್ಳದು ಎಂದಾಗ ಹೌದಯ್ಯ "ಬ್ರಾಹ್ಮಣ ಮಾತ್ರ ಭೋಜನ ಪ್ರಿಯಾ ಅಲ್ಲಕಣ್ರೋ ಹೊಲೆಯಂ ಕವಳ ಪ್ರಿಯಂ" ಎಂದು ಹೇಳಿ ಎಲ್ಲರನ್ನು ನಗಿಸಿದರು. ಅದೇ ದಿನ ವಿದ್ಯಾರ್ಥಿಗಳಿಗೆ ಬೇಕಾದ ವಸ್ತುಗಳನ್ನು ಕೊಡಿಸಿ ಡಾ. ಪಾಲ ಚನ್ನಪ್ಪರನ್ನು ವರ್ಗಾಯಿಸಿ ಆ ಸ್ಥಳಕ್ಕೆ ಕೋಟೆ ಹೈಸ್ಕೂಲ್(ವಿಕ್ಟೋರಿಯಾ ಅಸ್ಪತ್ರೆ ಮುಂಭಾಗದಲ್ಲಿದೆ)ನ ಮುಖ್ಯ ಶಿಕ್ಷಕರಾಗಿದ್ದ ಎಂ.ಎ. ನಾರಾಯಣ ಐಯ್ಯಂಗಾರ್‌ರವರನ್ನು ನರಸಿಂಹರಾಜ ವಿದ್ಯಾರ್ಥಿನಿಲಯದ ಅಧ್ಯಕ್ಷರನ್ನಾಗಿ ನೇಮಿಸಿದರು. ಇವರಿಗೆ ಪಂಚಮ ವಿದ್ಯಾರ್ಥಿಗಳ ಬಗ್ಗೆ ಅನುಕಂಪವಿತ್ತಲ್ಲದೆ ಅವರ ಅಂತಾರಾಳದಲ್ಲಿ ಸ್ಥಳವಿತ್ತು. ಹಾಗಾಗಿ ಆ ಕಾಲಕ್ಕೆ ತಕ್ಕಂತೆ ನೀತಿ ಬೋಧನೆಯನ್ನು ನೀಡಿ ಪಂಚಮ ಬಾಲಕರಲ್ಲಿ ಪಿತೃವಾತ್ಸಲ್ಯ ಪ್ರೇಮ ಉತ್ಸಾಹಗಳನ್ನು ತುಂಬಿ ತಮ್ಮಲ್ಲಿದ್ದ ವಿದ್ಯೆಯನ್ನು ಬೋಧಿಸಿದರು.

**ನರಸಿಂಹರಾಜ ಹಾಸ್ಟಲ್**

೧೯೨೩ರಲ್ಲಿ ಸ್ಥಾಪನೆಯಾದ ನರಸಿಂಹರಾಜ ವಿದ್ಯಾರ್ಥಿ ನಿಲಯವನ್ನು ಎಸ್.ಎನ್.ಆರ್. ಹಾಸ್ಟಲ್ ಎಂದು ಕರೆಯುವುದು ರೂಢಿಯಲ್ಲಿತು. ಈ ವಿದ್ಯಾರ್ಥಿನಿಲಯದಲ್ಲಿ ಪ್ರತಿವರ್ಷವು ವಾಷಿಕೋತ್ಸವ ಕಾರ್ಯಕ್ರಮವನ್ನು ಆಚರಿಸಲಾಗುತ್ತಿತ್ತು. ಹಾಗೆಯೇ ಇಂದಿಗೂ ಕೂಡ ಆಚರಣೆ ಮಾಡಿಕೊಂಡು ಬರುತ್ತಿದ್ದಾರೆ. ಆ ಸಂದರ್ಭದಲ್ಲಿ ವಿದ್ಯಾರ್ಥಿಗಳು ಕ್ರೀಡೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡಿ ಅವರು ಧೈರ್ಯ ನಾಯಕತ್ವದ ಗುಣ ಬೆಳೆಸಿಕೊಳ್ಳುವಂತೆ ಮತ್ತು ಕ್ರೀಡಾಸಕ್ತಿಯನ್ನು

ಬೆಳೆಸಿಕೊಳ್ಳಲು ಈ ಕಾರ್ಯಕ್ರಮ ಪೂರಕವಾಗಿರುತ್ತಿತ್ತು. ಹಾಗಾಗಿ ಆಯ್ಯರ್‌ರವರ ನೇತೃತ್ವದಲ್ಲಿ ೧೯೩೧ರ ಆಗಸ್ಟ್ ೯ನೇ ತಾರೀಖಿನಂದು ವಿದ್ಯಾರ್ಥಿನಿಲಯದ ವಾರ್ಷಿಕೋತ್ಸವ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದಲ್ಲಿ ಕಂಠೀರವ ನರಸಿಂಹರಾಜ ಒಡೆಯರವರು ಅಧ್ಯಕ್ಷತೆಯನ್ನು ವಹಿಸಿದ್ದರು. ವಿದ್ಯಾರ್ಥಿನಿಲಯದ ಸಮಿತಿಯ ಸದಸ್ಯರಾಗಿದ್ದ ರಾವ್‌ಸಾಹೆಬ್ ಚನ್ನಯ್ಯನವರು ವಿದ್ಯಾರ್ಥಿನಿಲಯದ ವಾರ್ಷಿಕ ವರದಿಯನ್ನು ಓದುತ್ತಾ ವಿದ್ಯಾರ್ಥಿನಿಲಯದಲ್ಲಿ ಸ್ಕೌಟ್ ವಾಲಿಬಾಲ್ ಬಾಲ್‌ಬ್ಯಾಡ್‌ಮಿಟನ್ ತಂಡಗಳು ಬೆಳೆದು ಬಂದುದರ ಬಗ್ಗೆ ತಿಳಿಸುತ್ತಾ ಬಾಲ್‌ಬ್ಯಾಡ್‌ಮಿಟನ್ ತಂಡ ನೀಡಿದ ಪ್ರದರ್ಶನದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಈ ವಿದ್ಯಾರ್ಥಿನಿಲಯದಲ್ಲಿ ಓದಿದ ಮತ್ತು ಸೇರಿರುವ ವಿದ್ಯಾರ್ಥಿಗಳು ಯಾವುದೇ ನೌಕರಿಗೂ ಆಸೆ ಪಡೆದೆ ತಾಯಿನಾಡಿನಲ್ಲಿರುವ ಸಂಕೋಲೆಗಳನ್ನು ಕಂದುಕೊರತೆಗಳನ್ನು ಹೊಗಲಾಡಿಸಬೇಕು ಮತ್ತು ನಾಯಕತ್ವದ ಗುಣ ಬೆಳೆಸಿ ಕೊಳ್ಳಬೇಕು ಎಂದು ಹೇಳಿದರು. ಈ ಸಂಸ್ಥೆ ಬೆಳೆಯಲು ಮತ್ತು ಪಂಚಮ ಜನಾಂಗದ ದಾರಿದೀಪರಾದ ಆರ್. ಗೋಪಾಲಸ್ವಾಮಿ ಅಯ್ಯರ್‌ರವರಿಗೆ ಹಾಗೂ ಸಹಕರಿಸಿದ ಇತರರಿಗೂ ಮೆಚ್ಚುಗೆ ವ್ಯಕ್ತಪಡಿಸಿದರು. ಇದೇ ಸಂದರ್ಭದಲ್ಲಿ ಜಿ. ಯಾಲಕ್ಕಯ್ಯನವರಿಗೆ ವಾಲಿಬಾಲ್‌ನ ವಿಶೇಷ ಪಾರಿತೋಷಕವನ್ನು ಯುವರಾಜರು ನೀಡಿದರು.

ಈ ವಿದ್ಯಾರ್ಥಿನಿಲಯಕ್ಕೆ ಪ್ರತಿ ತಿಂಗಳ ಕೊನೆಯ ಭಾನುವಾರದಂದು ಯುವರಾಜರು ಭೇಟಿ ನೀಡುತ್ತಿದ್ದರು.[೧೪] ಈ ಸಂದರ್ಭದಲ್ಲಿ ಅಯ್ಯರ್‌ರವರು ಆ ತಿಂಗಳ ವರದಿಯನ್ನು ಯುವರಾಜರಿಗೆ ತಿಳಿಸುತ್ತಿದ್ದರು. ಯುವರಾಜರು ಬರುವ ವೇಳೆಗೆ ಅಯ್ಯರ್‌ರವರು ವಿದ್ಯಾರ್ಥಿಗಳಿಗೆ ಎಚ್ಚರಿಕೆ ನೀಡುತ್ತಿದ್ದರು. ಇದನ್ನು ಕಂಡ ಯುವರಾಯರು ಅಯ್ಯರ್‌ವರಿಗೆ ಎಚ್ಚರಿಕೆ ಕೊಡುವುದು ಬೇಡ ಎಂದು ಹೇಳಿದರು. ಏಕೆಂದರೆ ಯುವರಾಜರಿಗೆ ವಿದ್ಯಾರ್ಥಿಗಳು ಬೆಳೆದು ಬಂದ ರೀತಿ ನಡತೆಗಳನ್ನು ಯಾವ ಮುನ್ನೆಚ್ಚರಿಕೆಯೂ ಇಲ್ಲದೆ ತಿಳಿದುಕೊಳ್ಳುವುದಾಗಿತ್ತು. ಅಯ್ಯರ್‌ರವರ ಕೈಕೆಳಗೆ ಬೆಳೆದ ವಿದ್ಯಾರ್ಥಿಗಳು ಶಿಸ್ತನ್ನು ಹೇಗೆ ಬೆಳೆಸಿಕೊಂಡಿದ್ದರೆಂಬುದಕ್ಕೆ ಒಮ್ಮೆ ಲಾಲ್‌ಬಾಗ್‌ನಲ್ಲಿ ಪುಷ್ಪ ಪ್ರದರ್ಶನ ಏರ್ಪಟ್ಟಿತ್ತು. ಎಂದಿನಂತೆ ನರಸಿಂಹರಾಜ ವಿದ್ಯಾರ್ಥಿನಿಲಯ ಎಲ್ಲಾ ೨೫೦ ಸ್ಕೌಟ್ ವಿದ್ಯಾರ್ಥಿಗಳು ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಅಯ್ಯರ್‌ರವರು ಟಿಕೆಟ್ ಇಲ್ಲದವರನ್ನು ಒಳಗೆ ಬಿಡಬಾರದು ಎಂದು ಕಟ್ಟಪ್ಪಣೆ ಮಾಡಿದರು. ಈ ಬಾರಿ ಯುವರಾಜರು ಶೂಟ್ ಬೂಟ್ ಧರಿಸಿ ಕಾರಿನಲ್ಲಿ ಬಂದು ಪ್ರವೇಶಿಸುತ್ತಿದ್ದಾಗ ಹೆಚ್. ಮಾದಯ್ಯ ಬಿ. ನಂಜಯ್ಯ ಮತ್ತು ಮುತ್ತುರಾಯ ಬಾಗಿಲಲ್ಲಿ ಕಾಯುತ್ತಿದ್ದ ಯುವರಾಜರ ಸವಾರಿ ತಡೆದು ಟಿಕೆಟ್ ಕೇಳಿದರು. ಅವರು ನಾನು ಯುವರಾಜ ಎಂದು ಹೇಳಿದರು ಒಳಗೆ ಬಿಡಲಿಲ್ಲ. ಕೊನೆಗೆ ಅಯ್ಯರ್ ಬಂದು ನೋಡಿ ವಿಸ್ಮಯ ಗೊಂಡು ವಿದ್ಯಾರ್ಥಿಗಳನ್ನು ಹೊಡೆಯಲು ಪ್ರಯತ್ನಿಸಿದರು. ಅದನ್ನು ತಡೆದ ಯುವರಾಜರು ವಿದ್ಯಾರ್ಥಿಗಳ ಶಿಸ್ತು ಮತ್ತು ಕಾರ್ಯತಾತ್ಪರತೆಯನ್ನು ಮೆಚ್ಚಿ ಶಹಬಾಶ್‌ಗಿರಿ ಕೊಟ್ಟು ಪ್ರದರ್ಶನದ ಕೊನೆಯವರೆಗೂ ಹೀಗೆ ನಡೆದುಕೊಳ್ಳಿ ಎಂದು ಹೇಳಿದರು. ಇದು ಅಯ್ಯರ್‌ರವರ ಮೇಲೆ ವಿದ್ಯಾರ್ಥಿ ಗಳಿಟ್ಟಿದ ನಂಬಿಕೆ ಮತ್ತು ಅವರ ವ್ಯಕ್ತಿತ್ವದ ಬಗ್ಗೆ ಇದ್ದ ಗೌರವದಿಂದಾಗಿ ತಮ್ಮ ಕಾರ್ಯತಾತ್ಪರತೆಯನ್ನು ಮೆರೆದಿರಬಹುದು.

ಒಟ್ಟಾರೆ ಸಂಸ್ಥಾನದಲ್ಲಿ ಪಂಚಮರನ್ನು ಮುಖ್ಯವಾಹಿನಿಗೆ ತರಲು ಶ್ರಮಿಸಿದ ನಾಲ್ವಡಿಯವರ ಸರ್ಕಾರ ಮತ್ತು ಗೋಪಾಲಸ್ವಾಮಿ ಅಯ್ಯರ್‌ರವರು ಕರ್ನಾಟಕದ ಚರಿತ್ರೆಯಲ್ಲಿ ಅಗ್ರಗಣ್ಯಸ್ಥಾನದಲ್ಲಿ ನಿಲ್ಲುತ್ತಾರೆ. ಪಂಚಮರ ಐಕಮತ್ಯ ಮತ್ತು ಏಳಿಗೆಗೆ ಬದ್ಧರಾಗಿದ್ದ ಕೆ.ಸಿ. ರೆಡ್ಡಿ ನಾಲ್ವಡಿಯವರ ನೆರವಿನಿಂದ ಈ ವರ್ಗದವರಿಗೆ ವಿಶೇಷ ಸವಲತ್ತುಗಳನ್ನು ನೀಡಿದರು. ವಿದ್ಯಾ ಇಲಾಖೆಯ ಮುಖ್ಯಸ್ಥ ಪದವಿಯನ್ನು ಉಪಯೋಗಿಸಿಕೊಂಡು ಪಂಚಮರ ಪರವಾಗಿಯೇ ಇದ್ದಂತಹ ಮಹಾರಾಜರನ್ನು ಒಲಿಸಿಕೊಂಡು ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ಪಂಚಮರಿಗೆ ಪ್ರವೇಶ ಕಲ್ಪಿಸಿಕೊಟ್ಟರು. ನಾಲ್ವಡಿಯವರ ಸರ್ಕಾರದ ವಿರುದ್ಧ ಎಲ್ಲಾ ಬಲಾಢ್ಯ ಜಾತಿಯವರು ನಿಂತ ಸನ್ನಿವೇಶದಲ್ಲಿ ತನ್ನ ಹಿತದೃಷ್ಟಿಯಿಂದಲೇ ಸರ್ಕಾರವು ಕೆಲವು ಕ್ರಮಗಳನ್ನು ಕೈಗೊಂಡು ಪಂಚಮರನ್ನು ಸವರ್ಣಿಯರ ಶೋಷಣೆಯಿಂದ ಪಾರುಮಾಡಲು ಪ್ರಯತ್ನಿಸಿತು. ಏಕೆಂದರೆ ಪಂಚಮರ ಸಮಸ್ಯೆ ಎಲ್ಲಾ ಸಮಸ್ಯೆ ಗಳಿಗಿಂತ ಅತ್ಯಂತ ಕಠಿಣವಾದುದ್ದಾಗಿತು. ಆದ್ದರಿಂದ ಗೋಪಾಲಸ್ವಾಮಿ ಅಯ್ಯರ್‌ರವರಿಗೆ ವಿಶೇಷ ಅಧಿಕಾರ ನೀಡುವುದರ ಜೊತೆಗೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರನ್ನಾಗಿ ಮಾಡಿ ಹಳ್ಳಿಯಿಂದ ಹಿಡಿದು ಪ್ರಜಾಮಿತ್ರ ಮಂಡಲಿಯವರೆಗೂ ಅಧಿಕಾರ ನೀಡಿದರು. ಹಾಗಾಗಿ ಅಯ್ಯರ್‌ರವರು ಸರ್ಕಾರಕ್ಕೆ ನೀಡಿದ ಸಲಹೆ ಗಳನ್ನು ಸ್ವೀಕರಿಸಿ ಅವುಗಳನ್ನು ಜಾರಿ ತಂದು ಪಂಚಮರ ಏಳಿಗೆಗೆ ಕಾರಣರಾದರು. ಅಧಿಕಾರಿಶಾಹಿಗಳ ದಬ್ಬಾಳಿಕೆ ಹಾಗೂ ಕುತಂತ್ರದ ವಿರುದ್ಧ ಅವರು ಪ್ರಶ್ನಿಸುವ ಪ್ರಯತ್ನದಲ್ಲಿದ್ದು ಶತಶತಮಾನಗಳಿಂದ ತಮ್ಮ ಕೀಳು ವ್ಯಕ್ತಿತ್ವಗಳನ್ನು ಮೂಕವಾಗಿ ಪಾಲಿಸಿಕೊಂಡು ಬರುತ್ತಿದ್ದಂತಹ ಲಕ್ಷಾಂತರ ಜನರ ಧ್ವನಿ ಮೆಲ್ಲಮೆಲ್ಲಗೆ ಪುಟಿಯತೊಡಗಿತು. ಇದಕ್ಕೆ ಕಾರಣ ಪುರಷರಾದವರೆಂದರೆ ಆರ್. ಗೋಪಾಲಸ್ವಾಮಿ ಅಯ್ಯರ್ ಮತ್ತು ನಾಲ್ವಡಿಯವರ ಸರ್ಕಾರವೆಂದು ಹೇಳಬಹುದು. ಏಕೆಂದರೆ ಅಂಧಕಾರದಲ್ಲಿದ್ದ ಪಂಚಮರ ಬಾಳನಲ್ಲಿ ಅಕ್ಷರದ ಜ್ಞಾನಜ್ಯೋತಿಯನ್ನು ಬೆಳಗಿಸಿ ಅವರನ್ನು ಎಲ್ಲಾ ರಂಗದಲ್ಲಿ ತೊಡಗಿಸಿ ಕೊಳ್ಳುವಂತೆ ಮಾಡುವುದರ ಜೊತೆಗೆ ಸಾಮಾಜಿಕ ಆರ್ಥಿಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಗತಿ ಹೊಂದಲು ಅಯ್ಯರ್‌ರವರು ಕಾರಣರಾದರು. ಒಟ್ಟಿನಲ್ಲಿ ನಾಲ್ವಡಿಯವರ ಕೆಲವು ಸುಧಾರಣ ಕ್ರಮಗಳು ಪಂಚಮರನ್ನು ಸವರ್ಣೀಯರ ಕ್ರೂರ ಮತ್ತು ಅಸಮರ್ಥನೀಯ ರೂಢಿ ಸಂಪ್ರದಾಯ ಮತ್ತು ಪರಂಪರೆಗಳಿಂದ ಎದ್ದು ಬರುವಂತೆ ಮಾಡಿತು. ಆದರೆ ಈ ನತದೃಷ್ಟ ಮಾನವ ಪ್ರಾಣಿಗಳಿಗೆ ಅದು ಯಾವಾಗಲೂ ನಿರಾಶೆಯ ಕರಾಳ ಸನ್ನಿವೇಶವೇ ಆಗಿರುತ್ತಿತ್ತು. ಏಕೆಂದರೆ ಅವರ ಕೂಗಿಗೆ ಸರ್ಕಾರ ಸ್ಪಂದಿಸಿದರೂ ಕೂಡ ಸವರ್ಣೀಯರ ವಿರೋಧ ಕಟ್ಟಿಕೊಳ್ಳುವ ಧೈರ್ಯ ಮಾಡಲಿಲ್ಲವೆಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣನ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೩೦

೨. ಎಸ್. ಚಂದ್ರಶೇಖರ್., ೧೯೮೩, ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ೧೮೮೧ ರಿಂದ ೧೯೪೦ ಕೆಲವು ಒಳ ನೋಟಗಳು, ಬೆಂಗಳೂರು. ಪು.೯೦

೩. ಅದೇ ಪು.೩೪

೪. ಅದೇ ಪು.೮೯

೫. ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣನ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೪೮

೬. ಡಾ. ಹಾ.ಮಾ. ನಾಯಕ., ಎಸಂಐ. ೧೯೭೧, ಕನ್ನಡ ವಿಶ್ವಕೋಶ ಸಂಪುಟ೩, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಪು. ೬೨೦

೭. ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣನ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೬೦

೮. ಎಂ. ನಾರಾಯಣ, ೨೦೦೩, ಸಾಮಾಜಿಕ ಸಮಸ್ಯೆಗಳು, ಚೇತನ ಬುಕ್ ಹೌಸ್, ಮೈಸೂರು, ಪು. ೩೩೭

೯. ಕಾಮತ್ ಸೂರ್ಯನಾಥ., (ಸಂ). ಇತಿಹಾಸ ದರ್ಶನ, ಸಂಪುಟ-೯, ೧೯೯೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು. ಪು.೨೩೩

೧೦. ಡಾ. ಜಿ. ಗೋಪಾಲ., ೨೦೦೧, ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು, ಪು.೮೪

೧೧. ಮೈಸೂರು ಜನಗಣತಿ, ೧೯೩೧

೧೨. ಡಿ.ಆರ್. ನಂಜಯ್ಯ., ನೆನಪುಗಳು ಕಾಮದೇನು ಪ್ರಿಂಟರ್ಸ್, ಬೆಂಗಳೂರು. ಪು. ೨೨

೧೩. ಡಾ. ಎಂ. ನಂಜಯ್ಯ ಹೊಂಗನೂರು., ೨೦೦೧, ಬಿ. ರಾಚಯ್ಯರವರ ಜೀವನ ಮತ್ತು ರಾಜನೀತಿ, ಬಿ. ರಾಚಯ್ಯ ಪ್ರತಿಷಾವಿಪನ, ಮೈಸೂರು. ಪು. ೨೨

# ವಸಾಹತುಶಾಹಿ ಕಾಲಘಟ್ಟದಲ್ಲಿ ಮೈಸೂರು ಸಂಸ್ಥಾನದ ದಲಿತರ ಶಿಕ್ಷಣ

ಹದಿನೆಂಟನೆ ಶತಮಾನವನ್ನು ಆಧುನಿಕ ಯುಗದ ಆರಂಭ ಮತ್ತು ವಸಾಹತುಶಾಹಿ ಯುಗದ ಪ್ರಾರಂಭದ ಕಾಲ ಎಂದು ಕರೆಯಲಾಗಿದೆ. "ಒಂದು ಜನ ವರ್ಗವೂ ಬೇರೆ ನಾಡಿನಿಂದ ಬಂದು ಮತ್ತೊಂದು ಜನವರ್ಗದ ಮೇಲೆ ಪ್ರಭುತ್ವ ಸಾಧಿಸಿ ಅವರನ್ನು ದಮನ ಮಾಡುವುದೇ ವಸಾಹತುಶಾಹಿ". ಅದೊಂದು ವ್ಯವಸ್ಥಿತ ಶೋಷಣೆಯಾಗಿದ್ದು ಅದರ ಹಿಂದೆ ಒಂದು ತತ್ವವನ್ನು ಹೊಂದಿರುತ್ತದೆ. ಒಂದು ದೇಶದ ಜನರು ಇನ್ನೊಂದು ದೇಶದ ಜನರ ವಸಾಹತು ಹಾಗೂ ಬಂಡವಾಳಗಾರಿಕೆಯ ಆಸಕ್ತಿಗಳನ್ನು ರಕ್ಷಿಸವಂತೆ ಮಾಡಿ ಅವರ ಪೂರ್ಣ ದಾಸ್ಯವನ್ನು ಒಪ್ಪಿಕೊಳ್ಳುವಂತೆ ಮಾಡಿ, ತನ್ನ ರಾಜಕೀಯ ನಿಲುವನ್ನು ಇವರ ಮೇಲೆ ಹೇರಲು ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ಅದು ಬಳಸಿ ಕೊಂಡು ಸರ್ಕಾರವನ್ನು ತನ್ನ ಅಧೀನಕ್ಕೆ ತೆಗೆದುಕೊಂಡು ಅಲ್ಲಿನ ಎಲ್ಲಾ ಮಾನವ ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ತನ್ನ ಪ್ರಯೋಜನಕ್ಕಾಗಿ ಬಳಸಿಕೊಂಡು ತನ್ನಿಂದ ತುಳಿತಕ್ಕೊಳಗಾದ ಸಮಾಜದ ಎಲ್ಲಾ ಹೆಚ್ಚುವರಿ ಸಂಪತ್ತನ್ನು ಹೀರಿಕೊಳ್ಳತ್ತದೆ. ಇಲ್ಲಿನ ಜನರ ಐಕ್ಯತೆಗೆ ದಕ್ಕೆ ಬರುವ ಹಾಗೆ ನೋಡಿಕೊಳ್ಳುತ್ತದೆಯಲ್ಲದೆ, ವಸಾಹತು ಸಮಾಜವನ್ನು ವಿವಿಧ ವರ್ಗಗಳಾಗಿ ಗುಂಪುಗಳಾಗಿ ಒಡೆಯಲು ಪ್ರಯತ್ನಿಸುತ್ತದೆ.

ಹೀಗೆ ಅಧೀನ ನಾಡಿನ ಅಥವಾ ರಾಷ್ಟ್ರಗಳ 'ಸಾಂಸ್ಕೃತಿಕ ವಿನಾಶ'ವನ್ನು ವ್ಯವಸ್ಥಿತವಾಗಿ ಕಾರ್ಯಗತಗೊಳಿಸುವ ಒಂದು ಘಟ್ಟದಲ್ಲಿ ವಸಾಹತುಶಾಹಿಯು ಅಧೀನ ರಾಷ್ಟ್ರದ ಜನತೆ ತಮ್ಮ ರಾಷ್ಟ್ರತ್ವದ ಗ್ರಹಿಕೆ ಪೊಳ್ಳೆಂದು, ತಾವು ಸಂಸ್ಕೃತಿ ಎಂದು ನಂಬಿದ್ದುದು ಕೇವಲ ಪ್ರಾಣಿ ಸಹಜ ಪ್ರವೃತ್ತಿಯೆಂದು ಮತ್ತು ಜೀವ ವಿಜ್ಞಾನದ ನೆಲೆಯಲ್ಲಿಯೂ ತಮ್ಮ ದೈಹಿಕ ಮತ್ತು ಮಾನಸಿಕ ಸ್ವರೂಪವು ತುಂಬಾ ಕೆಳಮಟ್ಟದೆಂದೂ ನಂಬುವಂತೆ ಶ್ರಮಿಸುತ್ತದೆ. ನಂತರ ಅದನ್ನು ವಿರೂಪ ಗೊಳಿಸುತ್ತದೆ. ಕೊನೆಗೆ ಅದನ್ನು ಸಂಪೂರ್ಣವಾಗಿ ನಾಶಗೊಳಿಸುತ್ತದೆಂದು ಫ್ಯಾನನ್ ದಾಖಲಿಸುತ್ತಾರೆ.[೧]

ಇದೇ ಮಾದರಿಯಲ್ಲಿಯೆ ಭಾರತವು ಯುರೋಪಿನ ಅಧೀನ ರಾಷ್ಟ್ರವಾಗಿ ಮಾರ್ಪಟ್ಟು ಬ್ರಿಟಿಷ್ ಆಡಳಿತದ ಅವಶ್ಯಕತೆಗಳನ್ನು ಪೂರೈಸುವ ಹಿನ್ನಲೆಯಲ್ಲಿ ಬ್ರಿಟಿಷ್ ಮಾದರಿಯ ಆಧುನಿಕತೆ ಅಥವಾ

ಅಭಿವೃದ್ಧಿ ಜಾರಿಗೆ ಬಂದಿತು. ಅದು ಭಾರತದ ನೆಲದಲ್ಲಾದ ಬ್ರಿಟಿಷ್ ಆಧುನೀಕರಣ. ಯುರೋಪಿನ ಕೈಗಾರಿಕಾ ಅವಶ್ಯಕತೆಗಳನ್ನು ಪೂರೈಸುವ ಹಿನ್ನಲೆಯಲ್ಲಿ ಕೃಷಿ ಪ್ರಧಾನ ಭಾರತವನ್ನು ಸಜ್ಜುಗೊಳಿಸಿ ಬ್ರಿಟಿಷ್ ಭಾರತವನ್ನು ನಿರ್ಮಾಣ ಮಾಡಿತು. ಇದರ ಲಾಭವನ್ನು ಬ್ರಿಟಿಷರಷ್ಟೇ ಅಲ್ಲದೆ ಸ್ಥಳೀಯ ಶ್ರೀಮಂತ ವರ್ತಕರು, ಜಮೀನ್ದಾರರು ಮತ್ತು ಮಧ್ಯವರ್ತಿಗಳು ಪಡೆದುಕೊಂಡು ಇದರಿಂದಾಗಿ ಬಂಡವಾಳ ಕೇಂದ್ರಿತ ಶ್ರೀಮಂತರ ಕೂಟವೊಂದು ನಿರ್ಮಾಣಗೊಂಡಿತು. ದುಡಿಯುವ ವರ್ಗಗಳ ಬದುಕಿನಲ್ಲಿ ಬದಲಾದ ವ್ಯವಸ್ಥೆ ಹೊಸತನವನ್ನೇನೂ ತರಲಿಲ್ಲ. ಜಾತಿ ಮತ್ತು ಧರ್ಮಗಳ ಆಧಾರದ ಮೇಲೆ ಕಟ್ಟಲ್ಪಟ್ಟಿದ ಸ್ಥಳೀಯ ಯಜಮಾನಿಕೆಯ ಜೊತೆಗೆ ಬಂಡವಾಳ ಕೇಂದ್ರಿತ ಪಶ್ಚಿಮದ ಯಜಮಾನಿಕೆಯು ಭಾರತದಲ್ಲಿ ಸ್ವಚ್ಛಂದವಾಗಿ ವಿಹರಿಸುವಂತಾಯಿತು. ಹೀಗಾಗಿ ಆಧುನೀಕರಣ ಮತ್ತು ಹಿಂದುಳಿದಿರುವಿಕೆಗಳೆರಡೂ ಒಟ್ಟೊಟ್ಟಿಗೆ ಸಾಗಿದವು. ಚರಿತ್ರೆಕಾರರಾದ ಬಿಪಿನ್ ಚಂದ್ರರವರು ಬ್ರಿಟಿಷ್ ಭಾರತ ಕುರಿತು ಹೀಗೆ ಹೇಳುತ್ತಾರೆ.

ಇವರ ಪ್ರಕಾರ ವಸಾಹತುಶಾಹಿ ಒಂದು ಹೊಸ ಉತ್ಪಧನಾ ವಿಧಾನವಲ್ಲ. ಅದು ಹಲವಾರು ಉತ್ಪಾದನಾ ವಿಧಾನಗಳನ್ನು ಒಳಗೊಂಡಿರುವ ಸಂಮಿಶ್ರವಾದ ವ್ಯವಸ್ಥೆ. ಆ ವ್ಯವಸ್ಥೆಯೊಳಗೆ ಊಳಿಗ ಮಾನ್ಯತೆ ಬಂಡವಾಳಶಾಹಿ ಜೀತ ಶೋಷಣೆ ವ್ಯಾಪಾರ ಕೈಗಾರಿಕೆ ಕೃಷಿ ಮುಂತಾವುದವುಗಳೆಲ್ಲವೂ ಸೇರಿಕೊಂಡಿರುತ್ತದೆ. ವಸಾಹತುಶಾಹಿಯು ಊಳಿಗಮಾನ್ಯತೆಯೊಂದಿಗೆ ಸಂಬಂಧ ಬೆಳೆಸಿತು. ಹೀಗಾಗಿ ವಸಾಹತು ಆಳ್ವಿಕೆಯಲ್ಲಿ ಊಳಿಗಮಾನ್ಯ ವ್ಯವಸ್ಥೆಯು ನಾಶ ಹೊಂದುವ ಬದಲು ಹೊಸ ಹೊಸ ಎಸ್ಟೇಟ್‌ಗಳು (ತೋಟದ ಉದ್ಯಮ ಅಥವಾ ಪ್ಲಾಂಟೇಶನ್ ಆರ್ಥಿಕತೆ) ಮತ್ತೆ ಚಿಗುರಿಕೊಂಡಿತು. ಬಂಡವಾಳ ಶೇಖರಣೆಗೆ ಅನುಕೂಲವಾಗುವ ರೀತಿಯಲ್ಲಿ ಹುಟ್ಟಿಕೊಂಡವು. ಇದು ಹೊಸ ಭೂಮಾಲಿಕ ವರ್ಗಗಳ ಹುಟ್ಟಿಗೂ ಕಾರಣವಾಯಿತು. ಬೇರೆ ಬೇರೆ ರೀತಿಯ ಉತ್ಪಾದನಾ ವಿಧಾನಗಳಿಂದ ಹೆಚ್ಚುವರಿಯನ್ನು ಕ್ರೂಢೀಕರಿಸುವುದು ವಸಾಹತುಶಾಹಿಯ ಉದ್ದೇಶವಾಗಿತ್ತು. ಈ ಉದ್ದೇಶಕ್ಕೆ ಅದು ಅನುಸರಿಸಿದ ವಿಧಾನ ದೇಶದಿಂದ ದೇಶಕ್ಕೆ ಭಿನ್ನವಾಗಿತ್ತು. ಒಟ್ಟಾರೆಯಾಗಿ ಅದೊಂದು ಬಂಡವಾಳ ಕೇಂದ್ರಿತ ಉತ್ಪಾದನಾ ವಿಧಾನವೂ ಹೌದು. ಅದು ತರುವ ಆಧುನೀಕರಣ ಕೇವಲ ಆರ್ಥಿಕ ಪರಿವರ್ತನೆಗಳಿಗಷ್ಟೇ ಸೀಮಿತವಾದುದ್ದಲ್ಲ. ಅದು ಆಯಾ ದೇಶದ ಸಾಮಾಜಿಕ, ಆಡಳಿತ ಮತ್ತು ಸಾಂಸ್ಕೃತಿಕ ಜೀವನದ ಮೇಲೂ ಗಾಢವಾದ ಪರಿಣಾಮಗಳನ್ನು ಬೀರುವಂತದ್ದು. ಬ್ರಿಟಿಷ್ ಆಳ್ವಿಕೆ ಅನಿವಾರ್ಯ ಎನ್ನುವ ಭಾವನೆಯನ್ನು ಮೂಡಿಸುವುದೆ ಅದರ ಮೊದಲ ಕೆಲಸವಾಗಿತು. ಆ ಕಾರಣಕ್ಕಾಗಿ ಅದು ಬ್ರಿಟಿಷ್ ಆಡಳಿತವನ್ನು ಆಧುನಿಕಯುಗ ಎನ್ನುವ ಹೆಸರಿನಲ್ಲಿ ಕರೆಯಲಾದರೆ ಬ್ರಿಟಿಷ್ ಪೂರ್ವ ಅವಧಿಯನ್ನು ಕತ್ತಲೆಯ ಯುಗ ಎಂಬುದಾಗಿ ಕರೆಯಲಾಯಿತು.[೨]

ಒಟ್ಟಾರೆ ವಸಾಹತುಶಾಹಿಯು ಮೂಲತಃ ಮಾನವರ ನಡುವಣ ಒಂದು ಸಂಬಂಧ. ಆಳುವ ವಿದೇಶಿವರ್ಗ ಆಳಿಸಿಕೊಳ್ಳುವ ವಸಾಹತಿನ ಜನವರ್ಗಗಳ ನಡುವಣ ಸಂಬಂಧ. ಅದರ ಮುಖ್ಯ ಉದ್ದೇಶ ವಸಾಹತು ಆರ್ಥಿಕತೆಯ ಮೆಟ್ರೋಪಾಲಿಟನ್ ಆರ್ಥಿಕತೆಗೆ ಅಧೀನವಾಗಿರುವಂತೆ ಮಾಡುವುದು. ಇಡೀ ವಸಾಹತನ್ನು ಲೂಟಿ ಮಾಡುವುದು. ಅಲ್ಲದೆ ಸಕಲ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲ ಗಳ ಮೇಲೆ ಹತೋಟಿಯಲ್ಲಿಟ್ಟುಕೊಂಡು ಆಳುವ ವರ್ಗವನ್ನು ವಿರೋಧಿಸುವುದಾಗಿರುತ್ತದೆ. ಸ್ಥಳೀಯ

ಆಸ್ತಿವಂತ ವರ್ಗವು ಆಳುವ ವರ್ಗದ ಮಿತ್ರರಾಗಲಿ ಕಿರಿಯ ಸಾಹಬಾಗಿಗಳಾಗಲಿ ಆಗಿರುವುದಿಲ್ಲ. ವಸಾಹತಿನ ಹೆಚ್ಚುವರಿ ಸಂಪತ್ತನ್ನು ಸ್ಥಳೀಯ ಮೇಲ್ವರ್ಗದೊಂದಿಗೆ ಹಂಚಿಕೊಳ್ಳಬಹುದು. ಆದರೆ ಅಧಿಕಾರವನ್ನು ಹಂಚಿಕೊಳ್ಳುವಂತಿರಲಿಲ್ಲ. ವಸಾಹತಿನ ಮೇಲ್ವರ್ಗ ಮಧ್ಯಮ ವರ್ಗಗಳು ರಾಜಕೀಯ ವಾಗಿ ಪ್ರಮುಖವಾದವಲ್ಲ. ಆಳುವ ವರ್ಗವು ಅವರೆಲ್ಲರ ಯಜಮಾನನಂತೆ ವರ್ತಿಸುತ್ತದೆ. ೧೮ನೇ ಶತಮಾನವು ಭಾರತದಲ್ಲಿ ಅಂತಹ ಒಂದು ವಸಾಹತು ಸ್ಥಿತಿಯ ಬೀಜವನ್ನು ಬಿತ್ತಿತು. ಅದು ಅಕ್ಬರ್ ಕಟ್ಟಿದ ರಾಷ್ಟ್ರಕ್ಕಿಂತ ಸಂಪೂರ್ಣವಾಗಿ ಬೇರೆಯಾಗಿತು. ಹೀಗಿದ್ದರೂ ಸಹ ವಸಾಹತುಶಾಹಿಯು ತನ್ನ ಆಧೀನ ರಾಷ್ಟ್ರಗಳ ಮೇಲೆ ತನ್ನ ಪ್ರಭುತ್ವವನ್ನು ಬಲಪಡಿಸಲು ಎಂತಹ ಮಾರ್ಗಗಳನ್ನು ಅನುಸರಿಸಿತು ಎಂಬುದನ್ನು ನಾವು ಸ್ಪಷ್ಟವಾಗಿ ಗ್ರಹಿಸಿದರೆ ಅದರಿಂದ ಬಿಡುಗಡೆ ಸಾಧ್ಯವಾಗುತ್ತದೆ ಎಂದು ಫ್ಯಾನನ್ ಹೇಳಿದ್ದಾರೆ.[೩]

ವಸಾಹತು ಭಾರತದ ಸುಮಾರು ೫೬೫ ದೇಶೀ ಸಂಸ್ಥಾನಗಳಲ್ಲಿ ಮೈಸೂರು ವಿಸ್ತೀರ್ಣದಲ್ಲಿ ಎರಡನೆಯ ಸಂಸ್ಥಾನವಾಗಿತು. ೧೭೯೯ರಲ್ಲಿ ನಡೆದ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಶ್ರೀರಂಗಪಟ್ಟಣದ ಪತನ ಮತ್ತು ಟಿಪ್ಪುವಿನ ಮರಣದ ನಂತರ ಮೈಸೂರು ರಾಜ್ಯವನ್ನು ಹರಿದು ಹಂಚಿಕೊಳ್ಳಲಾಯಿತು. ಒಂದು ಭಾಗ ಬ್ರಿಟಿಷರಿಗೆ ಇನ್ನೊಂದು ಭಾಗ ಹೈದರಾಬಾದ್‌ನ ನಿಜಾಮನಿಗೆ, ಮತ್ತೊಂದು ಭಾಗ ಮರಾಠರಿಗೂ ಉಳಿದದ್ದನ್ನು ೧೭೬೩ರ ನಂತರ ಮೂಲೆಗುಂಪಾಗಿದ್ದ ಮೈಸೂರು ಒಡೆಯರ ಮನೆತನಕ್ಕೆ ವಹಿಸಿಕೊಡಲಾಯಿತು. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ೧೮೩೧ರಲ್ಲಿ ನಡೆದ 'ನಗರದಂಗೆ'ಯ ನೆಪವೊಡ್ಡಿ ಮತ್ತೆ ಒಡೆಯರ ಮನೆತನವನ್ನು ಬ್ರಿಟಿಷರು ತಮ್ಮ ನೇರ ಆಡಳಿತಕ್ಕೆ ವಹಿಸಿಕೊಂಡರು.

೧೭೯೯ರಲ್ಲಿ ಆದ ಮೈಸೂರು ಆಂಗ್ಲೋ ಒಪ್ಪಂದದಲ್ಲಿ ಈ ರೀತಿ ಬ್ರಿಟಿಷರು ರಾಜ್ಯಗಳನ್ನು ಮತ್ತೆ ವಾಪಸ್ಸು ಪಡೆಯುವ ಅವಕಾಶವಿತ್ತು. ೧೮೩೧ರಿಂದ ೧೮೮೧ರವರೆಗೆ ಸುಮಾರು ೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ತರುವಾಯ ಬ್ರಿಟಿಷರು ಹಲವಾರು ಆಂತರಿಕ ದ್ವಂದ್ವಗಳಿಂದಾಗಿ ಸಂಸ್ಥಾನದ ಆಡಳಿತವನ್ನು ಎರಡನೆಯ ಬಾರಿಗೆ ಒಡೆಯರ ಮನೆತನಕ್ಕೆ ಹಸ್ತಾಂತರಗೊಳಿಸಿದರು. ಈ ಅಧಿಕಾರ ಹಸ್ತಾಂತರ ಒಪ್ಪಂದದ ಮೇರೆಗೆ ನಡೆಯಿತು.

ಮೈಸೂರು ರಾಜ್ಯದ ಮೇಲೆ ಬ್ರಿಟಿಷರ ನೇರ ಆಡಳಿತದಿಂದಾದ ಮುಖ್ಯ ಪ್ರಭಾವವೆಂದರೆ ಆಡಳಿತವನ್ನು ಸಮರ್ಥವಾಗಿ ನಡೆಸುವಂತೆ ಶಕ್ತಗೊಳಿಸಿದ್ದು ಹಾಗೂ ವಿದ್ಯಾಭ್ಯಾಸ ಕ್ರಮವನ್ನು ಜಾತ್ಯೀತೀತಗೊಳಿಸಿದ್ದು. ಪುನಃ ಅಧಿಕಾರದ ಚುಕ್ಕಾಣಿ ಹಿಡಿದಂತಹ ಒಡೆಯರು ಮೈಸೂರನ್ನು ಆಧುನಿಕ ಜಗತ್ತಿಗೆ ಪರಿಚಯಿಸಲು ಮುಂದಾದರು. ಈ ಹಂತದ ಪ್ರಥಮ ಹೆಜ್ಜೆ ಎಂದರೆ ಆಧುನಿಕ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದದ್ದು.[೪] ಶತಮಾನಗಳಿಂದಲೂ ಕೇವಲ ಒಂದೇ ಜಾಡಿನಲ್ಲಿ ನಡೆದುಕೊಂಡು ಬಂದಿದ್ದಂತಹ ಶಿಕ್ಷಣ ಪದ್ಧತಿಯನ್ನು ಬದಿಗೊತ್ತಿ ಆಧುನಿಕ ಶಿಕ್ಷಣವನ್ನು ಜಾರಿಗೊಳಿಸಿದರು. ಆಧುನಿಕ ಶಿಕ್ಷಣವೇ ಇಂದಿನ ಎಲ್ಲಾ ಸಮಸ್ಯೆಗಳಿಗೂ ಪರಹಾರವೆಂದು ನಂಬಿ ಕೊಂಡಿದ್ದಂತಹ ಒಡೆಯರ್‌ರವರು ಶಿಕ್ಷಣವನ್ನು ಎಲ್ಲಾ ಹಂತದಲ್ಲಿಯೂ ಎಲ್ಲಾ ಜಾತಿಯವರಲ್ಲಿಯೂ

ಹಾಗೂ ಮಹಿಳೆಯರಿಗೂ ವಿಸ್ತರಿಸಲು ನಿರ್ಧರಿಸಿದರು. ಅಂದಿನ ಕಾಲಕ್ಕೆ ಇದು ಭರತ ಖಂಡದಲ್ಲಿಯೇ ಪ್ರಥಮ ಪ್ರಯತ್ನವೆನ್ನಬಹುದು.

ವಸಾಹತುವಾದಿಗಳ ಕೂಸಾದ ಮೈಸೂರು ವಸಾಹತುವಾದದೊಂದಿಗೆ ಅವನತಿ ಹೊಂದುತ್ತಾ ಅದರ ಜೊತೆಯಲ್ಲಿಯೇ ಮಾಯವಾಯಿತು. ಹೀಗಾಗಿ ವಸಾಹತು ಶಾಹಿಯಿಂದಲೇ ಅದು ಪ್ರಾಣ ಪಡೆಯುತ್ತಿತ್ತು. ವಸಾಹತುಶಾಹಿಯಂತೆ ತನ್ನದೇ ರೀತಿಯಲ್ಲಿ ಜನತಾಂತ್ರಿಕ ಶಕ್ತಿಯ ವಿಕಾಸಕ್ಕೆ ಪ್ರತಿರೋಧ ಒಡ್ಡಿತು. ಚಾರಿತ್ರಿಕ ಗತಿಯಲ್ಲಿ ವಸಾಹತುಶಾಹಿ ಅಸ್ತಮಿಸಿದಂತೆ ಕ್ರಮೇಣ ಅದು ರಾಷ್ಟ್ರೀಯ ಜನತಾಂತ್ರಿಕ ಭಾರತದಲ್ಲಿ ಸೇರ್ಪಡೆಯಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳಬೇಕಾಯಿತು.

ಈ ಎಲ್ಲ ಬೆಳವಣಿಗಳೊಂದಿಗೆ ಬಗೆಹರಿಯದೆ ಉಳಯುವ ಪ್ರಶ್ನೆ ಎಂದರೆ ಇಡೀ ಭಾರತದಲ್ಲಿ ಮೈಸೂರು ಹಲವಾರು ಕ್ಷೇತ್ರಗಳಲ್ಲಿ ಅಭಿವೃದ್ಧಿ ಪಥವೂ ಸೇರಿದಂತೆ ಮೊದಲ ಸ್ಥಾನದಲ್ಲಿತ್ತು. ಗಾಂಧಿಯಂಥಾ ನಾಯಕರೆ ಮೈಸೂರನ್ನು 'ರಾಮರಾಜ್ಯ'ವೆಂದೂ ನಾಲ್ವಡಿ ಕೃಷ್ಣರಾಜರನ್ನು 'ರಾಜರ್ಷಿ' ಯೆಂದೂ ಕರೆದಿದ್ದುಂಟು. ಏಕೆಂದರೆ ನಾಲ್ವಡಿಯವರ ಆಳ್ವಿಕೆಯ ಕಾಲದಲ್ಲಿಯೇ ಹೊಸ ಬಗೆಯ ಶಿಕ್ಷಣ ಮತ್ತು ಸಾಮಾನ್ಯ ಉದ್ಯೋಗಾವಕಾಶಗಳು ಸಂಘಟಿತವಾದವು. ಮಹಿಳೆಯರು ಮತ್ತು ವಿದ್ಯಾವಂತ ಯುವಕರು ತಮ್ಮ ಹಕ್ಕು ಬಾದ್ಯತೆಗಳಗಾಗಿ ಧ್ವನಿ ಎತ್ತಿದ್ದರು. ಜಾತಿ ಪದ್ಧತಿ ಅಸ್ಪೃಶ್ಯತೆ ಇನ್ನಿತರ ಸಾಮಾಜಿಕ ಅನಿಷ್ಟಗಳು ಮತ್ತು ಮೂಢನಂಬಿಕೆಗಳು ವಿಮರ್ಶೆಗೊಳಟ್ಟವು. ನಾಲ್ವಡಿಯವರ ಈ ಹೊಸ ಬೆಳವಣಿಗೆಗೆ ವೈಜ್ಞಾನಿಕವಾದ ಹಾಗೂ ಸಮತೋಲನವಾದ ನಿಲುವನ್ನು ಹೊಂದಿದ್ದರಿಂದ ಸಮಾಜ ಎಲ್ಲಾ ಕ್ಷೇತ್ರಗಳಲ್ಲೂ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಲು ಸಾಧ್ಯವಾಯಿತು. ಪರಿಣಾಮ ವಾಗಿ ಮೈಸೂರು ಸಂಸ್ಥಾನ ಭರತ ಖಂಡದಲ್ಲಿಯೇ ಒಂದು ಮಾದರಿ ಸಂಸ್ಥಾನವಾಗಿ ರೂಪು ಗೊಂಡಿತು.

ಶತಮಾನಗಳಿಂದಲೂ ಮೈಸೂರು ಸಂಸ್ಥಾನದಲ್ಲಿ ಜಾರಿಯಲ್ಲಿದ್ದ ಧಾರ್ಮಿಕ ಶಿಕ್ಷಣ ಪದ್ಧಿತಿಯಿಂದ ಹೊರಬಂದ ಮುಮ್ಮಡಿ ಕೃಷ್ಣರಾಜ ಒಡೆಯರು ಮೆಕಾಲೆ ಮಿನಿಟ್ಸ್‌ನಿಂದ ಕ್ರಿ.ಶ. ೧೮೩೩ರಲ್ಲಿ ಮೈಸೂರು ನಗರದಲ್ಲಿ 'ರಾಜಾ ಫ್ರೀ ಸ್ಕೂಲ್' ಎಂಬ ಇಂಗ್ಲಿಷ್ ಶಿಕ್ಷಣ ಪದ್ಧತಿಗೆ ಬುನಾದಿ ಹಾಕಿದರೆಂದು ಹೇಳಬಹುದು.[*] ಈ ಶಾಲೆಯು ಇಂದು ಮಹಾರಾಜ ಕಾಲೇಜ್ ಎಂಬ ಹೆಸರಿನಿಂದ ಶೋಭಿಸುತ್ತಿದೆ. ನಂತರ ಬ್ರಿಟಿಷ್ ಕಮಿಷನರ್ ಆಡಳಿತವು ಲಂಡನ್ ಮಿಷನ್ನಿನ ಎರಡು ಶಾಲೆಗಳನ್ನು ಬೆಂಗಳೂರಿನಲ್ಲಿ ಸ್ಥಾಪಿಸಿ ಅವುಗಳಿಗೆ ಸರ್ಕಾರದ ಸಹಾಯಧನ ನೀಡಿದರು. ೧೮೪೦ರಲ್ಲಿ ಮೈಸೂರಿನಲ್ಲಿ ವೆಸ್ಲಿಯನ್ ಮಿಷನ್ ಶಾಲೆಯು ಪ್ರಾರಂಭವಾಯಿತು. ಇದನ್ನು ಇಂದು ಕ್ರೈಸ್ಟ್ ಕಿಂಗ್ ಕಾನ್ವೆಂಟ್ (C.K.C) ಎಂದು ಕರೆಯಲಾಗುತ್ತಿದೆ. ಎಲ್ಲರಿಗೂ ಶಿಕ್ಷಣ ನೀಡುವ ಉದ್ದೇಶದಿಂದ ೧೮೫೫ರಲ್ಲಿ ಕಮಿಷನರ್ ಸರ್ಕಾರವು ಮಿಷನರಿ ಶಾಲೆಗಳಿಗೆ ೧೬,೫೦೦ ರೂಗಳನ್ನು ವಾರ್ಷಿಕ ಸಹಾಯಧನ ರೂಪದಲ್ಲಿ ಕೊಡಲಾರಂಭಿಸಿತು. ಕ್ರಿ.ಶ. ೧೮೩೧ರಿಂದ ೧೮೮೧ರವರೆಗೆ ಮೈಸೂರು ಸಂಸ್ಥಾನದಲ್ಲಿ ಅಸ್ತಿತ್ವದಲ್ಲಿದ್ದಂತಹ ಕಮಿಷನರ್ ಆಡಳಿತವು ಮೈಸೂರನ್ನು ಆಧುನಿಕ ಇತಿಹಾಸದತ್ತ ಮುಖ ಮಾಡುವಂತೆ ಮಾಡಿತ್ತೆನ್ನಬಹುದು. ಕಮಿಷನರ್ ಆಳ್ವಿಕೆಯು ಅಂತ್ಯಗೊಳ್ಳುವ ವೇಳೆಗೆ ಸಂಸ್ಥಾನವು ಒಂದು ಕ್ರಮಬದ್ಧ

ಶಾಂತ ಹಾಗೂ ಜವಾಬ್ದಾರಿ ಆಡಳಿತದೊಂದಿಗೆ ಹೊರಬಂದಿತು ಎಂದು ಇತಿಹಾಸಕಾರರು ಗುರ್ತಿಸಿರುವುದು ಸಮಂಜಸವಾಗಿದೆ.

೧೮೮೧ರಲ್ಲಿ ಮೈಸೂರಿನ ರಾಜರಾದ ೧೦ನೇ ಚಾಮರಾಜ ಒಡೆಯರ್‌ರವರು ಉತ್ತಮ ಪ್ರಜಾಸೇವಕ ಎಂದು ಹೆಸರು ಮಾಡಿದ್ದಾರೆ. ಭರತಖಂಡದಲ್ಲಿಯೆ ಪ್ರಜೆಗಳ ಆಳ್ವಿಕೆಗಾಗಿ 'ಪ್ರಜಾ ಪ್ರತಿನಿಧಿಸಭೆ' ಎಂಬ ಪ್ರಜೆಗಳ ಸಭೆಯನ್ನು ಸೃಷ್ಟಿಸಿ ಅದರ ನಿರ್ಣಯದ ಮೂಲಕ ಆಳ್ವಿಕೆ ನಡೆಸುವ ಪದ್ಧತಿಯನ್ನು ಜಾರಿಗೆ ತಂದದ್ದು ಇವರ ಮೊದಲ ಸಾಧನೆ. ಇಷ್ಟೇ ಅಲ್ಲದೆ ಶತಮಾನಗಳಿಂದಲೂ ಶಿಕ್ಷಣವೆಂದರೆ ತಮ್ಮದಲ್ಲವೆಂದೇ ನಂಬಿದ್ದಂತಹ ಪಂಚಮರಿಗೆ ಶಿಕ್ಷಣದ ಅವಕಾಶವನ್ನು ಸರ್ಕಾರದ ಮೂಲಕ ಕಲ್ಪಿಸಿಕೊಟ್ಟು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಪ್ರಯತ್ನಿಸಿದರು. ಇವರ ನಂತರ ಸಂಸ್ಥಾನದ ರಾಜರಲ್ಲಿಯೇ ದಲಿತೋದ್ಧಾರಕರೆಂದೇ ಹೆಸರಾಗಿರುವ ನಾಲ್ವಡಿ ಕೃಷ್ಣರಾಜ ಒಡೆಯರ್ ರವರು ಮೈಸೂರನ್ನು ಆಧುನಿಕ ಸಂಸ್ಥಾನವನ್ನಾಗಿ ಪರಿವರ್ತಿಸಿದರು.

ಅನಾದಿ ಕಾಲದಿಂದಲೂ ವಿದ್ಯೆ ಅಸ್ಪೃಶ್ಯರ ಬಳಿಗೆ ಬಂದಿರಲಿಲ್ಲ. ಅವರು ತಾವಾಗಿಯೇ ವಿದ್ಯೆ ಕಲಿಯಲು ಸಮಾಜದ ಸಮ್ಮತಿಯು ಇರಲಿಲ್ಲ. ಈ ಘೋರವಾದ ಪರಿಸ್ಥಿತಿಯನ್ನು ನಿವಾರಿಸಲು ಸರ್ಕಾರವು ೧೯ನೇ ಶತಮಾನದ ಕೊನೆಯ ಭಾಗ ಮತ್ತು ೨೦ನೇ ಶತಮಾನದ ಪ್ರಾರಂಭದಲ್ಲಿ ಅಸ್ಪೃಶ್ಯರಿಗಾಗಿಯೇ ಪ್ರತ್ಯೇಕ ಶಾಲೆಗಳನ್ನು ಹೊಸ್ಕೂರು ಮತ್ತು ನರಸಾಪುರಗಳಲ್ಲಿ ತೆರೆಯಿತು. ಈ ಶಾಲೆಗಳು 'ಪಂಚಮ' ಶಾಲೆಗಳೆಂದು ಹೆಸರಾದವು. ೨೦ನೇ ಶತಮಾನದ ಪ್ರಾರಂಭದ ವೇಳೆಗೆ ಸರ್ಕಾರಿ ಶಾಲೆಗಳಲ್ಲಿ ಪಂಚಮರನ್ನು ಶಾಲೆಗಳಿಗೆ ಸೇರಿಸಲು ದೃಢ ನಿರ್ಧಾರ ಮಾಡಿತು. ಈ ಮಹತ್ವದ ಕಾರ್ಯ ಸಾಧನೆಗಾಗಿ ಪೋಲೀಸರ ನೆರವನ್ನು ಸಹ ಪಡೆಯಲಾಯಿತು. ದಿವಾನರಾದ ಶೇಷಾದ್ರಿ ಅಯ್ಯರ್ ಕಾಂತರಾಜ ಅರಸು ಮತ್ತು ಮಿರ್ಜಾ ಇಸ್ಮಾಯಿಲ್‌ರವರ ಆಡಳಿತದ ಕಾಲದಲ್ಲಿ ಪಂಚಮರಿಗೆ (ಹೊಲೆಯ ಮತ್ತು ಮಾದಿಗ) ಶಿಕ್ಷಣ ನೀಡುವ ಪ್ರಶ್ನೆ ಹೆಚ್ಚು ಮಹತ್ವ ಪಡೆಯಿತು. ಇದಕ್ಕಾಗಿ ಅನೇಕ ಕ್ರಮಗಳನ್ನು ಕೈಗೊಂಡು ಸೂಕ್ತ ನಿರ್ಧಾರಗಳನ್ನು ಕೈಗೊಂಡು ಪ್ರಗತಿಯತ್ತಾ ಕೊಂಡ್ಯೊಯ್ದರು.

ದಲಿತರು ಸಾರ್ವಜನಿಕ ಶಾಲೆಗಳಲ್ಲಿ ಸೇರಿ ವಿದ್ಯೆ ಕಲಿಯಲು ಸರ್ಕಾರ ತಾತ್ವಿಕವಾಗಿ ಒಪ್ಪಿದರೂ ಸಮಾಜದ ವಿವಿಧ ವಲಯಗಳಲ್ಲಿ ಅದಕ್ಕೆ ಸಾಕಷ್ಟು ವಿರೋಧವಿತ್ತು. ಇದಕ್ಕಾಗಿಯೇ ಸರ್ಕಾರವು ದಲಿತರಿಗಾಗಿಯೇ ಪ್ರತ್ಯೇಕ ಶಾಲೆಗಳನ್ನು ತೆರೆಯಲು ಹೆಚ್ಚಿನ ಆಸಕ್ತಿ ತೋರಿತು. ಅನೇಕ ಪಂಚಮ ಶಾಲೆಗಳು ಕ್ರೈಸ್ತ ಮಿಷಾನ್ ಸಂಸ್ಥೆಗಳ ಆಶ್ರಯದಲ್ಲಿ ನಡೆಯುತ್ತಿದ್ದವು. ಪರಿಣಾಮವಾಗಿ ೧೮೯೯೧ನೇ ಸಾಲಿನಲ್ಲಿ ಮೈಸೂರು ಅನೇಕಲ್ ಮತ್ತು ಹಾಸನಗಳಲ್ಲಿ ಕ್ರೈಸ್ತ ಧರ್ಮ ಪ್ರಚಾರಕರೂ ಶಾಲೆಗಳನ್ನು ತೆರೆದರು. ಇವೆಲ್ಲವು ಅನುದಾನ ಪಡೆದ ಸಂಸ್ಥೆಗಳಾಗಿದ್ದವು. ಹಾಗಾಗಿ ೧೮೯೧ರ ವೇಳೆಗೆ ವಿಶೇಷ ಶಾಲೆಗಳು ಮತ್ತು ಸಾಮಾನ್ಯ ಶಾಲೆಗಳಲ್ಲಿ ಒಟ್ಟು ೩೮೯ ಬಾಲಕರು, ೩೫ ಬಾಲಕಿಯರು ಓದುತ್ತಿದ್ದರು. ೧೯೦೦-೦೧ರಲ್ಲಿ ಬಾಲಕರ ಸಂಖ್ಯೆ ೨,೨೦೧ ಮತ್ತು ಬಾಲಕಿಯರ ಸಂಖ್ಯೆ ೩೨೨ ಇದ್ದದ್ದು, ೧೯೧೦-೧೧ರ ವೇಳೆಗೆ ಬಾಲಕರ ಸಂಖ್ಯೆ ೨,೮೯೨ಕ್ಕೂ ಮತ್ತು ಬಾಲಕರಿಯರ ಸಂಖ್ಯೆ ೩೪೭ಕ್ಕೂ

ಏರಿತ್ತು.[೬] ೧೯೧೩ರಲ್ಲಿ ವಿ.ಎಸ್. ನರಸಿಂಹ ಅಯ್ಯಂಗಾರ್‌ರವರ ಶ್ರಮದಿಂದ 'ದಲಿತ ಶಿಕ್ಷಣ ಮಿಶನ್' ಎಂಬ ಸಂಸ್ಥೆಯು ಸ್ಥಾಪನೆಯಾಯಿತು.[೭] ಇದು ೧೯೧೫ರ ವೇಳೆಗೆ ಗ್ರಾಮೀಣ ಪ್ರದೇಶಗಳಲ್ಲಿ ೬ ನಗರ ಪ್ರದೇಶದಲ್ಲಿ ೯ ಒಟ್ಟು ೧೫ ಶಾಲೆಗಳನ್ನು ನಡೆಸುತ್ತಿತ್ತು. ಈ ಸಂಸ್ಥೆಗೆ ಸ್ವತಃ ಮಹಾರಾಣಿ ವಾಣಿ ವಿಲಾಸ ಸನ್ನಿದಾನದವರು ಪೋಷಕರಾಗಿದ್ದರು. ನಂತರ ಸರ್ಕಾರವು ೧೯೧೫ರಲ್ಲಿ ಒಂದು ಸುತ್ತೋಲೆಯನ್ನು ಹೊರಡಿಸಿ "ಯಾರನ್ನು ಸಾಮಾಜಿಕ ಮತ್ತು ಧಾರ್ಮಿಕ ನಿರ್ಬಂಧದ ಆಧಾರದ ಮೇಲೆ ಸಾರ್ವಜನಿಕ ಶಾಲೆಗಳಿಗೆ ಸೇರಿಸಿಕೊಳ್ಳುವುದನ್ನು ನಿಷೇಧಿಸಕೂಡದು" ಎಂದು ಆಜ್ಞೆ ಹೊರಡಿಸಿತು.[೮] ಈ ನಿಟ್ಟಿನಲ್ಲಿ ಸರ್ಕಾರ ಇನ್ನೂ ಹೆಚ್ಚು ಹೆಚ್ಚು ಪಂಚಮ ಶಾಲೆಗಳನ್ನು ಪ್ರಾರಂಭಿಸಿತು. ಹಾಗಾಗಿ ೧೯೧೦೧೧ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಪಂಚಮರಿಗಾಗಿ ೬೭ ಸರ್ಕಾರಿ ಶಾಲೆಗಳು ಮತ್ತು ೩೭ ಅನುದಾನಿತ ಶಾಲೆಗಳು ಮತ್ತು ೪ ಅನುಧಾನರಹಿತ ಶಾಲೆಗಳನ್ನು ಸ್ಥಾಪಿಸಲಾಗಿತ್ತು. ಇವುಗಳಲ್ಲಿ ೧೮ ಗ್ರಾಮೀಣ ಪ್ರದೇಶಗಳಲ್ಲಿಯೂ, ಉಳಿದವು ನಗರ ಪ್ರದೇಶದಲ್ಲಿದ್ದವು. ೧೮ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ೧೧ ಅನುದಾನಿತ ಶಾಲೆಗಳಾಗಿದ್ದರೆ ಒಂದು ಅನುದಾನರಹಿತ ಶಾಲೆಯಾಗಿದ್ದಿತು. ನಂತರ ೧೯೧೫-೧೬ರಲ್ಲಿ ೧೭೧ ಸರ್ಕಾರಿ ಪಂಚಮ ಶಾಲೆಗಳು ಸ್ಥಾಪನೆಗೊಂಡು ಅವುಗಳಲ್ಲಿ ೧೦೮ ಅನುದಾನಿತ ಶಾಲೆಗಳು ಮತ್ತು ೮೮ ಅನುದಾನಿರಹಿತ ಶಾಲೆಗಳು ಅಸ್ತಿತ್ವಕ್ಕೆ ಬಂದವು.[೯] ಇವುಗಳಲ್ಲಿ ೬೩ ಶಾಲೆಗಳಿಗೆ ಅನುಮೋದನೆ ದೊರಕಿತು. ಮೈಸೂರು ಕೋಲಾರ ಚಿತ್ರದುರ್ಗ ಬೆಂಗಳೂರು ತುಮಕೂರು ಮತ್ತು ಚಿಕ್ಕಮಗಳೂರಿನಲ್ಲಿ ಪಂಚಮ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ವಸತಿ ಶಾಲೆಗಳನ್ನು ಪ್ರಾರಂಭಿಸಿತು. ಈ ರೀತಿಯಾಗಿ ದಲಿತ ವಿದ್ಯಾರ್ಥಿಗಳಿಗೆ ಶಿಕ್ಷಣದ ಅವಕಾಶವನ್ನು ಹೆಚ್ಚಿಸುವ ಕ್ರಮಗಳು ಸರ್ಕಾರದಿಂದ ಜರುಗಿದವು.

ದಲಿತರು ಅಂದರೆ ಅಸ್ಪೃಶ್ಯರು ಸರ್ಕಾರಿ ಅಥವಾ ಖಾಸಗಿ ಶಾಲೆಗಳಲ್ಲಿ ಇತರೆ ಸವರ್ಣೀಯರೊಂದಿಗೆ ವಿದ್ಯೆಕಲಿಯಲು ಸಾಕಷ್ಟು ಸಾಮಾಜಿಕ ಪ್ರತಿರೋಧವಿತ್ತು. ಹೀಗೆ ವಿರೋಧರಿಸುತ್ತಿದ್ದವರಲ್ಲಿ ಎಲ್ಲ ಸವರ್ಣೀಯ ಜಾತಿಯವರೇ ಸೇರಿರುತ್ತಿದ್ದರು. ಬ್ರಾಹ್ಮಣರು ವಿಶೇಷವಾಗಿ ಅಸ್ಪೃಶ್ಯರೊಂದಿಗೆ ತಮ್ಮ ಮಕ್ಕಳು ವ್ಯಾಸಂಗ ಮಾಡುವುದನ್ನು ಸಹಿಸುತ್ತಿರಲಿಲ್ಲ. ಅವರ ಈ ಮನೋಭಾವನೆಗೆ ಶತಮಾನಗಳಿಂದಲೂ ಅವರು ಬೆಳೆಸಿಕೊಂಡು ಬಂದಿದ್ದ ಪ್ರತ್ಯೇಕ ಸಾಂಸ್ಕೃತಿಕ ಆವರಣ ಮತ್ತು ಪಂಚಮರ ಬಗ್ಗೆ ಸಮಾಜ ಹೊಂದಿದ್ದ ಕೀಳು ಭಾವನೆಗಳು ಕಾರಣವಾಗಿದ್ದವು. ೧೯೧೫ರಲ್ಲಿ ಹೊರಡಿಸಿದ್ದ ಶಾಲೆಗಳನ್ನು ಎಲ್ಲ ವರ್ಗದವರಿಗೂ ತೆರೆದಿಡುವ ಸುತ್ತೋಲೆಗೆ ಶೃಂಗೇರಿಯಲ್ಲಿ ಪ್ರಬಲ ವಿರೋಧ ಕಂಡುಬಂದಿತು. ಏಕೆಂದರೆ ಅಲ್ಲಿನ ಆಂಗ್ಲೋ ಎನರ್ನಾಕ್ಯೂಲರ್ ಶಾಲೆಗೆ ಒಬ್ಬ ದಲಿತ(ಹಳೆ ಪೈಕಾ) ವಿದ್ಯಾರ್ಥಿಯನ್ನು ಸೇರಿಸಲಾಗಿತ್ತು. ಅದನ್ನು ಪ್ರತಿಭಟಿಸಿ ೪೦೦ ವೈದಿಕ ಬ್ರಾಹ್ಮಣರು ಒಂದು ಸಮಿತಿ ರಚಿಸಿಕೊಂಡು ಸರ್ಕಾರಕ್ಕೆ ಅಹವಾಲು ಸಲ್ಲಿಸಿದರು. ಈ ಬಗ್ಗೆ ಶೃಂಗೇರಿ ಜಹಗೀರಿನ ಎಜೆಂಟರಿಗೂ ಹಾಗೂ ಸರ್ಕಾರದ ಇನ್ಸ್‌ಪೆಕ್ಟರ್ ಜನರಲ್‌ರ ನಡುವೆ ಅನೇಕ ಪತ್ರ ವ್ಯವಹಾರಗಳು ನಡೆದವು. ಎಂ. ಶಾಮರಾವ್‌ರವರು ಶಿಕ್ಷಣದ ಇನ್ಸ್‌ಪೆಕ್ಟರ್ ಜನರಲ್ ಆಗಿದ್ದಾಗ ಪ್ರಾರಂಭವಾದ ಈ ವಿವಾದ ೧೯೧೬ರ ಮಧ್ಯವಧಿಯಲ್ಲಿ ಸಿ.ಆರ್. ರೆಡ್ಡಿಯವರು ಆ ಹುದ್ದೆಗೆ ಬಂದಾಗಲೂ ಮುಂದುವರೆದಿತ್ತು. ಸರ್ಕಾರ ಈ ಸುತ್ತೋಲೆಯನ್ನು ಹಿಂದಕ್ಕೆ ಪಡೆಯಲು ಒಪ್ಪಲಿಲ್ಲ. ಕೊನೆಗೆ ಜಹಗೀರುದಾರರು

ಪ್ರತ್ಯೇಕ ಆಂಗ್ಲೋ ವರ್ನಾಕ್ಯೂಲರ್ ಶಾಲೆಯನ್ನು ಸ್ಥಾಪಿಸಿಕೊಳ್ಳಲು ಸರ್ಕಾರದ ಅನುಮತಿ ಕೇಳಿದರು. ಅದಕ್ಕೆ ಸರ್ಕಾರ ಕೆಲವು ಷರತ್ತುಗಳ ಮೇಲೆ ಅನುಮತಿ ನೀಡಿತು. ಆದರೆ ಆ ಶಾಲೆಗೆ ಸರ್ಕಾರ ಅನುದಾನ ನೀಡಲಿಲ್ಲ. ಸರ್ಕಾರ ಈ ಬಗ್ಗೆ ೧೯೧೮ರ ನವೆಂಬರ್ ೨೯ರಂದು ಒಂದು ಆದೇಶ ಹೊರಡಿಸಿ ರೈಲು ಆಸ್ಪತ್ರೆ ನ್ಯಾಯಾಲಯಗಳಂತೆಯೇ ಶಾಲೆಗಳು ಸಾರ್ವಜನಿಕ ಸಂಸ್ಥೆಗಳೆಂದು ಘೋಷಿಸಿತು. ಈ ರೀತಿ ಸರ್ಕಾರ ಅಸ್ಪೃಶ್ಯರು ವಿದ್ಯೆ ಕಲಿಯುವ ಹಕ್ಕನ್ನು ಎತ್ತಿ ಹಿಡಿಯಿತು.

ಅಸ್ಪೃಶ್ಯತೆ ಎನ್ನುವ ಪಿಡುಗು ಕೇವಲ ವ್ಯಕ್ತಿಗತ ಕಾರಣದಿಂದ ಬಂದಿದ್ದಾಗಿರದೆ ಪರಂಪರಾಗತ ಪೂರ್ವಗ್ರಹ ಭಾವನೆಯಿಂದ ಬಂದುದಾಗಿದೆ. ಆದ್ದರಿಂದ ಆಗ ಬ್ರಾಹ್ಮಣೇತರ ಚಳುವಳಿ ಒಂದು ಕಡೆ ಬಿರುಸಾಗಿದ್ದರೂ ಸಹ ಅಸ್ಪೃಶ್ಯರ ಶಿಕ್ಷಣದ ವಿಷಯದ ಬಗ್ಗೆ ಬ್ರಾಹ್ಮಣರಲ್ಲದೆ ಇತರ ಶೂದ್ರ ಸವರ್ಣೀಯ ಜಾತಿಗಳವರೂ ವಿರೋಧ ವ್ಯಕ್ತಪಡಿಸಿರುವುದಕ್ಕೆ ಅನೇಕ ಆಧಾರಗಳಿವೆ. ೧೯೧೮-೧೯ ಚಿತ್ರದುರ್ಗದ ಆಂಗ್ಲೊ ವರ್ನಾಕ್ಯೂಲರ್ ಶಾಲೆಗೆ ಮಾದಿಗರ ಹುಡುಗನೊಬ್ಬನನ್ನು ಮುಖ್ಯೋಪಾಧ್ಯಾಯರು ಒತ್ತಾಸೆ ನೀಡಿ ಸೇರಿಸಿದಾಗಲೂ ಇದೇ ರೀತಿ ಪ್ರತಿಭಟನೆ ವ್ಯಕ್ತವಾಯಿತು. ಈ ಸಮಯದಲ್ಲಿ ಬಹುತೇಕ ಸವರ್ಣೀಯರು ಈ ಪ್ರತಿಭಟನೆಯಲ್ಲಿ ಸೇರಿದ್ದರು. ಈ ಪ್ರತಿಭಟನೆಗಳಿಗೆ ಸೊಪ್ಪು ಹಾಕದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಆದರ್ಶ ಸರ್ಕಾರವು ಅಸ್ಪೃಶ್ಯರು ಸಾರ್ವಜನಿಕ ಶಾಲೆಗಳಿಗೆ ಸೇರುವ ಹಕ್ಕನ್ನು ಮಾನ್ಯ ಮಾಡಿತು. ನಂತರ ಪ್ರತಿಭಟನೆಗಳು ಹೆಚ್ಚಾಗಿ ನಡೆಯದೆ ತಮ್ಮಲ್ಲಿಯೇ ಈ ಕ್ರಮದ ಬಗ್ಗೆ ಮನವರಿಕೆ ಮಾಡಿಕೊಂಡು ಸುಮ್ಮನಾಗಬೇಕಾಯಿತು.

ಮೈಸೂರು ಸಂಸ್ಥಾನವು ೧೩೩೯ರಲ್ಲಿ ಸ್ಥಾಪನೆಯಾಗಿ ಭಾರತಕ್ಕೆ ಬ್ರಿಟಿಷರಿಂದ ಸ್ವಾತಂತ್ರ್ಯ ಬರುವವರೆಗೂ ಆಳ್ವಿಕೆ ನಡೆಸಿದರೂ ಸಹ ಸಾಮಾಜಿಕ ಬೆಳುವಣಿಗೆಯ ಹಿತದೃಷ್ಟಿಯಿಂದ ೧೮೯೫ರಿಂದ ೧೯೪೦ರವರೆಗೆ ಸುಮಾರು ೪೬ ವರ್ಷಗಳ ಸುಧೀರ್ಘ ಆಡಳಿತ ನಡೆಸಿದ ದಲಿತರ ಬಂಧು ಎಂದೇ ಹೆಸರಾಗಿರುವ ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆ ಕಾಲವನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡುವ ಕಾಲವೆಂದೇ ಹೇಳಬಹುದು. ಶತಶತಮಾನಗಳಿಂದಲೂ ಪಶುಗಳಿಗಿಂತ ಹೀನಾಯವಾಗಿ ಕಡೆಗಣಿಸಲಾಗಿದ್ದಂತಹ ದಲಿತರ ಪುನಶ್ಚೇತನದ ದೃಷ್ಟಿಯಿಂದ ಇದು ತುಂಬ ಮಹತ್ವದ ಕಾಲವಾಗಿದೆ. ಅಸ್ಪೃಶ್ಯರ ಸಮಸ್ಯೆಯನ್ನು ಬಗೆಹರಿಸುವ ದಿಶೆಯಲ್ಲಿ ಸರ್ಕಾರ ಅಷ್ಟೋ ಇಷ್ಟೋ ಕ್ರಮಗಳನ್ನು ಕೈಗೊಂಡಿದ್ದನ್ನು ನಾವು ಕಾಣಬಹುದಾಗಿದೆ. ಸರ್ಕಾರದ ವಿರುದ್ಧ ಎಲ್ಲಾ ಬಲಾಢ್ಯ ಜಾತಿಯವರು ನಿಂತ ಸನ್ನಿವೇಶದಲ್ಲಿ ತನ್ನ ಹಿತದೃಷ್ಟಿಯಿಂದಲೇ ಸರ್ಕಾರವು ಕೆಲವು ಕ್ರಮಗಳನ್ನು ಕೈಗೊಂಡು ಅಸ್ಪೃಶ್ಯರ ಬಹು ವಿಧದ ಶೋಷಣೆಯಿಂದ ಅವರನ್ನು ಪಾರು ಮಾಡಲು ಪ್ರಯತ್ನಿಸಿತು. ಏಕೆಂದರೆ ದಲಿತರ ಸಮಸ್ಯೆ ಎಲ್ಲಾ ಸಮಸ್ಯೆಗಳಿಗಿಂತಲೂ ಅತ್ಯಂತ ಕಠಿಣವಾದ ಸಮಸ್ಯೆಯಾಗಿತ್ತು. ಅಧಿಕಾರಶಾಹಿಗಳ ದಬ್ಬಾಳಿಕೆ ಹಾಗೂ ಕುತಂತ್ರದ ವಿರುದ್ಧ ಅವರು ಪ್ರಶ್ನಿಸುವ ಪ್ರಯತ್ನದಲ್ಲಿದ್ದರು. ಸಹಸ್ರಾರು ವರ್ಷಗಳಿಂದ ತಮ್ಮ ಕೀಳು ವ್ಯಕ್ತಿತ್ವಗಳನ್ನು ಮೂಕವಾಗಿ ಪಾಲಿಸಿಕೊಂಡು ಬರುತ್ತಿದ್ದಂತಹ ಲಕ್ಷಾಂತರ ಜನರ ಧ್ವನಿ ಮೆಲ್ಲಮೆಲ್ಲಗೆ ಪುಟಿಯ ತೊಡಗಿತು. ನಾಲ್ವಡಿ ಕೃಷ್ಣರಾಜ ಒಡೆಯರು ಕೆಲವು ಸುಧಾರಣಾ ಕ್ರಮಗಳು ದಲಿತರನ್ನು ಸವರ್ಣೀಯರ ಕ್ರೂರ ಮತ್ತು ಅಸಮರ್ಥನೀಯ ರೂಢಿ ಮತ್ತು ಪರಂಪರೆಗಳಿಂದ ಎದ್ದು ಬರಲು ಪ್ರಯತ್ನಿಸುವಂತೆ ಮಾಡಿತು. ಆದರೆ ಈ ನತದೃಷ್ಟ ಮಾನವ ಪ್ರಾಣಿಗಳಿಗೆ ಅದು ಯಾವಾಗಲೂ

ನಿರಾಶೆಯ ಕರಾಳ ಸನ್ನಿವೇಶ ಆಗಿರುತ್ತಿತ್ತು. ಏಕೆಂದರೆ ಅವರ ಕೂಗಿಗೆ ಸರ್ಕಾರ ಸ್ಪಂಧಿಸಿದರೂ ಸಹ ಸವರ್ಣೀಯರ ದಬ್ಬಾಳಿಕೆಯನ್ನು ಸವಾಲಾಗಿ ತೆಗೆದುಕೊಂಡು ಸರ್ಕಾರ ಈ ಜನರ ಅಭಿವೃದ್ಧಿ ಕಾರ್ಯ ಮಾಡುವ ಧೈರ್ಯ ಮಾಡುತ್ತಿರಲಿಲ್ಲ.

ಲಕ್ಷಾಂತರ ದಲಿತ ಜನರ ಧ್ವನಿ ಮೆಲ್ಲಮೆಲ್ಲನೆ ಪುಟಿಯುಂತಾಗಲು ಕಾರಣ ಬ್ರಿಟಿಷರು. ಕಾರಣ ಶಿಕ್ಷಣವನ್ನು ಪ್ರಾಥಮಿಕ ಶಾಲೆಯಿಂದ ಹಿಂದು ವಿಶ್ವವಿದ್ಯಾಲಯದವರೆಗೂ ಸಾರ್ವತ್ರೀಕರಿಸಿ ಬ್ರಿಟಿಷ್ ಮಾದರಿಯಲ್ಲಿ ಭಾರತದಾದ್ಯಂತ ಜಾರಿಗೊಳಿಸಿದ್ದು. ಈ ಹಿನ್ನಲೆಯಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಸಂಸ್ಥಾನದಲ್ಲಿ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿ ಸಮಾಜದ ಎಲ್ಲಾ ವರ್ಗದ ಜನರಿಗೂ ಶಿಕ್ಷಣ ದೊರೆಯುವಂತೆ ಮಾಡಿದರು. ಪರಿಣಾಮವಾಗಿ ನಾಲ್ವಡಿ ಕೃಷ್ಣರಾಜ ಒಡೆಯರ ಜನಪರ ಶೈಕ್ಷಣಿಕ ಕಾರ್ಯಗಳಿಗಿಂದಾಗಿ ದಲಿತರು ಶಿಕ್ಷಣ ಪಡೆದು ತಮ್ಮ ಹಕ್ಕು ಬಾದ್ಯತೆಗಳನ್ನು ಪ್ರಶ್ನಿಸು ವಂತಾಯಿತು. ಜೊತೆಗೆ ದೇಶಿಯ ರಾಜ್ಯಗಳಲ್ಲಿಯೇ ಮೊಟ್ಟಮೊದಲ ಬಾರಿಗೆ ಉನ್ನತ ಶಿಕ್ಷಣಕ್ಕಾಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ ಕೀರ್ತಿ ಮೈಸೂರು ಸಂಸ್ಥಾನಕ್ಕೆ ಸಲ್ಲುತ್ತದೆ. ವಿಶ್ವವಿದ್ಯಾಲಯದ ಸ್ಥಾಪನೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರೆ ಸ್ವತಃ ಆಸಕ್ತಿ ವಹಿಸಿ ದಿವಾನ್ ಸರ್.ಎಂ. ವಿಶ್ವೇಶ್ವರಯ್ಯ ನವರ ಶೈಕ್ಷಣಿಕ ಕ್ಷೇತ್ರದ ನೆರವಿನೊಂದಿಗೆ ಮೈಸೂರು ವಿಶ್ವವಿದ್ಯಾಲಯದ ಸ್ಥಾಪನೆಗೆ ಕಾರಣ ಕರ್ತರಾದರು. ನಾಲ್ವಡಿ ಕೃಷ್ಣರಾಜರು ಶಿಕ್ಷಣದ ಬಗ್ಗೆ ಅದರಲ್ಲಿಯೂ ಉನ್ನತ ಶಿಕ್ಷಣದ ಬಗ್ಗೆ ಹೊಂದಿದ್ದ ಅಪಾರ ಮಮತೆ ಹೊಂದಿದ್ದರು ಎಂಬುದಕ್ಕೆ ಉದಾಹರಣೆಯಾಗಿ ೧೯೧೭ರ ಅಕ್ಟೋಬರ್ ೧೨ರಂದು ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸಭೆಯ ಉದ್ಘಾಟನೆಯಲ್ಲಿ ಇದರ ಗುರಿ ಮತ್ತು ಉದ್ದೇಶವನ್ನು ಮಂಡಿಸುತ್ತಾ "ಈ ಉನ್ನತ ವಿಶ್ವವಿದ್ಯಾನಿಲಯವು ರಾಜ್ಯದ ಮೂಲೆ ಮೂಲೆಯಲ್ಲಿ ಅಡಗಿರುವ ಅಜ್ಞಾನ ಅಂಧಕಾರಗಳನ್ನು ತೊಡೆಯುವ ಜ್ಯೋತಿಯಾಗಬೇಕು. ಅಲ್ಲದೆ ಇತರ ವಿಶ್ವವಿದ್ಯಾನಿಲಯಗಳ ಗೌರವ ಹಾಗೂ ಮಾನ್ಯತೆಗೆ ಪಾತ್ರವಾಗಬೇಕು. ಈ ಹಿನ್ನೆಲೆಯಲ್ಲಿ ಬೋಧನೆ ಪರೀಕ್ಷಾ ಮಟ್ಟಗಳು ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದಾಗ ಕುಗ್ಗಬಾರದು. ನಮ್ಮ ವಿದ್ಯಾರ್ಥಿಗಳು ಕೇವಲ ಕಲಿತರವರಾಗದೇ ಶೀಲವಂತರಾಗಿ ಸಂಸ್ಕರಣ ಮುದ್ರೆಯನ್ನು ಹೊತ್ತು ಹೊರಗೆ ಬರುವಂತಾಗ ಬೇಕು. ಅಷ್ಟೇ ಅಲ್ಲದೆ ಕನ್ನಡ ಭಾಷೆ ಸಾಹಿತ್ಯಗಳನ್ನು ಬೆಳೆಸುವ ದಿಕ್ಕಿನಲ್ಲಿ ವಿಶೇಷ ಗಮನಹರಿಸ ಬೇಕು"[೧೦] ಎಂದು ಹೇಳಿ ಅಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆ ನಾಂದಿ ಹಾಡಿದರು. ಇವರ ಹಾರೈಕೆಯ ಫಲಶೃತಿ ಇಂದು ಮೈಸೂರು ವಿಶ್ವವಿದ್ಯಾನಿಲಯವು ಪ್ರಪಂಚದ ವಿಶ್ವವಿದ್ಯಾಲಯಗಳಲ್ಲಿ ಒಂದಾಗಿ ಪ್ರಮುಖ ಸ್ಥಾನದಲ್ಲಿ ಮುನ್ನಡೆಯುತ್ತಿದೆ.

ಈ ವೇಳೆಗಾಗಲೇ ಸಮಾಜದ ಎಲ್ಲಾ ಜನಾಂಗದ ಜನರು ಉನ್ನತ ಶಿಕ್ಷಣ ಪಡೆಯುವಲ್ಲಿ ಮುಂದಾದರು. ಹಾಗಾಗಿ ೧೯೧೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವದ ಪ್ರಾರಂಭೋತ್ಸ ವನ್ನು ನೆರವೇರಿಸುತ್ತಾ ಅವರಾಡಿರುವ ಮಾತುಗಳಲ್ಲಿ ಒಂದಾದ "ಈ ವಿಶ್ವವಿದ್ಯಾನಿಲಯವು ಸ್ಥಾಪನೆಯಾಗಿರುವುದು ಹೆಚ್ಚಿನ ಸಂಖ್ಯೆಯಲ್ಲಿರುವ ಅದೃಷ್ಟ ಹೀನರಿಗಾಗಿಯೇ ಹೊರತು, ಕಡಿಮೆ ಸಂಖ್ಯೆಯಲ್ಲಿರುವ ಅದೃಷ್ಟವಂತರಿಗಿಲ್ಲ. ಪ್ರಾಧ್ಯಾಪಕರುಗಳು ಸಾಮಾನ್ಯ ಜನತೆಯ ಮಟ್ಟಕ್ಕಿಳಿದು ತಮ್ಮ ತಿಳುವಳಿಕೆಯನ್ನು ಅವರೊಡನೆ ಹಂಚಿಕೊಳ್ಳಬೇಕು" ಎಂದು ಕರೆ ನೀಡಿದರು. ಮಹಿಳೆಯರ

ಶಿಕ್ಷಣದ ಬಗ್ಗೆ ಅವರು ಹೊಂದಿದ್ದ ಅಭಿಪ್ರಾಯವೆಂದರೆ "ಗಂಡಸು ವಿದ್ಯಾವಂತನಾದರೆ ಕೇವಲ ಒಬ್ಬ ಮಾತ್ರ ವಿದ್ಯಾವಂತನಾದಂತೆ; ಆದರೆ ಒಬ್ಬ ಮಹಿಳೆಯು ವಿದ್ಯಾವಂತೆಯಾದರೆ ಇಡೀ ಸಂಸಾರವೇ ವಿದ್ಯಾವಂತರಾದಂತೆ" ಎಂಬ ಅಮೂಲ್ಯ ಸೂತ್ರವನ್ನು ಮುಂದಿಟ್ಟು ಗ್ರಾಮಾಂತರ ಮಹಿಳೆಯರ ಶಿಕ್ಷಣಕ್ಕೆ ವಿಶೇಷ ಪ್ರೋತ್ಸಾಹ ನೀಡಿದರು. ಈ ಮೇಲಿನ ನಾಲ್ವಡಿಯವರ ಮಾತುಗಳಲಿ ಸಮಾಜದಲ್ಲಿ ಹಿಂದುಳಿದವರ ನಿರ್ಗತಿಕರ ದೀನದಲಿತರ ಬದುಕನ್ನು ಶಿಕ್ಷಣದ ಮೂಲಕ ಹಸನು ಗೊಳಿಸುವ ಮತ್ತು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಹಿನ್ನೆಲೆಯಲ್ಲಿ ಹೇಳಿರಬಹುದು. ಇದಲ್ಲದೆ ಸರ್ಕಾರವು ಪಂಚಮ ವರ್ಗದ ವಿದ್ಯಾರ್ಥಿಗಳಿಗೆ ಅವರ ವಿದ್ಯಾಭ್ಯಾಸಕ್ಕೆ ಅನುಕೂಲ ವಾಗುವಂತೆ ವಿದ್ಯಾರ್ಥಿ ವೇತನವನ್ನು ಜಾರಿಗೆ ತಂದಿತು. ಇದಕ್ಕಾಗಿಯೇ ಪ್ರತ್ಯೇಕವಾಗಿ ೧೫ ಸಾವಿರ ರೂ.ಗಳ ವಾರ್ಷಿಕ ಅನುದಾನವನ್ನು ಮಂಜೂರು ಮಾಡಿತು. ಇಷ್ಟೇ ಅಲ್ಲದೆ ಇತರೆ ಹಿಂದುಳಿದ ವರ್ಗಗಳ ಹೆಣ್ಣು ಮಕ್ಕಳಿಗಾಗಿ ವಿದ್ಯಾರ್ಥಿ ವೇತನವನ್ನು ಸಹ ಸೃಷ್ಟಿಸಲಾಯಿತು.

ಮಹಾರಾಜರ ಅಂದಿನ ಈ ದೃಢಸಂಕಲ್ಪಗಳಿಂದ ಹಾಗೂ ನಿಷ್ಠಾವಂತ ಅಧಿಕಾರಿಗಳ ಪರಿಶ್ರಮ ದಿಂದಾಗಿ ಶತಮಾನಗಳಿಂದ ಭಾರತೀಯ ಸಮಾಜದಲ್ಲಿ ಬಳಕೆಯಲ್ಲಿದ್ದಂತಹ ಅಸ್ಪೃಶ್ಯ ವರ್ಗದ ಮಕ್ಕಳ ಶಾಲೆಯ ಪ್ರವೇಶದ ಫಲದಿಂದಲೇ ಇಂದು ರಾಜ್ಯದಲ್ಲಿ ದಲಿತರ ಶಿಕ್ಷಣವು ಬೇರೆ ರಾಜ್ಯಗಳಿಗೆ ಹೋಲಿಸಿದರೆ ಉತ್ತಮ ಸ್ಥಿತಿಯಲ್ಲಿ ಮುನ್ನಡೆಯುತ್ತಿದೆ. ನಾಲ್ವಡಿ ಕೃಷ್ಣರಾಜ ಒಡೆಯರ ಪ್ರಮುಖ ಕಾರ್ಯಸಾಧನೆಗಳಲ್ಲಿ ಇದೊಂದು ಮಹಕಾರ್ಯವೇ ಸರಿ. ಏಕೆಂದರೆ ಸಂಸ್ಥಾನದಲ್ಲಿ ಮೇಲ್ವರ್ಗದ ಜನರ ಸಂಪೂರ್ಣವಾದ ವಿರೋಧಗಳಿದ್ದರೂ ಸಹ ದೇಶದಲ್ಲಿ ಪ್ರಪ್ರಥಮವಾಗಿ ಹಿಂದುಳಿದ ಅದರಲ್ಲಿಯೂ ಸಮಾಜದ ಪರಿಜ್ಞಾನಕ್ಕೆ ಬರದೆ ಇದ್ದಂತಹ ಅಸ್ಪೃಶ್ಯವರ್ಗದ ಜನರಿಗೆ ಪಕ್ಷ ಹಾಗೂ ಜಾತಿರಹಿತವಾದ ನ್ಯಾಯವನ್ನು ತಮ್ಮ ಆಡಳಿತದಲ್ಲಿ ಒದಗಿಸಿಕೊಟ್ಟಿದ್ದು. ಭಾರತಕ್ಕೆ ಸ್ವಾತಂತ್ರ ಬಂದು ೬೦ ವರ್ಷಗಳು ಕಳೆದವು ಅದರೂ ಸಹ ಅಸ್ಪೃಶ್ಯತೆಯ ಪಿಡುಗನ್ನು ದೇಶದಲ್ಲಿ ಸಂಪೂರ್ಣವಾಗಿ ತೊಡೆದು ಹಾಕಲು ಸಾಧ್ಯವಾಗಿಲ್ಲ. ಇಂದೂ ಸಹ ಕರ್ನಾಟಕ ಹಾಗೂ ದೇಶದ ಇತರ ರಾಜ್ಯಗಳಲ್ಲಿ ಇದು ತೀವ್ರ ರೀತಿಯಲ್ಲಿ ಸುಡುತ್ತಿರುವ ಜ್ವಾಲೆಯಾಗಿಯೇ ಉಳಿದಿದೆ.

**ಅಡಿಟಿಪ್ಪಣಿ**


೧. ಡಾ. ಸಿ.ಎಸ್. ರಾಮಚಂದ್ರನ್., ೨೦೦೦, ವಸಾಹತ್ತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಪು.೩೮

೨. ಡಾ. ಕೆ. ಮೋಹನ್ ಕೃಷ್ಣರೈ., ೨೦೦೭, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೨

೩. ಡಾ. ಸಿ.ಎಸ್. ರಾಮಚಂದ್ರನ್., ೨೦೦೦, ವಸಾಹತ್ತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಪು.೩೮

೪. ಡಾ. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೬೨

೫. ಅದೇ., ಪು.೬೩

೬. ಕರ್ನಾಟಕ ರಾಜ್ಯ ಗೇಜಿಟಿಯರ್, ಭಾಗ೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು. ಪು.೨೦೮

೭. ಡಾ. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೭೩

೮. ಡಾ. ಡಿ.ಎಸ್. ಜಯಪ್ಪಗೌಡ., ೧೯೯೪, ದಿವಾನ್ ಸರ್ ಎಂ. ವಿಶೇಶ್ವರಯ್ಯನವರ ಕಾರ್ಯ ಸಾಧನೆಗಳು, ಶುಭೋದಯ ಪ್ರಕಾಶನ, ಮೈಸೂರು. ಪು.೧೧೧

೯. ಡಾ. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೭೩

೧೦. ಅದೇ ಪು.೭೦

# ಮೈಸೂರು ಸಂಸ್ಥಾನದಲ್ಲಿ ಶಿಕ್ಷಣಪಡೆದ ಪ್ರಥಮ ದಲಿತ ಮಹನೀಯರು

**ಪೀಠಿಕೆ**

'ಶಿಕ್ಷಣವೇ ನಮ್ಮೆಲ್ಲರ ಮೂಲಮಂತ್ರವಾಗಬೇಕು' ಎಂದು ಎಚ್ಚರಿಸಿದ ನಮ್ಮ ದಾರ್ಶನಿಕ ಗುರು ವಿಶ್ವರತ್ನ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಮುಂದುವರೆದು ದಲಿತರ ಉದ್ಧಾರಕ್ಕಾಗಿ ಶಿಕ್ಷಣ ಹೋರಾಟ ಮತ್ತು ಸಂಘಟನೆ ಎಂಬ ಮೂರು ಮಂತ್ರಗಳನ್ನು ನೀಡಿದರೆ ಅವರ ಗುರುಗಳಾಗಿದ್ದ ಜ್ಯೋತಿ ಬಾಫೂಲೆಯವರು 'ದಲಿತರ ಅವನತಿಗೆ ಶಿಕ್ಷಣದ ಅಭಾವವೇ ಕಾರಣ'ವೆಂದು ಹೇಳಿದರು. ಮುಂದುವರೆದು 'ಶಿಕ್ಷಣವಿಲ್ಲದ್ದರಿಂದ ಮನುಷ್ಯರಾಗಿದ್ದ ದಲಿತರು ಪಶುಗಳಾದರು" ಎಂದು ಹೇಳಿ ದಲಿತೆಲ್ಲರು ಅಗತ್ಯವಾಗಿ ಶಿಕ್ಷಣ ಕಲಿಯಬೇಕೆಂದು ಆಗ್ರಹಿಸಿದ್ದರು. ಆದ್ದರಿಂದಲೇ ಅಂಬೇಡ್ಕರ್‌ರವರು ಅನಕ್ಷರತೆಯ ವಿರುದ್ಧ ಯುದ್ಧವನ್ನೇ ಸಾರಿದರು ಎಂದು ಹೇಳಬಹುದು.

ಶಿಕ್ಷಣವು ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಸುಶಿಕ್ಷಿತ ಮತ್ತು ಉತ್ತಮ ಸಾಮಾಜಿಕ ಕಳಕಳಿಯನ್ನು ಹೊಂದಿದವರನನ್ನಾಗಿ ಮಾಡುವುದಲ್ಲದೆ ಜವಾಬ್ದಾರಿಯುತವಾದ ಎಚ್ಚರಿಕೆಯನ್ನು ವಹಿಸುವಂತೆ ಮಾಡುತ್ತದೆ. ಆದ್ದರಿಂದ ಶಿಕ್ಷಣವು ಪ್ರತಿಯೊಬ್ಬ ವ್ಯಕ್ತಿಗೂ ಅಗತ್ಯವಾಗಿ ಬೇಕೇ ಬೇಕು. ಇದರಿಂದ ಮಾನವನು ಮತ್ತೊಬ್ಬನೊಡನೆ ಸಮಾನತೆ ಸಮಾನ ಮನೋಭಾವನೆ ಸಮಾನ ಉದ್ದೇಶ ಸಹಾನುಭೂತಿ ಸಹಬಾಳ್ವೆ ಸಹಕಾರ ಮನೋಭಾವನೆ ಮೊದಲಾದ ಲಕ್ಷಣಗಳನ್ನು ಹೊಂದಿರುತ್ತಾನೆ. ಈ ಮಾನವೀಯ ಗುಣಗಳು ಬೆಳೆಯಬೇಕಾದರೆ ಶಿಕ್ಷಣವು ಅಗತ್ಯ. ಒಂದರ್ಥದಲ್ಲಿ ಹೇಳುವುದಾದರೆ ಉತ್ತಮ ಶಿಕ್ಷಣ ದೋರಕ್ಕದಿದ್ದ ಪಕ್ಷದಲ್ಲಿ ಸಮಾಜದಲ್ಲಿ ಉತ್ತಮ ಪ್ರಜೆಯಾಗಿ ಬಾಳುವುದಕ್ಕೆ ಸಾಧ್ಯವಿಲ್ಲ. ಸಮಾಜವು ರೂಪಿತವಾಗಿ ಮುಂದುವರೆಯಬೇಕಾದರೆ ಹಲವಾರು ಸೂಕ್ತವಾದ ಕಾನೂನು ನಿಯಮಗಳು ಅಗತ್ಯ. ಅವುಗಳನ್ನು ಅನುಸರಿಸುವುದು ಅಷ್ಟೇ ಅವಶ್ಯಕವಾದದ್ದು. ಇದನ್ನು ಪರಿಚಯ ಮಾಡಿಕೊಡುವುದೇ ಶಿಕ್ಷಣದ ಹೊಣೆಯಾಗಿರುತ್ತದೆ. ಮಾನವನಿಗೆ ಈ ನಿಯಮಗಳನ್ನು ಮೌಲ್ಯಗಳನ್ನು ಪರಿಪಾಲಿಸಲು ಆಸಕ್ತಿ ಇರುವುದರಿಂದಲೇ ಸಮಾಜವು ಸ್ಥಾಪನೆಯಾಗಿರುವುದು ಶಾಲಾ ಸಂಸ್ಥೆಗಳು ಸಹ ಇದರಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ತೆಗೆದುಕೊಂಡಿರುವುದು.

ಮಾನವನ ಬೆಳವಣಿಗೆಗೆ ಮೂಲಭೂತ ಬೇಡಿಕೆಗಳಾದ ಆಹಾರ ಉಡುಪು ವಸತಿಗಳು ಹೇಗೆ ಅಗತ್ಯವೊ ಹಾಗೆಯೇ ಶಿಕ್ಷಣವೊ ಸಹ ಅಷ್ಟೇ ಅಗತ್ಯವಾಗಿರುವುದು. ಶಿಕ್ಷಣದ ನೆರವು ನಿರಂತರ ವಾದದ್ದು. ವ್ಯಕ್ತಿಯು ಉತ್ತಮ ಶಿಕ್ಷಣದ ಮೂಲಕ ಯೋಗ್ಯವಾದ ಪರಿವರ್ತನೆಯನ್ನು ಹೊಂದಬಲ್ಲ ನಲ್ಲದೆ ಜ್ಞಾನಾರ್ಜನೆಯನ್ನು ಪಡೆದುಕೊಳ್ಳುತ್ತಾನೆ. ಹಾಗೂ ಸಮಾಜದ ಪರಿಸ್ಥಿತಿಯನ್ನು ಅರಿತುಕೊಂಡು ಪ್ರಗತಿ ಸಾಧಿಸುವುದಕ್ಕೆ ಅನುಕೂಲವಾಗುವುದು. ಇದರ ಜೊತೆಗೆ ಸಾಮಾಜಿಕ ವ್ಯವಸ್ಥೆಗಳ ಪರಿಚಯ ವುಂಟಾಗುವುದು. ಹೀಗೆ ಶಿಕ್ಷಣಕ್ಕೂ ಸಮಾಜಕ್ಕೂ ಅನ್ಯೂನ್ಯ ಸಂಬಂಧವನ್ನು ಸ್ವತಃ ಮನಗಂಡಿದ್ದ ನಾಲ್ವಡಿಯವರು ತಮ್ಮ ಸಂಸ್ಥಾನದಲ್ಲಿ ಪಶುಗಳಿಗಿಂತಲೂ ಕೀಳು ಜೀವನ ಸಾಗಿಸುತ್ತಿದ್ದಂತಹ ಅಸ್ಪೃಶ್ಯರಿಗೆ ಶಿಕ್ಷಣ ನೀಡಿ ಮುಖ್ಯವಾಹಿನಿಗೆ ತರಲು ಕಂಕಣಬದ್ಧರಾದರು.

ನಾಲ್ವಡಿ ಕೃಷ್ಣರಾಜಒಡೆಯರು ಪಂಚಮರ ಬಗ್ಗೆ ತೋರಿದ ಕಳಕಳ ಕೈಗೊಂಡ ಯೋಜನೆಗಳು ನೀಡಿದ ಸಹಕಾರ ಎಲ್ಲವು ಸಹ ಆರ್. ಗೋಪಾಲಸ್ವಾಮಿ ಅಯ್ಯರ್‌ವರಿಗೆ ಹೊಸ ಚೈತನ್ಯವನ್ನು ನೀಡಿದ ಪರಿಣಾಮ ಅಸ್ಪೃಶ್ಯೋದ್ಧಾರ ಕಾರ್ಯಗಳನ್ನು ಕೈಗೊಂಡರು. ಹಾಗಾಗಿ ನಾಲ್ವಡಿಯವರಿಂದ ಸ್ಪೂರ್ತಿ ಪಡೆದ ಅಯ್ಯರ್ ಪಂಚಮರಿಗಾಗಿ ವಸತಿ ಶಾಲೆಗಳನ್ನು ಪ್ರಾರಂಭಿಸಿ ಶಿಕ್ಷಣ ನೀಡಿದರು. ಇವರಲ್ಲಿ ಕೆಲವರು ಮರಳಿನ ಮೇಲೆ ಅಕ್ಷರ ಕಲಿತವರಾಗಿದ್ದಾರೆ. ಅಕ್ಷರ ಸಂಸ್ಕೃತಿಯಿಂದ ವಂಚಿತರಾಗಿದ್ದ ಈ ದಲಿತ ಜನಾಂಗದವರಲ್ಲಿ ಕೆಲವೇ ಕೆಲವರು ಅಕ್ಷರಸ್ಥರಾಗಿದ್ದಾರೆ. ಒಟ್ಟಾರೆ ಕ್ರೂರ ಜಾತಿಯ ವ್ಯವಸ್ಥೆಯ ತಿರಸ್ಕಾರ ನಿರಂತರ ಅಪಮಾನಗಳ ನಡುವೆಯೂ ಕೂಡ ಅಯ್ಯರ್‌ರವರ ಪ್ರೇರಣೆಯಿಂದ ಅಕ್ಷರ ಕಲಿತು ಜಾಗೃತರಾಗಿ ಮೌಢ್ಯತೆಯ ವಿರುದ್ಧ ಹೋರಾಡುತ್ತಲೇ ತಮ್ಮ ಸಮುದಾಯವನ್ನು ಜಾಗೃತಿಗೊಳಿಸಿ ವೈಚಾರಿಕತೆಯನ್ನು ಬೆಳೆಸಿಕೊಂಡರು. ಒಟ್ಟಾರೆ ಹೇಳಬೇಕೆಂದರೆ ದಲಿತ ಸಮುದಾಯವೆಂಬ ಕಗ್ಗತ್ತಲ ನಡುವಿನಿಂದ ಬೆಳಕನ್ನು ಹೊತ್ತು ತಂದು ಸಮಾಜ ಸುಧಾರಣೆಗೆ ಭದ್ರ ತಳಹದಿ ಹಾಕಿಕೊಟ್ಟು ಪಂಚಮ ಜನ ಸಮುದಾಯವನ್ನು ವೈಚಾರಿಕ ಬೆಳಕಿನಡೆಗೆ ಕೊಂಡೊಯ್ಯುವಲ್ಲಿ ದುಡಿದ ಮಹಾನ್ ಮಾನವತಾವಾದಿ ಪಂಚಮರ ಆರ್. ಗೋಪಲಸ್ವಾಮಿ ಅಯ್ಯರ್.

ಭೂಮಿಯಲ್ಲಿ ಜೀವಜಂತುಗಳು ಸೃಷ್ಟಿಯಾದಾಗಿನಿಂದಲೂ ಹುಟ್ಟಿಕೊಂಡು ಬಂದಂತೆ ಅಸ್ಪೃಶ್ಯತೆ ಎಂಬುದು ಕೇವಲ ಮೈಸೂರು ಮಹಾರಾಜರ ನಾಲ್ವಡಿಯವರ ಕೆಲವೇ ಕೆಲವು ಕಾನೂನುಗಳಿಂದ ಮುಕ್ತವಾಗಿರಲಿಲ್ಲ ಎಂಬುದು ಒಪ್ಪಬೇಕಾದ ಮಾತು. ಆದರೆ ಪ್ರಪ್ರಥಮಬಾರಿಗೆ ನಾಲ್ವಡಿಯವರು ಅಸ್ಪೃಶ್ಯ ವರ್ಗದವರಿಗೆ ಶಿಕ್ಷಣ ಹಾಗೂ ಅವರ ರಾಜಾಕೀಯ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳನ್ನು ಉತ್ತಮಪಡಿಸುವುದಕ್ಕೆ ಮತ್ತು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕೆ ಮೈಸೂರು ಸಂಸ್ಥಾನ ನೀಡಿದ ಪ್ರೊತ್ಸಹ ಮಾಡಿದ ಸಹಾಯ ಕೈಗೊಂಡ ಕಾರ್ಯಕ್ರಮಗಳು ಗಮನಾರ್ಹವಾದವು ಎಂದರೆ ತಪ್ಪಾಗಲಾರದು. ಆದ್ದರಿಂದ ಪಂಚಮರಿಗಾಗಿ (ಹೊಲೆಯ-ಮಾದಿಗ) ೧೮೯೦ರಲ್ಲಿ ಆನೆಕಲ್ ತಾಲ್ಲೊಕಿನ ಹುಸ್ಕೂರು ಮಾಲೂರು ತಾಲ್ಲೂಕಿನ ನರಸಾಪುರ ಮಳವಳ್ಳಿ ಬಂಗಾರಪೇಟೆ ತಾಲ್ಲೊಕಿನ ನೂಲುಕುಂಟೆಗಳಲ್ಲಿ ಪ್ರತ್ಯೇಕ ಶಾಲೆಗಳನ್ನು ಸ್ಥಾಪಿಸಿದರು. ಕ್ರಮೇಣ ಈ ಶಾಲೆಗಳೇ ಪಂಚಮ ಶಾಲೆಗಳೆಂದು ಕರೆಯಲ್ಪಟ್ಟವು.

ಒಟ್ಟಾರೆ ಮೈಸೂರು ಸಂಸ್ಥಾನ ಸ್ಥಾಪಿಸಿದ ಪಂಚಮ ಶಾಲೆಗಳಿಂದ ೧೯೧೨-೧೯೧೩ರ ವೇಳೆಗೆ ಇಡೀ ಮೈಸೂರು ಸಂಸ್ಥಾನದಲ್ಲಿಯೇ ಐದು ಜನ ವಿದ್ಯಾರ್ಥಿಗಳು ಕನ್ನಡ ಲೋಯರ್ ಸೆಕೆಂಡರಿ (ಎಸ್.ಎಸ್.ಎಲ್.ಸಿ) ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಹಾಗೇ ಉತ್ತೀರ್ಣರಾದ ಆ ಅದೃಷ್ಟದ ಪಂಚಮ ವಿದ್ಯಾರ್ಥಿಗಳೇ ಕುಣಿಗಲ್ಲಿನ ಚಲುವಯ್ಯ ಶಿರಾದ ವಿ. ಕದರಪ್ಪ ಬೆಳ್ಳಗಾವಿಯ ಕೆಂಪ ಹನುಮಯ್ಯ ಮಳವಳ್ಳಿಯ ಎಮ್. ಲಿಂಗಯ್ಯ ಪಂಚಮರಲ್ಲಿನ ಪಂಚ ಹಣತೆಗಳು. ವಿದ್ಯಾಭ್ಯಾಸ ದಿಂದ ಸಂಪೂರ್ಣವಾಗಿ ವಂಚಿತರಾಗಿದ್ದ ಪಂಚಮ ವಿದ್ಯಾರ್ಥಿಗಳಿಗೆ ಕನ್ನಡ ವಿದ್ಯೆ ಹೇಳಿಕೊಡಲು ಮುಂದೆ ಬಂದು ಮಾನವೀಯತೆ ಮೆರದ ಪ್ರಥಮ ವ್ಯಕ್ತಿಯೆ ತಲಕಾಡಿನ ಆರ್. ರಂಗೇಗೌಡರು. ಶ್ರೀಯುತರು ಪಂಚಮ ವಿದ್ಯಾರ್ಥಿಗಳಿಗೆ ಸ್ಲೇಟು ಬಳಪ ತೆಗೆದುಕೊಳ್ಳಲು ಶಕ್ತಿಯಿಲ್ಲದ್ದನ್ನು ಮನಗೊಂಡು ಒಂದು ಬಂಡಿ ಮರಳನ್ನು ಶಾಲೆಯ ಆವರಣಕ್ಕೆ ತರಿಸಿ ಅದನು ಸಮತಟ್ಟಾಗಿ ಮಾಡಿ ಅದರ ಮೇಲೆ ಅಕ್ಷರಗಳನ್ನು ಮೂಡಿಸಿ ಕುಳಿಬಿದ್ದ ಸ್ಥಳದಲ್ಲಿ ಮಕ್ಕಳಿಂದಲೇ ಹುಣಿಸೆ ಬೀಜ ತುಂಬಿಸುವ ಮೂಲಕ ದಲಿತ ಮಕ್ಕಳೆಲ್ಲರೂ ಸುಲಭವಾಗಿ ವಿದ್ಯೆಕಲಿಯುವಂತೆ ಮಾಡಿದರು. ಹೀಗೆ ವಿದ್ಯೆಕಲಿತ ವಿದ್ಯಾರ್ಥಿಗಳೇ ಮೇಲಿನ ಪಂಚ ಹಣತೆಗಳು. ಹಲವಾರು ವಿದ್ಯಾರ್ಥಿಗಳು ಇವರಿಂದ ಶಿಕ್ಷಣ ಪಡೆದಿದ್ದಾರೆ. ೧೯೩೫ ಆಗಸ್ಟ್ ೧೫ ರಂದು ಸೇವೆಯಿಂದ ನಿವೃತ್ತಿ ಹೊಂದಿದ ಇವರಿಗೆ "ಮೈಸೂರು ಸಂಸ್ಥಾನದ ಆದಿಕರ್ನಾಟಕದ ಪ್ರಥಮ ವಿದ್ಯಾಗುರು"ಗಳೆಂದು ಘೋಷಿಸಿ ಗೌರವ ಮತ್ತು ಕೃತಜ್ಞತೆಯನ್ನು ಅಯ್ಯರ್ ಮತ್ತು ನಾಲ್ವಡಿ ಕೃಷ್ಣರಾಜಒಡೆಯರು ಅರ್ಪಿಸಿದರು.

ನಂತರದ ದಿನಗಳಲ್ಲಿ ತಾಲೂಕು ಜಿಲ್ಲೆಗಳಲ್ಲಿ ಸ್ಥಾಪನೆಯಾದ ನರಸಿಂಹರಾಜ ವಿದ್ಯಾರ್ಥಿ ನಿಲಯ ಪಂಚಮರ ವಸತಿಶಾಲೆಗಳು ಅನುದಾನಿತ ಆದಿಕರ್ನಾಟಕ ವಸತಿ ಶಾಲೆಗಳಲ್ಲಿ ಸಾವಿರಾರು ಪಂಚಮ ವಿದ್ಯಾರ್ಥಿಗಳು ಶಿಕ್ಷಣ ಪಡೆದು ಈ ನಾಡಿಗೆ ತಮ್ಮದೆಯಾದ ವಿಶಿಷ್ಟ ಕಾಣಿಕೆಯನ್ನು ನೀಡಿದ್ದಾರೆ. ಅಂತಹ ಪ್ರಮುಖ ವ್ಯಕ್ತಿಗಳನ್ನು ಕುರಿತು ಈ ಮುಂಚೆ ಚರ್ಚಿಸಲಾಗಿದೆ.

**ಸೋಸಲೆ ಎಸ್. ಸಿದ್ದಪ್ಪ**

**ಜನನ** : ಕರ್ನಾಟಕ ರಾಜ್ಯದ ಮೊಟ್ಟಮೊದಲ ದಲಿತ ಲೇಖಕರೆಂದೆ ಹೆಗ್ಗಳಿಕೆಗೆ ಪಾತ್ರರಾಗಿರುವ ಶ್ರೀಯುತ ಎಸ್. ಸಿದ್ದಪ್ಪನವರು, ಟಿ. ನರಸೀಪುರ ತಾಲೂಕಿನ ಸೋಸಲೆಯ ಆದಿಕರ್ನಾಟಕ ಜನಾಂಗದ ಜವರಯ್ಯನ ಸಿದ್ದಮಲ್ಲಯ್ಯ ಹಾಗೂ ಅವರ ಧರ್ಮಪತ್ನಿ ಮಾದಮ್ಮನವರ ಜೇಷ್ಠ ಪುತ್ರರಾಗಿ ೧೮-೦೮-೧೮೯೨ರಲ್ಲಿ ಜನಿಸಿದರು. ಇವರಿಗೆ ಜವರಯ್ಯ ಮತ್ತು ಮಾದಯ್ಯ ಎಂಬಿಬ್ಬರು ತಮ್ಮಂದಿರು ಗಳು ಕೂಡ ಇದ್ದರು.

**ವಿದ್ಯಾಭ್ಯಾಸ** : ಸೋಸಲೆ ಎಸ್. ಸಿದ್ದಪ್ಪನವರ ವಿದ್ಯಾಭ್ಯಾಸವು ಅವರ ಸ್ವಗ್ರಾಮವಾದ ಸೋಸಲೆ ಯಲ್ಲಿ ಮತ್ತು ದೀನದಯಾಳು ದಲಿತೊದ್ಧಾರಕ ದಲಿತರ ಏಳಿಗೆಗಾಗಿ ಮೊದಲ ಬಾರಿಗೆ ಕರ್ನಾಟಕ ರಾಜ್ಯದಲ್ಲಿ ಮೀಸಲಾತಿ ಸೌಕರ್ಯ ನೀಡಿದ ಮೈಸೂರು ಮಹಾರಾಜರಾದ ನಾಲ್ವಡಿಕೃಷ್ಣರಾಜ ಒಡೆಯರು ಸ್ಥಾಪಿಸಿದ್ದ ಮೈಸೂರಿನ ಆದಿಕರ್ನಾಟಕ ವಸತಿಶಾಲೆ ನಜರ್‌ಬಾದ್‌ನಲ್ಲಿ ನಡೆಯಿತು. ೧೯೦೫ರಲ್ಲಿ ಕರ್ನಾಟಕ ಲೊಯರ್ ಸೆಕಂಡರಿ ಪರೀಕ್ಷೆಯಲ್ಲಿ ದ್ವಿತಿಯ ದರ್ಜೆಯಲ್ಲಿ ಉತ್ತೀರ್ಣರಾದರು.

ಅವರ ನೋಂದಣಿ ಸಂಖ್ಯೆ ೩೨೭೧ ಆಗಿತ್ತು. ಮತ್ತು ಯು.ಎಸ್. ಪದವಿಯನ್ನು ಸಹ ಪಡೆದರು. ಸಿದ್ದಪ್ಪನವರು ನಜರಬಾದ್‌ನ. ಆದಿಕರ್ನಾಟಕ ವಸತಿ ಶಾಲೆಯಲ್ಲಿದ್ದಾಗ ಅವರಿಗೆ ಶಾಲಾ ಶಿಕ್ಷಕರಾಗಿದ್ದವರೆಂದರೆ ಮೈಸೂರು ಸಂಸ್ಥಾನದ ಮೊಟ್ಟಮೊದಲ ದಲಿತರ ಗುರುವಾದ ತಲಕಾಡಿನ ಆರ್. ರಂಗೇಗೌಡರು.

**ಶಿಕ್ಷಕರಾಗಿ ಸೇವೆ** : ಸಿದ್ದಪ್ಪನವರು ೨೦-೮-೧೯೧೫ರಂದು ಟಿ. ನರಸೀಪುರ ತಾಲೂಕಿನ ಬನ್ನೂರು ಪಂಚಮ ಶಾಲೆಯ ಹಂಗಾಮಿ ಶಿಕ್ಷಕರಾಗಿ ನೇಮಕಗೊಂಡರು. ನಂತರ ಅವರು ತಮ್ಮ ಸ್ವಗ್ರಾಮವಾದ ಸೋಸಲೆಯಲ್ಲಿ ಮತ್ತು ಮೈಸೂರಿನ ಜಲಪುರಿಯ ಮಿಶ್ರಿತ ಪಂಚಮ ಶಾಲೆಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಜಲಪುರಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ೧-೧೦-೧೯೨೩ರಲ್ಲಿ ಅವರ ಕೆಲಸ ಖಾಯಂಗೋಡಿತು. ನಂತರ ೧೯೩೨ರಂದು ಮೈಸೂರಿನ ಆದಿಕರ್ನಾಟಕಪುರಂ(ಇಂದಿನ ಅಶೋಕಪುರಂ) ಪ್ರಾಥಮಿಕ ಶಾಲೆಗೆ ವರ್ಗಾವಣೆ. ಅಲ್ಲಿಂದ ನಗರದ ಜಲಗಾರ ಕೇರಿಯ ಪ್ರಾಥಮಿಕ ಶಾಲೆಯ ಮುಖ್ಯಶಿಕ್ಷಕರಾಗಿ ೩೦-೭-೧೯೩೭ರಲ್ಲಿ ಬಡ್ತಿಹೊಂದಿ ಕಾರ್ಯನಿರ್ವಹಿಸಿ ಮುಂದೆ ಇಟ್ಟಿಗೆಗೂಡು ಕನ್ನಡ ಬಾಲಕರ ಪ್ರಾಥಮಿಕ ಶಾಲೆಗೆ ೧೧-೦೧-೧೯೪೦ರಂದು ವರ್ಗವಾಗಿ ಅಲ್ಲಿಯೇ ಅವರು ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಪ್ರೀತಿಸುತ್ತಿದ್ದ ಬೋಧನಾ ವೃತ್ತಿಯಿಂದ ಅದೇ ವರ್ಷ ಸೇವೆಯಿಂದ ನಿವೃತ್ತಿ ಹೊದಿರುತ್ತಾರೆ.

ಸ್ವಗ್ರಾಮದ ಮಲ್ಲಮ್ಮ ಎಂಬುದರೊಂದಿಗೆ ವಿವಾಹವಾದ ಸಿದ್ದಪ್ಪನವರಿಗೆ ಮೂರು ಜನ ಮಕ್ಕಳಿದ್ದರು. ಇವರಲ್ಲಿ ಇಬ್ಬರು ಚಿಕ್ಕಂದಿನಲ್ಲೆ, ತೀರಿಕೊಂಡರೆ ಎಸ್.ಎಂ. ಶಿವಸ್ವಾಮಿಯವರು ಅರಣ್ಯ ರಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತ ಜೀವನ ನಡೆಸುತ್ತಿದ್ದಾರೆ. ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದರೂ ಬಿಡುವಿನ ವೇಳೆಯಲ್ಲಿ ಜನಾಂಗದ ಕೇರಿಗಳಿಗೆ ಹೋಗಿ ಮಕ್ಕಳನ್ನು ಶಾಲೆಗೆ ಸೇರಿಸುವಂತೆ ಶುಚಿತ್ವದ ಬಗ್ಗೆ ವಿದ್ಯೆಯ ಮಹತ್ವದ ಬಗೆ ಜನರಿಗೆ ತಿಳಿಸಿಕೊಡುತ್ತಿದ್ದರು. ಜೊತೆಗೆ ಮೇಲ್ಜಾತಿಯವರ ದಬ್ಬಾಳಿಕೆಯ ವಿರುದ್ಧ ಜಾತಿ ವ್ಯವಸ್ಥೆ ವಿರುದ್ದ ಸೆಟೆದು ನಿಲ್ಲುವಂತೆ ಮಾಡುತ್ತಿದ್ದರು. ಹಾಗೂ ಅಕ್ಷರವನ್ನೇ ಕಾಣದ ಅಂದಿನ ಸಮುದಾಯದಲ್ಲಿ ಹುಟ್ಟಿ ಸಾಹಿತ್ಯವೆಂಬ ವಿಶಿಷ್ಟವಾದ ಪ್ರವೃತ್ತಿಯಲ್ಲಿ ತೊಡಗಿಸಿಕೊಂಡು ಸಾಹಿತ್ಯದ ಕೃಷಿಯಲ್ಲಿ ಉತ್ತಮ ಸಾಧನೆ ಮಾಡಿರುವ ಇವರ ಸಾಹಿತ್ಯದ ಮೇಲಿನ ಉತ್ಸುಕತೆ ಜ್ಞಾನ ಬರವಣಿಗೆಯನ್ನು ಕಂಡು ಅಕ್ಷರದ ಜುಟ್ಟನ್ನೇ ಹಿಡಿದು ಹುಟ್ಟಿದ ಮನುವಾದಿ ಪಂಡಿತರುಗಳು ಸಹ ಮೆಚ್ಚಿ ಬೆನ್ನುತಟ್ಟಿದ್ದಾರೆ. ಇವರ ಸಾಹಿತ್ಯ ಕೃತಿಗಳ ದೃಶ್ಯ ಪ್ರತಿಭೆಯನ್ನು ಕಂಡು ಅಶ್ಚರ್ಯ ಚಕಿತರಾದ ಶ್ರೀ ನಾಲ್ವಡಿ ಕೃಷ್ಣರಾಜಒಡೆಯರವರು ಅವರಿಗೆ 'ನವಕವಿ' ಎಂಬ ಬಿರುದು ನೀಡಿ ಸನ್ಮಾನಿಸಿದ್ದಾರೆ ಎಂದು ಅವರ ಮಗ ಶಿವಸ್ವಾಮಿಯವರು ಹೇಳಿದ್ದಾರೆ.

'ನವಕವಿ' ಎಂದು ಕರೆದಿರುವುದು ದಲಿತ ಸಮುದಾಯದಲ್ಲಿ ಮೂಡುತ್ತಿರುವ ಅಕ್ಷರಜ್ಞಾನ ಪಡೆದು ಬರವಣಿಗೆಯೆಂಬ ಅಪರೂಪದ ವೃತ್ತಿಯಲ್ಲಿ ತೊಡಗಿಸಿಕೊಡಿರುವ ಏಕ ಕಿರಣ ಹೊಸದು ನವೀನ ಎಂಬ ಅರ್ಥದಲ್ಲಿ ಅವರಿಗೆ ಸಂದಿರುವುದು ಅರ್ಥಪೂರ್ಣವೂ ಗೌರವ ಯುತವಾದದ್ದು ಎನ್ನಬಹುದು.

**ಕೃತಿಗಳು** : ಸಿದ್ದಪ್ಪನವರ ಮೊದಲ ಕೃತಿಯಾದ 'ಚಾಂಗದೇವನ ಚರಿತ್ರೆ'ಯಿಂದ ಕೊನೆಯದಾದ 'ಬಡವನ ಭಾಗ್ಯ' ಎಂಬ ನೀತಿ ಗ್ರಂಥದವರೆಗೂ ಒಟ್ಟು ೧೭ ಕೃತಿಗಳನ್ನು ರಚಿಸಿದ್ದಾರೆ. ಇವರು ಕೃತಿಗಳನ್ನು ರಚಿಸುವಾಗ ಪ್ರತಿ ಕೃತಿಯಲ್ಲೂ ಆದಿಕರ್ನಾಟಕ ಕವಿ ಎ.ಕೆ. ಅಥರ್ ಕೆಲವು ಕಡೆ ಪಂಚಮ ಕವಿ ಬಲಗೈ ಕವಿ ಎಂದೂ ತುಂಬಾ ಜಾತಿ ಅಭಿಮಾನದಿಂದ ಬರೆದುಕೊಂಡಿದ್ದಾರೆ ಹಾಗೂ ಕೃತಿಯನ್ನು ಬರೆದ ದಿನಾಂಕ ಮತ್ತು ವರ್ಷವನ್ನು ಸ್ಪಷ್ಟವಾಗಿ ಬರೆದಿರುತ್ತಾರೆ.

| ಕ್ರ.ಸಂ. | ಕೃತಿಯ ಹೆಸರು | ವರ್ಷ |
|---|---|---|
| ೧. | ಶ್ರೀ ಚಾಂಗದೇವನ ಚರಿತ್ರೆ | ೧೭-೬-೧೯೧೭. |
| ೨. | ಇಂಗ್ಲೆಂಡ್ ಚರಿತ್ರೆ | ೬-೦೩-೧೯೧೯ರಿಂದ ೧೮-೦೨-೧೯೨೨. |
| ೩. | ಆತ್ಮ ಸಂಬೋಧೆ | ೮-೧೨-೧೯೨೭. |
| ೪. | ಆಳುವ ಮಹಾಸ್ವಾಮಿಯವರಾದ ನಾಲ್ವಡಿ ಶ್ರೀ ಕೃಷ್ಣರಾಜೇಂದ್ರಒಡೆಯರ್ ಬಹದ್ದೂರ್‌ರವರ ಜೀವನ ಚರಿತ್ರೆ | ೬-೧೨-೧೯೨೮. |
| ೫. | ಗೋವುಗಳ ಗೋಳಾಟ | ೧೯೩೧. |
| ೬. | ಮತ ಸುಧಾರಣೆ | ೧೯೩೮ |
| ೭. | ಅವಿವೇಕ ರಾಮನಿಗೆ ಸಂತಾಪ | ೦೨-೦೪-೧೯೪೦. |
| | ಮೊದಲಾದವುಗಳನ್ನು ರಚಿಸಿದ್ದಾರೆ. | |

**ಡಿ. ಗೋವಿಂದದಾಸ್**

ಡಿ. ಗೋವಿಂದದಾಸ್‌ರವರು ನಮ್ಮ ಆಧುನಿಕ ಸಾಹಿತ್ಯದ ಮೊದಲ ದಲಿತ ಕವಿ ಮತ್ತು ನಾಟಕಕಾರರು. ಅಪ್ಪಟ ಗಾಂಧಿವಾದಿಗಳಾಗಿದ್ದ ಇವರು ದೇಶಿ ಸಂಸ್ಕೃತಿಯ ಬಗ್ಗೆ ಅಕ್ಕರೆ ಹೊಂದಿದ್ದವರಾಗಿದ್ದು ಸ್ವತಃ ಕಲಾವಿದರೂ ಹಾಡುಗಾರರಾಗಿದ್ದ ಇವರಿಗೆ ಜನಪದ ಕಲೆಗಳ ಮಹತ್ವದ ಬಗ್ಗೆ ಆಸಕ್ತಿ ಹೊದಿದವರಾಗಿದ್ದರು. ಶಿಸ್ತು ಮತ್ತು ಪ್ರಾಮಾಣಿಕತೆಗೆ ಹೆಸರಾಗಿದ್ದ ಇವರು ಈ ಸಮಾಜದಲ್ಲಿರುವ ಅಸಮಾನತೆ ಶೋಷಣೆಯ ವಿರುದ್ಧ ಎತ್ತಿದ ಧ್ವನಿಗಳು ಹಾಗೂ ನಾಡು ನುಡಿ ಸಂಸ್ಕೃತಿಯ ಬಗ್ಗೆ ತಮಗಿದ್ದ ಕಾಳಜಿ ಮೊದಲಾದವುಗಳನ್ನೆಲ್ಲಾ ತಮ್ಮ ಕಾವ್ಯದ ವಸ್ತುವನ್ನಾಗಿಸಿ ಕೊಂಡು ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡಿರುವುದು ಒಂದು ವಿಶೇಷವೆನಿಸುತ್ತದೆ. ಅಸ್ಪೃಶ್ಯ ಕುಟುಂಬದಲ್ಲಿ ಜನಸಿದ ಪ್ರತಿಭಾನ್ವಿತರಾದ ಇವರು ಆ ಕಾಲದಲ್ಲಿ ಯಾವುದೆ ಬಗೆಯ ಸಹಜವಾದ ಬೆಂಬಲ ಪ್ರೋತ್ಸಹಗಳಿಲ್ಲದಿದ್ದರೂ ನಿರಂತರವಾದ ತಮ್ಮ ಪರಿಶ್ರಮದಿಂದಲೂ ಬಹುಮುಖಿ ಕಾಳಜಿಯಿಂದ ಸಾಧಾನೆಗೈಯುತ್ತಾ ಕನ್ನಡ ನಾಡು ನುಡಿ ಸಂಸ್ಕೃತಿ ಹಾಗೂ ಸಮಾಜ ಸುಧಾರಣೆಗೆ ತಮ್ಮದೆಯಾದ ಕೊಡುಗೆ ನೀಡಿದ್ದಾರೆ.

**ಬಾಲ್ಯ ಮತ್ತು ಶಿಕ್ಷಣ**

ಹಾಸನಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನ ದಮ್ಮನಿಂಗಳ ಎಂಬ ಗ್ರಾಮದಲ್ಲಿ ಆದಿಕರ್ನಾಟಕ

ಜನಾಂಗದ ದಾಸಪ್ಪ ಮತ್ತು ಕೆಂಪಮ್ಮ ಎಂಬ ದಂಪತಿಗಳ ಮಗನಾಗಿ ೨೦-೦೭-೧೯೧೦ರಲ್ಲಿ ಜನಿಸಿದರು. ದಮ್ಮನಿಂಗಳ ಎಂಬ ಗ್ರಾಮ ಶ್ರವಣಬೆಳಗೊಳದಿಂದ ಸುಮಾರು ನಾಲ್ಕು ಮೈಲಿ ದೂರದಲ್ಲಿದ್ದು ಇಲ್ಲಿ ಸಾಂಸ್ಕೃತಿಕವಾಗಿ ವಿಶಿಷ್ಟವಾದ ಒಂದು ಜನಪದ ಕಲಾವಿದರ ಗುಂಪೆ ಇದೆ. ಇವರ ತಂದೆ ದಾಸಪ್ಪನವರು ಅಂದಿನ ಕಾಲಕ್ಕೆ ಕಿಕ್ಕೇರಿ ಕೆ.ಆರ್.ಪೇಟೆ ಮೈಸೂರು ಮೊದಲಾದ ಸ್ಥಳಗಳಲ್ಲಿ ಚರ್ಮದ ವ್ಯಾಪಾರಿಯಾಗಿ ಹೆಸರಾಗಿದ್ದರಲ್ಲದೆ ದಾನ ಧರ್ಮ ನ್ಯಾಯ ನಿಷ್ಠೆಗೆ ಹೆಸರಾದ ಸಾಂಪ್ರದಾಯಸ್ಥ ಮನೆತನವಾಗಿತ್ತು. ತಮ್ಮ ಮಗ ವ್ಯಾಪಾರದ ಲೆಕ್ಕವನ್ನು ಇಟ್ಟುಕೊಳ್ಳುವಷ್ಟು ಕಲಿತರೆ ಸಾಕು ಎಂಬ ಮನೋದೋರಣೆಯನ್ನು ಹೊಂದ್ದರು. ಆದರೆ ಗೋಂವಿಂದದಾಸರಿಗೆ ಓದುವ ಆಸಕ್ತಿಯಿಂದ ಶ್ರವಣಬೆಳಗೋಳಕ್ಕೆ ಕದ್ದು ಬಂದು ಶಾಲೆಗೆ ಸೇರಿದರು. ಆದರೆ ಈ ಸಂದರ್ಭದಲ್ಲಿಯೇ ತಂದೆ-ತಾಯಿಗಳಬ್ಬರನ್ನು ಕಳೆದು ಕೊಂಡು ತಬ್ಬಲಿಯಾದರು. ಆದ್ದರಿಂದ ಇವರ ತಾತ (ತಾಯಿಯ ತಂದೆ) ದೊಡ್ಡಚಿಕ್ಕಯ್ಯನವರು ತಮ್ಮ ಊರಾದ ಜಿನ್ನೇನಹಳ್ಳಿ(ಹಿರಿಸಾವೆ ಹೋಬಳಿ ಚನ್ನರಾಯಪಟ್ಟಣ ತಾಲೂಕು)ಗೆ ಕರೆತಂದು ಅಲ್ಲಿಯ ಪ್ರಾಥಮಿಕ ಶಾಲೆಗೆ ಸೇರಿಸಿದರು. ಇವರ ತಾತ ದೈವ ಭಕ್ತರು ಮತ್ತು ಪರೋಪಕಾರಕ್ಕೆ ಹೆಸರಾದವರು. ಹಾಗಾಗಿ ಪ್ರತಿ ಸಂಜೆ ಮೊಮ್ಮಗನಿಗೆ ಹೇಳುತ್ತಿದ್ದ ರಾಮಾಯಣ, ಮಹಾಭಾರತ ಕತೆಗಳು ದಾಸರ ಮೇಲೆ ಪ್ರಭಾವ ಬೀರಿದವು ಪ್ರಾಥಮಿಕ ಶಿಕ್ಷಣವನ್ನೂ ಮುಗಿಸಿದ ನಂತರ ಮಾಧ್ಯಮಿಕ ಶಿಕ್ಷಣಕ್ಕಾಗಿ ನಾಲ್ವಡಿಯವರು ತುಮಕೂರಿನಲ್ಲಿ ಬಡಮಕ್ಕಳಿಗಾಗಿ ಸ್ಥಾಪಿಸಿದ್ದ ನರಸಿಂಹರಾಜ ವಸತಿಶಾಲೆಯನ್ನು ಸೇರಿದರು. ಈ ವೇಳೆಗಾಗಲೆ ಕಾವ್ಯವನ್ನು ಬರೆಯುವ ಹವ್ಯಾಸವನ್ನಿಟ್ಟುಕೊಡು ತಾವು ಬರೆದ ಕವನಗಳೆನ್ನಲ್ಲಾ ಗೌಪ್ಯವಾಗಿಯೇ ಇಟ್ಟುಕೊಳುತ್ತಿದ್ದರಂತೆ. ಚಿಕ್ಕ ವಯಸ್ಸಿಗೆ ಹಲವು ಬಗೆಯ ಕಷ್ಟಗಳನ್ನು ಅನುಭವಿಸಿದ್ದ ದಾಸರು ಅಸ್ಪೃಶ್ಯತೆಯ ಕಹಿ ಅನುಭವಗಳನ್ನೆಲ್ಲ ಮೂಕವೇದನೆಯಿಂದ ಅನುಭವಿಸುತ್ತಿದ್ದರು.

ವಿದ್ಯಾರ್ಥಿ ದಿಸೆಯಲ್ಲೇ ಗಾಂಧೀಜಿಯವರ ಅಸ್ಪೃಶ್ಯತೆ ನಿವಾರಣ ಸಮಾಜ ಸುಧಾರಣ ಕೆಲಸಗಳು ಸ್ವದೇಶಿ ಆಂದೋಲನ ಮೊದಲಾದ ವಿಚಾರಗಳಂದ ಗಂಭೀರವಾಗಿ ಪ್ರಭಾವಿತರಾದ ದಾಸರು ಸಾಂಪ್ರದಾಯಿಕ ಶಿಕ್ಷಣ ಬಗ್ಗೆ ಆಸಕ್ತಿ ಕಳೆದುಕೊಂಡು ಅನುತ್ತೀರ್ಣರಾದರು. ಹಾಗಾಗಿ ತುಮಕೂರನ್ನು ಬಿಟ್ಟು ಚಿಕ್ಕಮಗಳೂರಿನ ನರಸಿಂಹರಾಜ ವಸತಿಶಾಲೆಯನ್ನು ಸೇರಿದರು. ಇಲ್ಲಿಯು ಸಹ ಸಮಾಜ ಸುಧಾರಣೆ ಮತ್ತು ಬರಹದ ಗೀಳನ್ನು ಹೆಚ್ಚಿಸಿಕೊಂಡ ಇವರು ತಾವು ಬರೆದ ಕವಿತೆಗಳನ್ನು ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಮತ್ತು ಬಿ.ಎಂ.ಶ್ರೀಕಂಠಯ್ಯನವರಿಗೆ ತೋರಿಸಿ ಮತ್ತಷ್ಟು ಪ್ರಭಾವಿತರಾಗಿ ಬರೆಯಲು ತೊಡಗಿಸಿಕೊಂದು ೧೯೩೭ರಲ್ಲಿ 'ಹರಿಜನಾಭ್ಯುದಯ' ಎಂಬ ಕವನ ಸಂಕಲನವನ್ನು ರಚಿಸಿದರು.

ಮಾಧ್ಯಮಿಕ ಶಿಕ್ಷಣವನ್ನು ಚಿಕ್ಕಮಗಳೂರಿನಲ್ಲಿ ಮುಗಿಸಿದ ನಂತರ ಅಲ್ಲೇ ಸ್ವಲ್ಪ ದಿನಗಳ ಕಾಲ ಶಾಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸಿದರು. ಆದರೆ ಇಲ್ಲಿಯು ಕೂಡ ಅಸ್ಪೃಶ್ಯತೆಯ ಅಪಮಾನ ವನ್ನು ಅನುಭವಿಸಿ ಶಿಕ್ಷಕ ವೃತ್ತಿಗೆ ರಾಜನಾಮೆ ನೀಡಿದರು. ಈ ಸಂದರ್ಭದಲ್ಲಿ ಮಾಸ್ತಿಯವರು "ಸರ್ಕಾರಿ ಕೆಲಸದಲ್ಲಿಯೇ ಮುಂದುವರೆಯಲು ಹೇಳುತ್ತಾರೆ. ಇದರ ಹಿಂದೆ ಸ್ವಾರ್ಥವು ಇದ್ದರೂ ಇರಬಹುದು. ಏಕೆಂದರೆ ಒಬ್ಬ ಅಸ್ಪೃಶ್ಯ ಎಲ್ಲಿ ತಮ್ಮ ಮಟ್ಟಕ್ಕೆ ಬೆಳೆದು ನಿಲ್ಲುತ್ತಾನೆಂಬ ಭಯ.

ದಾಸರು ಬಹಳ ವಿನಯದಿಂದ "ನನಗೆ ಸರ್ಕಾರಿ ಕೆಲಸ ಬೇಡ ನಾನು ಭಾಷೆ ಮತ್ತು ಸಮಾಜ ಸುಧಾರಣೆಯ ಕಾರ್ಯವನ್ನು ಮಾಡುತ್ತೇನೆಂದು" ಹೇಳಿದರು. ಅಂದಿನಿಂದ ಅಸ್ಪೃಶ್ಯತೆಯ ನಿವಾರಣೆಗಾಗಿ ಕಾರ್ಯಪ್ರವೃತ್ತರಾದ ದಾಸರು ತಮ್ಮ ತವರು ಜಿಲ್ಲೆಗೆ ಬಂದು ಹರಿಜನ ಕೇರಿಗಳಿಗೆ ಹೋಗಿ ಈ ಜನಾಂಗದಲ್ಲಿದ್ದ ಅಜ್ಞಾನ ಮೂಢನಂಬಿಕೆ ಅಶುಚಿತ್ವ ಹೋಗಲಾಡಿಸಿ ಮಕ್ಕಳನ್ನು ಕಡ್ಡಾಯವಾಗಿ ಶಾಲೆಗೆ ಸೇರಿಸಬೇಕೆಂಬ ಅರಿವನ್ನು ನೀಡುತ್ತಾ ಜಾಗೃತಿಯನ್ನುಂಟು ಮಾಡಿದರು.

ತನ್ನ ಜನಾಂಗದ ಸುಧಾರಣ ಕಾರ್ಯದಲ್ಲಿ ತೊಡಗಿರುವಾಗಲೇ ಮತ್ತೆ ಓದಬೇಕೆನಿಸಿ ಬೆಂಗಳೂರಿನ ಕೋಟೆ ಹೈಸ್ಕೂಲಿಗೆ (ಹಿಂದೆ ಕೊಲಿಜಿಯಟ್ ಹೈಸ್ಕೂಲ್ ಎಂದು ಕರೆಯಲಾಗುತ್ತಿತ್ತು.) ಸೇರಿ ಗೋಪಾಲಸ್ವಾಮಿ ಅಯ್ಯರ್‌ರವರು ಸ್ಥಾಪಿಸಿದ ನರಸಿಂಹರಾಜ ವಿದ್ಯಾರ್ಥಿನಿಯದ ನಿವಾಸಿಯಾದರು. ಇದೇ ವೇಳೆಯಲ್ಲಿ ಹರಿಜನರ ಬಂಧು ಮತ್ತು ಸಮಾಜ ಸುಧಾರಕರಾದ ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಪ್ರಭಾವಕ್ಕೊಳಗಾಗುತ್ತಾರೆ. ಅಯ್ಯರ್‌ರವರು ಬೆಂಗಳೂರಿಗೆ ಬೇಟಿ ನೀಡುತ್ತಿದ್ದ ಗಾಂಧೀಜಿ ಮದನ್‌ಮೋಹನ್ ಮಾಳವೀಯ ಸಿ.ಎಫ್. ಆಂಡ್ರೂಸ್ ಅಲ್ಲಾಡಿ ಕೃಷ್ಣಾಸ್ವಾಮಿ ಮೊದಲಾದವರನ್ನು ಕರೆತಂದು ಉಪನ್ಯಾಸ ನೀಡಿಸುತ್ತಿದ್ದರು. ಇವರ ವಿಚಾರಣೆಗಳು ಸಹ ದಾಸರ ಮೇಲೆ ಪ್ರಭಾವ ಬೀರಿದವು.

ನರಸಿಂಹರಾಜ ವಿದ್ಯಾರ್ಥಿನಿಲಯದಿಂದ ಪ್ರತಿ ದಿನ ಬೆಳಗ್ಗೆ ಕುಮಾರ ಪಾರ್ಕಿನ ಹಿಂದೆ ಸುತ್ತಾಡಿ ರೈಲ್ವೆ ನಿಲ್ದಾಣದವರೆಗೂ ಬರುತ್ತಿದ್ದರು. ಒಮ್ಮೆ ಒಬ್ಬ ಸಾದು ಇವರನ್ನು ಕಂಡು "ಮಗು ಭರತಖಂಡದ ದೊಡ್ಡ ದೊಡ್ಡ ಸ್ಥಳಗಳನ್ನು ನನ್ನ ಖರ್ಚಿನಲ್ಲಿ ತೋರಿಸುತ್ತೇನೆ ಬರುತ್ತೀಯಾ" ಎಂದು ಕೇಳಿದಾಗ ತಕ್ಷಣವೆ ಒಪ್ಪಿ ಹರಿಧ್ವಾರ ಗಯಾ ಹೃಷಿಕೇಶ ನಾಸಿಕ್ ಧ್ವಾರಕೆ ಮೋದಲಾದ ಸ್ಥಳಗಳಲ್ಲಿ ಪ್ರವಾಸ ಮಾಡಿದರು. ಈ ಎಲ್ಲಾ ಅನುಭವಗಳನ್ನು ತಮ್ಮ ಅಪ್ರಕಟಿತ ಆತ್ಮಕಥನದಲ್ಲಿ ದಾಖಲಿಸಿಕೊಂಡಿದ್ದಾರೆ. ಪ್ರವಾಸದಿಂದ ಮರಳಿ ಬಂದ ನಂತರ ವಿದ್ಯಾಭ್ಯಾಸವನ್ನು ಮುಗಿಸಿದಾದರೂ ಮುಂದೆ ವಿದ್ಯಾಭ್ಯಾಸ ವನ್ನು ಮುಂದುವರೆಸಲಿಲ್ಲ ಕಾರಣ ಅಯ್ಯರ್ ಗಾಂಧಿ ಅಂಬೇಡ್ಕರ್ ವಿಚಾರಗಳಿಂದ ಪ್ರಭಾವಿತರಾಗಿ ತಮ್ಮ ಗಮನವನ್ನು ಬರಹದ ಕಡೆ ಹರಿಸಿದರು. ತಮ್ಮ ಬರವಣಿಗೆಯಲ್ಲಿ ಬುದ್ಧ ನಾಲ್ವಡಿಕೃಷ್ಣಾರಾಜ ಒಡೆಯರ್ ಆರ್. ಗೋಪಾಲಸ್ವಾಮಿ ಅಯ್ಯರ್ ಅಂಬೇಡ್ಕರ್ ಮೊದಲಾದವರ ವಿಚಾರ ಧಾರೆಗಳನ್ನು ಆಧರಿಸಿ ತಾವೇ ರಚಿಸಿದ ಕವನಗಳನ್ನು ಹಾಡುತ್ತಾ ದಲಿತರ ಅಜ್ಞಾನವನ್ನು ಹೋಗಲಾಡಿಸಿದರು. ಬದುಕಿನ ಆತ್ಮ ವಿಶ್ವಾಸವನ್ನು ಮೂಡಿಸುವಂಥ ಶಿಕ್ಷಣ ಅಗತ್ಯವಾಗಿ ಪಡೆದುಕೊಳ್ಳಬೇಕೆಂಬ ಅರಿವನ್ನು ಮೂಡಿಸಿದರು. ಅಸ್ಪೃಶ್ಯರಿಗೆ ದೇವಾಲಯಗಳಲ್ಲಿ ಪ್ರವೇಶವಿಲ್ಲದಿರುವುದನ್ನು ಖಂಡಿಸುತ್ತಾ ಸರ್ಕಾರವೇ ದೇವಾಲಯಗಳನ್ನು ವಹಿಸಿಕೊಂಡು ಅಸ್ಪೃಶ್ಯರ ಪ್ರವೇಶಕ್ಕೆ ಅವಕಾಶ ಮಾಡಿಕೊಡಬೇಕೆಂದು ಸರ್ಕಾರಕ್ಕೆ ಒತ್ತಾಯ ತಂದರು. ವಿಶ್ವವಿಖ್ಯಾತ ಶ್ರವಣಬೆಳಗೋಳದಲ್ಲಿ ಗುಮ್ಮಟವನ್ನು ನೋಡಲು ಕೂಡ ಈ ಜನರಿಗೆ ಅವಕಾಶವಿರಲಿಲ್ಲ. ಇದನ್ನು ೧೯೩೩ರಲ್ಲಿ ದಾಸರು ಉಗ್ರವಾಗಿ ವಿರೋಧಿಸಿ ಪ್ರತಿಭಟಿಸಿ ದಲಿತರಿಗೆ ಪ್ರವೇಶ ದೊರಕಿಸಿ ಕೊಟ್ಟರು.

ಒಟ್ಟಾರೆ ಉತ್ತರ ಭಾರತದ ಪ್ರವಾಸ ದಾಸರ ಬದುಕಿನ ಒಂದು ಪ್ರಮುಖ ಘಟ್ಟ. ಇದು ಅವರ

ಬದುಕಿನ ದಿಕ್ಕನ್ನೇ ಬದಲಿಸಿತು ಎಂದು ಹೇಳಬಹುದು. ಇವರ ಸಾಹಿತ್ಯ ಮತ್ತು ಸಮಾಜ ಸೇವೆಯನ್ನು ಗುರುತಿಸಿದ ಸರ್ಕಾರ ೧೯೪೨ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯಾರನ್ನಾಗಿ ನೇಮಕ ಮಾಡಿತು. ನಂತರ ೧೯೪೮ರಲ್ಲಿ ಮೈಸೂರು ರಾಜ್ಯದ ರಾಜ್ಯಾಂಗ ಸಭಾದ ಹಾಸನ ಜಿಲ್ಲಾ ಪ್ರತಿನಿಧಿಯಾಗಿ ೧೯೫೨ರಲ್ಲಿ ಬೇಲೂರು ತಾಲೂಕಿನ ಸಭಾ ಸದಸ್ಯರಾಗಿ, ಕೆಲಸ ಮಾಡಿದರು. ಜೊತೆಗೆ ಹಾಸನ ಜಿಲ್ಲಾ ಮಂಡಳಿಯ ಸದಸ್ಯರಾಗಿ ಚನ್ನರಾಯಪಟ್ಟಣದ ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ ಸೆಂಟ್ರಲ್‌ಡಿಪ್ರಸ್ಡ್ ಕ್ಲಾಸ್ ಕಮಿಟಿಯ ಸದಸ್ಯರಾಗಿ ಕೂಡ ಸೇವೆ ಮಾಡಿದ್ದಾರೆ. ೧೯೩೮ರಲ್ಲಿ ಕುವೆಂಪುರವರು ಅಧ್ಯಕ್ಷರಾಗಿದ್ದ ಮೈಸೂರು ರಾಜ್ಯ ಕನ್ನಡ ಪಠ್ಯಪುಸ್ತಕ ಸಮಿತಿಯ ಸದಸ್ಯರಾಗಿ ೧೯೫೫ರಲ್ಲಿ ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಸದಸ್ಯರಾಗಿ ಮತ್ತು ೧೯೫೭ರಲ್ಲಿ ನಡೆದ ವಯಸ್ಕರ ಶಿಕ್ಷಣ ಸಮೀತಿಯ ರಾಷ್ಟ್ರೀಯ ವಿಚಾರಗೋಷ್ಠಿಯಲ್ಲಿ ಮೈಸೂರು ರಾಜ್ಯದ ಪ್ರತಿನಿಧಿಯಾಗಿ ಭಾಗವಹಿಸಿದ್ದರು.

ಆರ್. ಗೋಪಾಲಸ್ವಾಮಿ ಅಯ್ಯರ್ ಮತ್ತು ಅಂಬೇಡ್ಕರ್‌ರವರಂತಹ ವ್ಯಕ್ತಿತ್ವದ ಗುಣಗಳನ್ನು ತಮ್ಮಲ್ಲಿ ಅಳವಡಿಸಿಕೊಂಡ ದಾಸರು ಅಧಿಕಾರವನ್ನು ಎಂದೂ ಸ್ವಾರ್ಥಕ್ಕೆ ಬಳಸಿಕೊಳ್ಳದೆ ತಮ್ಮ ಮೂಲ ಮನೋಧರ್ಮವಾದ ಸಾಮಾಜ ಸುಧಾರಣೆಯ ನೆಲೆಯಲ್ಲಿಯೇ ಅಸ್ಪೃಶ್ಯರ ಮತ್ತು ಸಾರ್ವಜನಿಕರ ಹಿತಕ್ಕಾಗಿ ಶ್ರಮಿಸಿದರು. ಹಾಗಾಗಿ ಸರಳ ಸ್ವಚ್ಛ ಹಾಗೂ ಪ್ರಾಮಾಣಿಕ ವ್ಯಕ್ತಿತ್ವಕ್ಕೆ ಹೆಸರಾಗಿದ್ದಾರೆ.

ದಲಿತರಿಗೆ ಶಿಕ್ಷಣ ನೀಡಿ ಸುಧಾರಣೆಗೆ ಕಾರಣರಾದ ಮೈಸೂರು ಮಹಾರಾಜರನ್ನು ಸ್ಮರಿಸಿ ಹೀಗೆ ಒಂದು ಕವನ ಬರೆಯುತ್ತಾರೆ.

ವಿದ್ಯಾಧಾನವ ಕರುಣಿಸಿಯೆಮ್ಮನು
ಬುದ್ಧಿವಂತರ ತಾ ಮಾಡುಲುದ್ದೇಶಿಸಿ
ಬದ್ಧ ಕಂಕಣವನು ಧರಿಸುತನಿಂದ. . . .

ಪಂಚಮರ ಮಕ್ಕಳ ಶಿಕ್ಷಣಕ್ಕಾಗಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಸುಧಾರಣೆ ಮಾಡಿದ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ಮರಣ ಹೊಂದಿದಾಗ

ಹರಿಜನ ಗುರುವರ ಹಾರಿದೆಯೇ ಹರಿಪಾದವ ನೀ ಸೇರಿದೆಯಾ
ಮರೆಮಾಚುತೆ ಕಣ್ಮರೆಯಾದೆಯಾ ನೆರೆಶೋಕಗೈವ ಪರಿ ಮಾಡಿದೆಯಾ
ಎಂಬ ನಿಧನ ಗೀತೆಯನ್ನು ರಚಿಸಿದರು.

ಇಂತಹ ಅನೇಕ ಕವನಗಳನ್ನು ಅಂದರೆ ಜಾತಿ ಅಸ್ಪೃಶ್ಯತೆಗೆ ಸಂಬಂಧಿಸಿದಂತೆ ವ್ಯಕ್ತಿ ಚಿತ್ರಣದ ಕವಿತೆಗಳು ವೈಚಾರಿಕ ಕವಿತೆಗಳು ನಿಸರ್ಗ ಪರಿಸರದ ಕವಿತೆಗಳು ಪ್ರಾದೇಶಿಕ ಕೌಟಂಬಿಕ ಹಿನ್ನಲೆಯ ಕವಿತೆಗಳನ್ನು ರಚಿಸಿ ಆಧುನಿಕ ಕನ್ನಡ ಕಾವ್ಯದ ಮೊದಲ ತಲೆಮಾರಿನ ಕವಿಯಾಗಿ ಮತ್ತು ಶಿಕ್ಷಣಪಡೆದ ಪ್ರಥಮ ದಲಿತ ಮಹನೀಯರಲ್ಲಿ ಒಬ್ಬರಾಗಿರುವುದು ಗಮನಾರ್ಹ ಸಂಗತಿ.

## ಎಂ. ಮಾದಯ್ಯ ಅಥವಾ ಮೇಸ್ಟ್ರು ಮಾದಯ್ಯ

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಅಚ್ಚುಮೆಚ್ಚಿನ ಶಿಷ್ಯರುಗಳಲ್ಲಿ ಒಬ್ಬರು. ದಲಿತ ಜನಾಂಗದಲ್ಲಿ ಶಿಕ್ಷಣ ಪಡೆದ ಪ್ರಥಮ ವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀಯುತ ಎಂ. ಮಾದಯ್ಯನವರು ಹೊಗ್ಗೆಮಲ್ಲಯ್ಯ ಮತ್ತು ಚನ್ನಮ್ಮರ ಮಗನಾಗಿ ಮೈಸೂರು ಜಿಲ್ಲೆಯ ಮಳವಳ್ಳಿಯಲ್ಲಿ ೦೧.೦೫.೧೯೦೦ರಂದು ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಮಳವಳ್ಳಿಯಲ್ಲಿ ಪಡೆದರು. ನಂತರ ಬೆಂಗಳೂರಿನ ನರಸಿಂಹರಾಜ ವಿದ್ಯಾರ್ಥಿನಿಲಯಕ್ಕೆ ಸೇರಿ ಲೋಯರ್ ಸೆಕಂಡರಿ ಶಿಕ್ಷಣವನ್ನು ಪಡೆದರು. ಪ್ರೌಢಶಾಲಾ ಶಿಕ್ಷಣ ಪಡೆದ ಇವರಿಗೆ ಪ್ರಥಮ ದರ್ಜೆಯ ದಫೆದಾರರಾಗಿ ಸರ್ಕಾರಿ ನೌಕರಿ ದೊರೆಯಿತು. ಆದರು ಮಲ್ಲಯ್ಯನವರನ್ನು ವಿರೋಧಿಸಿದ್ದರ ಪರಿಣಾಮ ಆ ಹುದ್ದೆಯನ್ನು ತಿರಸ್ಕರಿಸಿ ೧೯೪೪ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಮಳವಳ್ಳಿ ಮೈಸೂರು ನರಸೀಪುರ ಶಾಲೆಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ನಂತರ ವಿದ್ಯಾ ಇಲಾಖೆಯ ಪ್ರಥಮದರ್ಜೆ ಗುಮಾಸ್ತರಾಗಿ ನೇಮಕಗೊಂಡರು.

ಶಿಕ್ಷಕರಾಗಿ ಸೇವೆಸಲ್ಲಿಸುತ್ತಿದ್ದ ವೇಳೆಯಲ್ಲಿ ದಲಿತ ಕೇರಿಗೆ ಹೋಗಿ ಮಕ್ಕಳನ್ನು ಶಾಲೆಗೆ ಸೇರಿಸುವಂತೆ ತಂದೆತಾಯಿಯಗಳಿಗೆ ವಿದ್ಯೆಯ ಮಹತ್ವವನ್ನು ತಿಳಿಸಿ ಅವರ ಮಕ್ಕಳನ್ನು ಶಾಲೆಗೆ ದಾಖಲಿಸುವಂತೆ ಮಾಡುತ್ತಿದ್ದರು. ಇಂದು ಮಳವಳ್ಳಿಯಲ್ಲಿ ಎಲ್ಲಾ ವರ್ಗದ ಜನ ಶಿಕ್ಷಣ ಪಡೆದಿದ್ದಾರೆ ಎನ್ನುವುದಾದರೆ ಅದು ಮಾದಯ್ಯನವರ ಪ್ರೋತ್ಸಾಹ ಮತ್ತು ಪ್ರೇರಣೆ ಎಂದು ಹೇಳಬಹುದು. ಏಕೆಂದರೆ ಕ್ಷೇತ್ರಕಾರ್ಯ ಕೈಗೊಂಡ ಸಮಯದಲ್ಲಿ ಮಳವಳ್ಳಿಯ ಪ್ರಮುಖ ವ್ಯಕ್ತಿಗಳನ್ನು ಸಂದರ್ಶನ ಮಾಡಿದಾಗ ಈ ಮೇಲಿನ ವಿಷಯವನ್ನು ತಿಳಿಸಿದರು. ಹಾಗಾಗಿ ತಮ್ಮ ವೃತ್ತಿ ಜೀವನದ ವೇಳೆಯಲ್ಲಿ ಮಕ್ಕಳನ್ನು ಶಾಲೆಗೆ ಸೇರಿಸಿ ಅವರಿಗೆ ಶಿಕ್ಷಣ ಕೊಡುವುದೇ ಅವರ ಮುಖ್ಯ ಧ್ಯೇಯವಾಗಿದ್ದಿತು.

ವಿದ್ಯಾರ್ಥಿಯಾಗಿರುವಾಗಲೇ ಗೋಪಾಲಸ್ವಾಮಿಅಯ್ಯರ್‌ರವರ ಜೊತೆಯಲ್ಲಿ ಸಮಾಜ ಸುಧಾರಣಾ ಕಾರ್ಯದಲ್ಲಿ ತೊಡಗಿಸಿಕೊಂಡ ಮಾದಯ್ಯನವರು ೧೯೩೪ ಮಿಥಿಕ್ ಸೊಸೈಟಿಯಲ್ಲಿ ಪಾರಂಕಮಿಟಿ ಅಥವಾ "ಸುಧಾರಣಾ ಸಮಿತಿಯೊಂದು ಸ್ಥಾಪನೆಯಾಯಿತು. ಈ ಸಮಿತಿಯ ಸದಸ್ಯರಾಗಿದ್ದ ಇವರು ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡುವ ಶಪಥ ಮಾಡಿದರು. ಅಲ್ಲದೆ "ನಾವು ಕೆಟ್ಟ ಸವರ್ಣೀಯರ ಹೆಬ್ಬೆಟ್ಟಿನಡಿಯಲ್ಲಿದ್ದೇವೆ." ಎಂದು ಆಗಾಗ್ಗೆ ಹೇಳುತ್ತಿದ್ದರೆಂದು ಡಾ. ಜಿ. ಗೋಪಾಲ್‌ರವರು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಈ ಹಿನ್ನಲೆಯಲ್ಲಿ ಮಾದಯ್ಯನವರು ದಲಿತ ಜನಾಂಗದ ಶೈಕ್ಷಣಿಕ ಸಾಮಾಜಿಕ ಮತ್ತು ರಾಜಕೀಯ ಬೆಳವಣಿಗೆಗಾಗಿ ಮುಂದೆ ತಮ್ಮನು ತೊಡಗಿಸಿಕೊಂಡರು. ಗಾಂಧಿವಾದಿಗಳಾಗಿದ್ದ ಇವರನ್ನು ಅಯ್ಯರ್‌ರವರು ಗುಜರಾತಿನ ಅಹಮದಾಬಾದ್‌ನಲ್ಲಿ ಗಾಂಧೀಜಿಯವರಿಂದ ಸ್ಥಾಪಿಸಲ್ಪಟ್ಟಿದ್ದ ಸಬರಮತಿ ಆಶ್ರಮಕ್ಕೆ ಕಳುಹಿಸಿದ್ದರು. ಇಲ್ಲಿ ಹತ್ತು ತಿಂಗಳುಗಳ ಕಾಲ ವಾಸವಿದ್ದ ಮಾದಯ್ಯನವರು ಗಾಂಧಿಯವರ ಸೇವೆಮಾಡಿ ಮತ್ತಷ್ಟು ಪ್ರಭಾವಿತರಾಗಿ ಬಂದಿದ್ದರು. ಇದೇ ವೇಳೆಗೆ ಅಂದರೆ ೧೯೩೨ರಲ್ಲಿ ಮೈಸೂರು ಸರ್ಕಾರವು ದಲಿತರು ಸಾರ್ವಜನಿಕ ಕೆರೆ ಕಟ್ಟೆ ಮತ್ತು ಬಾವಿಗಳಲ್ಲಿ ನೀರು ಬಳಸ ಬಹುದೆಂದು ಆಜ್ಞೆಯನ್ನು ಹೊರಡಿಸಿತು. ಇದರಿಂದ ಪ್ರೇರಣೆ ಪಡೆದ ಮಾದಯ್ಯನವರು ತಮ್ಮೂರಿನ ದಲಿತರು ಕುನ್ನಿರುಕಟ್ಟೆಯಲ್ಲಿ ನೀರು ತೆಗೆದುಕೊಳ್ಳುವಂತೆ ವ್ಯವಸ್ಥೆ ಮಾಡಿದರು.

ಹೀಗೆ ಅಯ್ಯರ್ ಮತ್ತು ಗಾಂಧಿಯವರಿಂದ ಪ್ರಭಾವಿತರಾಗಿದ್ದ ಮಾದಯ್ಯನವರು ವಿದ್ಯಾ ಇಲಾಖೆಯ ಗುಮಾಸ್ತರಾಗಿದ್ದ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು. ಅಂದರೆ ಆದಿಕರ್ನಾಟಕ ವಿದ್ಯಾರ್ಥಿನಿಲಯದಲ್ಲಿ ಕಾರ್ಯದರ್ಶಿಯಾಗಿದ್ದರಿಂದ ಒಮ್ಮೆ ತಡವಾಗಿ ಕಛೇರಿಗೆ ಹೋದರು. ಇದನ್ನು ಗಮನಿಸಿದ ಅಂದಿನ ವಿದ್ಯೆ ಇಲಾಖೆಯ ನಿರ್ದೇಶಕರಾಗಿದ್ದ ಎನ್.ಎಸ್. ಸುಬ್ಬರಾವ್ ಕೋಪದಿಂದ "ಬರೀ ಹೊಲೇರ್ಗೆನೇ ಸರ್ಕಾರ ಇರೋದು, ಹೊಲೇರು ಉದ್ಧಾರವಾದರೆ ಲೋಕಾನೆ ತಲೆಕೆಳಕಾಗಿ ಹೋಗುತ್ತದೆ. ನೀನು ಹೊಲೇಯರ ಕೆಲಸ ಮಾಡ್ತ ಲೇಟಾಗಿ ಬರ್‍ತಿಯಾ? ಎಂದು ಹೇಳಿದರು. ಇಲ್ಲಿ ನಾಲ್ವಡಿಯವರು ಸರ್ಕಾರ ಪಂಚಮರಿಗಾಗಿ ಕೈಗೊಂಡ ಕಾರ್ಯಗಳನ್ನು ಸಹಿಸಿಕೊಳ್ಳದ ನಿರ್ದೇಶಕರು ಹೀಗೆ ಮಾತನಾಡಿರುವುದನ್ನು ಗಮನಿಸಿದರೆ ಅವರಿಗೆ ಪಂಚಮರು ವಿದ್ಯೆ ಕಲಿಯುವುದು ಇಷ್ಟವಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಧೈರ್ಯ ಮತ್ತು ಎದೆಗಾರಿಕೆಯನ್ನು ಹೊಂದಿದ್ದ ಮಾದಯ್ಯನವರು ಎದುರುತ್ತರ ನೀಡುತ್ತಾ "ನಾನು ಹುಟ್ಟಿರೋದೆ ಆ ಜಾತಿಯಲ್ಲಿ ಆ ಜಾತಿ ಸೇವೆಗಿಂತ ಹೆಚ್ಚಿನ ಸೇವೆ ಇನ್ಯಾವುದಿದೆ ಸಾರ್! ಎಂದು ಹೇಳಿ ನಾನು ಹೊಲೇರ ಸೇವೆ ಮಾಡ್ತಿನಿ. ನೀವು ಸರ್ಕಾರದ ಸೇವೆ ಮಾಡಿ" ಎಂದು ತಕ್ಷಣ ರಾಜಿನಾಮೆ ಬರೆದುಕೊಟ್ಟು ನಾನು ನಿಮ್ಮ ಸೇವಕನಲ್ಲ. ನನ್ನ ಜನರ ಸೇವಕ. ನಿಮ್ಮ ಕೆಲಸವಿದೆಯಲ್ಲಾ ಸಾರ್ ಅದು ನನ್ನ ಕೆಲಸದ ಮುಂದೆ ಏನೇನು ಸಾಟಿಯಿಲ್ಲ ಎಂದು ಹೇಳಿ ಹೋದರು. ಎಂದು ಅವರ ಮಗ ಮಲ್ಲಿಕಾರ್ಜುನವರು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ತಿಳಿಸಿರುತ್ತಾರೆ. ಇದರಿಂದ ಮಾದಯ್ಯನವರು ತಮ್ಮ ಜನಾಂಗದ ಬಗ್ಗೆ ಎಷ್ಟು ಕಾಳಜಿ ಹೊಂದಿದ್ದರೆಂಬುದು ತಿಳಿದುಬರುತ್ತದೆ.

ನಂತರ ಮತ್ತೆ ಶಿಕ್ಷಕ ವ್ಯಕ್ತಿಯನ್ನು ಮುಂದುವರೆಸಿದ ಮಾದಯ್ಯನವರು ಅಯ್ಯರ್‌ರವರ ಅನುಯಾಯಿಗಳಾಗಿ ಆದಿಕರ್ನಾಟಕ ಅಭಿವೃದ್ಧಿ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಹೀಗೆ ಶಿಕ್ಷಕರಾಗಿ ಗುಮಾಸ್ತರಾಗಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಮಾದಯ್ಯನವರು ೧೯೭೩ರಲ್ಲಿ ಶಿಕ್ಷಕ ಸೇವೆಯಿಂದ ನಿವೃತ್ತಿಹೊಂದಿ ನಂತರ ದಿನಾಂಕ ೧೩.೧೨.೧೯೯೦ರಂದು ಮರಣ ಹೊಂದಿದರು.

**೫. ವೆಂಕಟಯ್ಯ**

ಆಧುನಿಕ ಕನ್ನಡ ಮೊದಲ ತಲೆಮಾರು ದಲಿತ ಲೇಖಕರಲ್ಲಿ ಜಿ. ವೆಂಕಟಯ್ಯನವರು ಒಬ್ಬರು. ಹಾಗೂ ಶಿಕ್ಷಣ ಪಡೆದ ದಲಿತ ಮಹನೀಯರಲ್ಲಿಯೂ ಒಬ್ಬರು. ಇವರು ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕಿನ ಹೆಮ್ಮನಹಳ್ಳಿ ಎಂಬ ಗ್ರಾಮದಲ್ಲಿ ಗಿರಿಯಯ್ಯ ಮತ್ತು ಸಿದ್ದಮ್ಮರ ಮಗನಾಗಿ ದಿನಾಂಕ ೧೦.೦೪.೧೯೧೩ರಲ್ಲಿ ಜನಿಸಿದರು. ಈ ದಂಪತಿಗಳಿಗೆ ಆರು ಮಂದಿ ಮಕ್ಕಳಲ್ಲಿ ಜಿ. ವೆಂಕಟಯ್ಯನವರು ಮೊದಲನೆಯರು. ಉಳಿದವರುಗಳಲ್ಲಿ ಡಾ. ಜಿ. ಗೋಪಾಲ್ ಜಿ. ಯಾಲಕ್ಕಯ್ಯ ಮತ್ತು ಉಳಿದವರು ಹೆಣ್ಣುಮಕ್ಕಳು. ಇವರದು ಬಡತನದ ಕುಟುಂಬ ಹೀಗಿದ್ದರೂ ಜಿ. ವೆಂಕಟಯ್ಯನವರು ಓದುವ ವಿಷಯದಲ್ಲಿ ಹೆಚ್ಚಿನ ಶ್ರದ್ಧೆಯುಳ್ಳವರಾಗಿದ್ದರು. ಹಾಗಾಗಿ ಇವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ತಮ್ಮ ಸ್ವಗ್ರಾಮದಲ್ಲಿ ಪ್ರಾರಂಭಿಸಿ ನಂತರ ಕೂಲಿಮಠದಲ್ಲಿ ಅಧ್ಯಯನ ಮುಂದುವರಿಸಿದರು. ಶಿಕ್ಷಣ ಪಡೆಯಲೇಬೇಕೆನ್ನುವ ಅದಮ್ಯ ಬಯಕೆಯಿಂದ ಬೆಂಗಳೂರಿನ ನರಸಿಂಹರಾಜ ವಿದ್ಯಾರ್ಥಿನಿಲಯಕ್ಕೆ ಸೇರಿ ಕೋಟೆ ಪ್ರೌಢಶಾಲೆ (ಕೂಲಿಜಿಯಟ್ ಹೈಸ್ಕೂಲ್)ನಲ್ಲಿ ಸೇರಿದರು. ಶ್ರೀಯುತರು ತಮ್ಮ

ವಿದ್ಯಾರ್ಥಿ ದಿಸೆಯಲ್ಲಿಯೇ ಬರವಣಿಗೆಯಲ್ಲಿ ತೊಡಗಿಸಿಕೊಂಡು ಅಂದಿನ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಕುರಿತು ಚರ್ಚಿಸುತ್ತಿದ್ದರು. ನಂತರ ಇಂಟರ್‌ಮೀಡಿಯಟ್ ತರಗತಿಗೆ ಪ್ರವೇಶ ಪಡೆದರು. ಇಲ್ಲಿ ಕುವೆಂಪು, ಡಿ.ಎಲ್. ನರಸಿಂಹಾಚಾರ್ ತೀ.ನಂ. ಶ್ರೀಕಂಠಯ್ಯನವರು ಗುರುಗಳಾಗಿದ್ದರು. ಇವರಿಂದ ಸ್ಫೂರ್ತಿಯನ್ನು ಪಡೆದು ಇನ್ನು ಹೆಚ್ಚಿನದಾಗಿ ಬರವಣಿಗೆಯಲ್ಲಿ ತೊಡಗಿಸಿಕೊಂಡರು. ಹಾಗೂ ಗಾಂಧೀಜಿಯು ೧೯೩೪ರಲ್ಲಿ ಸೋಮನಹಳ್ಳಿಗೆ ಬಂದಿದ್ದಾಗ ವೆಂಕಟಯ್ಯನವರನ್ನು ಬೇಟಿ ಮಾಡಿದ್ದರು. ಅಲ್ಲದೆ ಈ ಹಳ್ಳಿಯಲ್ಲಿ ಅಸ್ಪೃಶ್ಯತೆಯ ನಿರ್ಮೂಲನೆಯ ಬಗ್ಗೆ ಭಾಷಣ ಮಾಡಿದ್ದರು. ಈ ವಿಚಾರ ಕುರಿತು ವೆಂಕಟಯ್ಯನವರು ತಮ್ಮ 'ನೊಂದಜೀವ' ಎಂಬ ಕಾದಂಬರಿಯಲ್ಲಿ ಬರೆದಿದ್ದಾರೆ. ಆದ್ದರಿಂದ ತಮ್ಮ ಗುರುವೃಂದ ಮತ್ತು ಗಾಂಧೀಜಿಯವರಿಂದ ಪ್ರಭಾವಿತರಾಗಿ ಅದರಲ್ಲಿಯೂ ಗೋಪಾಲಸ್ವಾಮಿ ಅಯ್ಯರ್‌ರವರ ಸಮಾಜ ಸುಧಾರಣೆ ಕಾರ್ಯಗಳಿಗೆ ಮಾರುಹೋಗಿ ದಲಿತ ಜನಾಂಗದ ಅಭಿವೃದ್ಧಿಗಾಗಿ ಸಂಕಲ್ಪ ಮಾಡಿದರು.

ಈ ವೇಳೆಗಾಗಲೇ ವೆಂಕಟಯ್ಯನವರ ಮನೆಯ ಬದುಕು ತುಂಬಾ ಕಷ್ಟಕರವಾಗಿದ್ದರಿಂದ ಏನಾದರೊಂದು ಕೆಲಸಕ್ಕೆ ಸೇರಲೇಬೇಕು ಎಂಬ ಅದಮ್ಯ ಉತ್ಸಾಹ ಹೊಂದಿದ್ದರು. ಕೊನೆಗೆ ಗುಮಾಸ್ತರಾಗಿ ಸೇರಿಕೊಂಡರು. ನಂತರ ಹಂತಹಂತವಾಗಿ ಕಾರ್ಯ ನಿರ್ವಹಿಸಿ ಹೆಡ್ ಮುನಿಷಿಯಾಗಿ, ಲೆಕ್ಕ ತನಿಖಾಧಿಕಾರಿಯಾಗಿ ಸರ್ಕಾರಿ ಕೆಲಸ ಮಾಡಿದರು. ನಿರಂತರವಾಗಿ ಬಡತನವನ್ನು ಅನುಭವಿಸುತ್ತಲೇ ಬಂದರೂ ತಮ್ಮ ಬರವಣಿಗೆಯನ್ನು ಮತ್ತು ಜನಾಂಗ ಅಭಿವೃಧ್ಧಿ ಕಾರ್ಯಗಳನ್ನು ಬಿಡಲಿಲ್ಲ. ಜನಾಂಗದ ಬಗ್ಗೆ ಅಪಾರ ಕಾಳಜಿ ಹೊಂದಿದ್ದರು ಎಂಬುದರ ಬಗ್ಗೆ ಹೇಳುವುದಾದರೆ ತಮ್ಮ ಊರಿನ ಹರಿಜನರ ಬಡಾವಣೆಗೆ ಮತ್ತು ದಾಯಾದಿಗಳು ವಾಸವಿದ್ದ ನಿಡಗಟ್ಟ ಗ್ರಾಮದ ಜನರ ಬಡಾವಣೆಗಾಗಿ ಸರ್ಕಾರಕ್ಕೆ ಅರ್ಜಿ ಬರೆದು ಅಯ್ಯರ್‌ರವರ ಮೂಲಕ ತಮ್ಮ ಜನಾಂಗಕ್ಕೆ ನ್ಯಾಯ ದೊರಕಿಸಿಕೊಟ್ಟಿದ್ದನ್ನು ಸ್ಮರಿಸಬಹುದು.

ದಲಿತ ಜನಾಂಗದ ಅಭ್ಯುದಯಕ್ಕಾಗಿ ಮೂರು ದಶಕಗಳ ಕಾಲ ತಮ್ಮ ಜೀವಮಾನವನ್ನೇ ಮೂಡುಪಾಗಿಟ್ಟ ದಿವಗಂತ ಆರ್. ಗೋಪಾಲಸ್ವಾಮಿಅಯ್ಯರ್‌ರವರ ಮಾರ್ಗದರ್ಶನದಲ್ಲೂ ಕಾರ್ಯ ಪ್ರವೃತ್ತರಾದ ವೆಂಕಟಯ್ಯನವರು ಒಬ್ಬ ನಿಷ್ಠಾವಂತ ಸಮಾಜ ಸೇವಕರಾಗಿದ್ದರು. ದಲಿತ ಜನಾಂಗದ ಉನ್ನತಿಗಾಗಿ ಶ್ರಮಿಸುವುದೆ ಅವರ ಮುಖ್ಯಧ್ಯೇಯವಾಗಿದ್ದಿತು. ನಿರಂತರ ಬಡತನ ಖಾಯಿಲೆ ಕೌಟಂಬಿಕ ತಾಪತ್ರಯ ಇವುಗಳ ನಡುವೆಯೂ ಅವರು ಶಾಶ್ವತವಾಗಿ ನಿಲ್ಲುವ ಗಮನಾರ್ಹ ಸಾಹಿತ್ಯವನ್ನು ರಚನೆ ಮಾಡಿದ್ದಾರೆ. ಇವರ ಸಾಹಿತ್ಯ ಸೇವೆಯನ್ನು ಗಮನಿಸಿದ ಕರ್ನಾಟಕ ಸರ್ಕಾರ ಮಾಸಾಶನವನ್ನು ಮುಂಜೂರು ಮಾಡಿತು. ಹಾಗೆಯೇ ೧೯೭೭ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಗೌರವವೂ ಸಹ ಲಭಿಸಿತು. ಹೀಗೆ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡ ಜಿ. ವೆಂಕಟಯ್ಯನವರು ಒಟ್ಟು ಹತ್ತು ಕೃತಿಗಳನ್ನು ಬರೆದಿದ್ದಾರೆ ಅವು.

| | | |
|---|---|---|
| ೧. | ಒಂದು ಕತೆ ಸಂಗ್ರಹ | ಮಗಳ ಮಾಂಗಲ್ಯ (೧೯೫೭) |
| ೨. | ಮೂರು ಕಾದಂಬರಿಗಳು | ನೊಂದಜೀವ (೧೯೫೫), ಮುರಿದ ಮದುವೆ (೧೯೫೧), ಚಂದನದ ಕೊಂಡು (೧೯೭೫). |

| | |
|---|---|
| ೩. ಎರಡು ಜೀವನ ಚರಿತ್ರೆಗಳು | ಬುದ್ಧದೇವ (೧೯೫೪), ಶ್ರೀ ಶಾರದಾಮಣಿ ದೇವಿ (೧೯೫೯), |
| ೪. ಮೂರು ಪ್ರಕಾಶನಗಳು | ಬನದ ಸೆರಗು (೧೯೬೭) ನಿಸರ್ಗದ ಮಡಿಲು (೧೯೬೨), ಚಿನ್ನದ ಗಿರಿಯಾತ್ರೆ (೧೯೫೭) |
| ೫. ಒಂದು ಮಕ್ಕಳ ಸಾಹಿತ್ಯ | ಬುದ್ದದೇವ. |

ಬುದ್ಧದೇವ ಕೃತಿಯು ೧೯೬೧ರಲ್ಲಿ ಕೇಂದ್ರ ಸರ್ಕಾರದ ಶಿಕ್ಷಣ ಇಲಾಖೆಯ ಸ್ಪರ್ಧೆಯಲ್ಲಿ ಬಹುಮಾನ ಪಡೆದು ನಂತರ ೧೯೬೫ರಲ್ಲಿ ಇಂಗ್ಲಿಷ್ ಆವೃತ್ತಿಯಲ್ಲಿ ಪ್ರಕಟವಾಯಿತು. ಹಾಗೂ ಬನದ ಸೆರಗು ಎಂಬ ಕೃತಿಯು ದ್ವಿತಿಯ ಪಿ.ಯು.ಸಿ. ತರಗತಿಗೆ ಪಠ್ಯಪುಸ್ತಕವಾಗಿತ್ತು. ಹೀಗೆ ಜನಾಂಗದ ಮತ್ತು ಕನ್ನಡ ಸಾಹಿತ್ಯಕ್ಕೆ ಅಭೂತಪೂರ್ವ ಕೊಡುಗೆ ನೀಡಿದ ಜಿ. ವೆಂಕಟಯ್ಯನವರು ೧೯೨೯ರಲ್ಲಿ ನಿಧನರಾದರು.

**ಎಂ. ಶಂಕರಯ್ಯ**

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಶಿಷ್ಯರು ಮತ್ತು ದಲಿತ ಜನಾಂಗದಲ್ಲಿ ಶಿಕ್ಷಣ ಪಡೆದ ಪ್ರಥಮ ವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀಯುತ ಎಂ. ಶಂಕರಯ್ಯನವರು ಚಿಕ್ಕಪಾಪಯ್ಯ ಮತ್ತು ಪುಟ್ಟಮ್ಮ ಎಂಬ ದಂಪತಿಗಳ ರೈತ ಕುಟುಂಬದಲ್ಲಿ ದಿನಾಂಕ ೦೧.೦೯.೧೨೧೨ರಲ್ಲಿ ಮಳವಳ್ಳಿಯಲ್ಲಿ ಜನಿಸಿದರು. ಈ ದಂಪತಿಗಳಿಗೆ ಒಟ್ಟು ಐದು ಜನ ಮಕ್ಕಳಲ್ಲಿ ಮೂರು ಗಂಡು ಮತ್ತು ಎರಡು ಹೆಣ್ಣುಮಕ್ಕಳಿದ್ದರು. ಇವರುಗಳಲ್ಲಿ ಕೊನೆಯ ಮಗನೇ ಶ್ರೀಯುತ ಶಂಕರಯ್ಯನವರು. ಇವರ ತಂದೆಯಾದ ಚಿಕ್ಕಪಾಪಯ್ಯನವರು ಮೈಸೂರು ಸಂಸ್ಥಾನದ ಕುದುರೆ ಲಾಯದಲ್ಲಿ ಕೆಲಸ ಮಾಡುತ್ತಿದ್ದರು. ಹಾಗಾಗಿ ಇವರಿಗೆ ಕುದುರೆ ಪಾಪಯ್ಯ ಎಂದು ಕರೆಯುತ್ತಿದ್ದರು.

ಕಿರಿಯ ಮಗನಾದ ಶಂಕರಯ್ಯನವರನ್ನು ದಂಪತಿಗಳು ಬಹಳ ಅಕ್ಕರೆಯಿಂದ ಬೆಳೆಸಿದ ಅವರಿಗೆ ಮಳವಳ್ಳಿಯ ಸರ್ಕಾರಿ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕೊಡಿಸಿದರು. ಆದರೆ ಶಂಕರಯ್ಯನವರು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿರುವಾಗಲೇ ತಮ್ಮ ತಂದೆಯನ್ನು ಕಳೆದುಕೊಂಡರು. ನಂತರ ತಮ್ಮ ಶಿಕ್ಷಣವನ್ನು ಮುಂದುವರೆಸಿ ಮಳವಳ್ಳಿಯಲ್ಲಿಯೇ ಮಾಧ್ಯಮಿಕ ಶಿಕ್ಷಣವನ್ನು ಪಡೆದರು. ಆದರೆ ಏಳನೇ ತರಗತಿಯಲ್ಲಿ ಅನುತ್ತೀರ್ಣಗೊಂಡರೂ ಸಹ ಗೋಪಾಲಸ್ವಾಮಿಅಯ್ಯರ್‌ರವರ ಪ್ರಭಾವಕ್ಕೊಳಗಾಗಿ ಪುನಃ ಪರೀಕ್ಷೆಯನ್ನು ತೆಗೆದುಕೊಂಡು ಉತ್ತೀರ್ಣರಾದರು. ನಂತರ ಬೆಂಗಳೂರಿನ ನರಸಿಂಹರಾಜ ವಿದ್ಯಾರ್ಥಿನಿಲಯಕ್ಕೆ ಸೇರಿ ಅಯ್ಯರ್‌ರವರ ಶಿಷ್ಯರಾಗಿ ೧೯೩೦ರಲ್ಲಿ ಪ್ರೌಢಶಾಲಾ ಶಿಕ್ಷಣವನ್ನು ಪಡೆದರು. ಇದೇ ಸಂದರ್ಭದಲ್ಲಿ ಮಳವಳ್ಳಿಯಲ್ಲಿ ನಡೆದ ಕುನ್ನಿರುಕಟ್ಟೆ ವಿವಾದಲ್ಲಿ ಇವರು ನಿರ್ಣಾಯಕ ಪಾತ್ರವಹಿಸಿದರು. ಈ ವೇಳೆಗಾಗಲೇ ಅಯ್ಯರ್‌ರವರ ಸಮಾಜ ಸುಧಾರಣಾ ಕಾರ್ಯಗಳಿಂದ ಪ್ರಭಾವಿತರಾಗಿದ್ದರು.

ಉತ್ತಮ ವಾಗ್ಮಿಗಳಾದ ಶಂಕರಯ್ಯನವರು ಶಿಕ್ಷಣವನ್ನು ಮುಂದುವರೆಸಿ ಕಾಲೇಜು ಮಟ್ಟದಲ್ಲಿ

ಕೃಷಿ ಶಾಲೆಗೆ ಸೇರಿ ಚಿನ್ನದ ಪದಕ ಪಡೆದು ಉತ್ತೀರ್ಣರಾದರು. ನಂತರ ೧೯೩೩ರಲ್ಲಿ ಮೂಡಿಗೆರೆಯಲ್ಲಿ ಕೃಷಿ ತನಿಖಾಧಿಕಾರಿಯಾಗಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ನಂತರ ಚನ್ನಪಟ್ಟಣ, ಹೊಸನಗರ, ಸಾಗರ ಚಿಕ್ಕಮಗಳೂರುಗಳಲ್ಲಿ ಕೇವಲ ಐದು ವರ್ಷ ಐದು ತಿಂಗಳು ಕಾಲ ಸೇವೆಸಲ್ಲಿಸಿದರು. ಚಿಕ್ಕಮಗಳೂರಿನಲ್ಲಿ ಸೇವಾ ನಿರತರಾಗಿದ್ದಾಗ ಅವರ ಅಜ್ಜಿಯ ಅನಾರೋಗ್ಯದ ನಿಮಿತ್ತ ಮಳವಳ್ಳಿಗೆ ಬಂದಾಗ ಕೆಲವು ಜನ ಕಿಡಿಗೇಡಿಗಳು ಅಥವಾ ಇವರಿಗೆ ಆಗದವರು ಕಛೇರಿಯಲ್ಲಿ ಕೆಲವು ಪ್ರಮುಖ ಕಡತಗಳನ್ನು ಸುಟ್ಟುಹಾಕಿದರು. ಪರಿಣಾಮ ಶಂಕರಯ್ಯನವರನ್ನು ಸೇವೆಯಿಂದ ಅಮಾನತ್ತಿಲ್ಲಿಡಲಾಯಿತು. ಇದರಿಂದ ಮನನೊಂದ ಶಂಕರಯ್ಯನವರು ಹೈಕೋರ್ಟ್‌ನಲ್ಲಿ ದಾವೆ ಹೂಡಿದರು. ಆದರೆ ಇವರ ಮೇಲೆಯೇ ಅಪಾದನೆ ಹೊರಸಿ ವೃತ್ತಿಯಿಂದ ಹಿಂತೆಗೆದುಕೊಳ್ಳಲಾಯಿತು. ಇಷ್ಟಕ್ಕೆ ಸುಮ್ಮನಿರದ ಶಂಕರಯ್ಯನವರು ಸುಪ್ರೀಂಕೋರ್ಟ್‌ಗೆ ದಾವೆ ಹೂಡಿ ನ್ಯಾಯ ದೊರಕಿಸಿ ಕೊಂಡರು. ಹೀಗೆ ಬದುಕಿನ ಜಂಜಾಟದಲ್ಲಿ ಬಳಲಿಸಿದ ಶಂಕರಯ್ಯನವರು ಮತ್ತೆ ಕೃಷಿ ತನಿಖಾಧಿಕಾರಿ ಯಾಗಿ ಸೇವೆ ಪ್ರಾರಂಭಿಸಿ ಕೊನೆಗೆ ೧೯೬೨ರಲ್ಲಿ ನಿವೃತ್ತಿ ಹೊಂದಿದರು.

ಸರ್ಕಾರಿ ಸೇವೆಯಲ್ಲಿದ್ದುಕೊಂಡೇ ಶಂಕರಯ್ಯನವರು ತಮ್ಮ ಜನಾಂಗದವರಿಗೆ ಅಕ್ಷರ ಜ್ಞಾನದ ಮಹತ್ವನ್ನು ತಿಳಿಸಿ ಕಡ್ಡಾಯವಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಮಾಡಿದರು. ಹಾಗಾಗಿ ತಮ್ಮ ಜನಾಂಗದ ಮಕ್ಕಳಿಗೆ ಶಿಕ್ಷಣ ನೀಡುವ ಉದ್ದೇಶದಿಂದಾಗಿ ೧೯೭೭ರಲ್ಲಿ ಹೆಚ್.ಎಂ. ಗಂಗಾಧರಯ್ಯನವರೊಡನೆ ಜೊತೆಗೂಡಿ ಮಳ್ಳವಳ್ಳಿಯಲ್ಲಿ ಸಿದ್ಧಾರ್ಥ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿ ಜೀವಿತದ ಕೊನೆಯವರೆಗೂ ಈ ಸಂಸ್ಥೆಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ನಿವೃತ್ತಿ ಹೊಂದಿದ ಶಂಕರಯ್ಯನವರು ಪುರಸಭೆಯ ಚುನಾವಣೆಯಲ್ಲಿ ಸ್ಪರ್ಧಿಸಿ ಅಧ್ಯಕ್ಷರಾಗಿ ಆಯ್ಕೆಗೊಂಡು ಸವರ್ಣೀಯ ಮತ್ತು ತಮ್ಮ ಕೇರಿಗಳಿಗೆ ಒಳಚರಂಡಿ ವ್ಯವಸ್ಥೆ ಬೀದಿ ದೀಪ ಕುಡಿಯುವ ನೀರು ರಸ್ತೆ ನಿರ್ಮಾಣ ಕಾರ್ಯಗಳನ್ನು ಕೈಗೊಂಡು ಜನಪ್ರಿಯಗೊಂಡರು. ಪರಿಣಾಮ ಮುಂದೆ ರುದ್ರಪ್ಪ ಮಲ್ಲಿಕಾರ್ಜುನ ಸ್ವಾಮಿಯವರು ಚುನಾವಣೆಯಲ್ಲಿ ಸ್ಪರ್ಧಿಸಿ ಆಯ್ಕೆಯಾಗಲು ಕಾರಣಕರ್ತರಾದರು. ಹಾಗಾಗಿ ಚುನಾವಣೆಯ ಸಂದರ್ಭದಲ್ಲಿ ಶಂಕರಯ್ಯನವರು ಪ್ರಮುಖ ಕೇಂದ್ರ ಬಂಧುವಾಗಿದ್ದರು. ನಿರ್ಗಳವಾಗಿ ಆಂಗ್ಲ ಭಾಷೆಯನ್ನು ಮಾತನಾಡಬಲ್ಲವರಾಗಿದ್ದ ಇವರು ನೇರವಾದಿ ಮತ್ತು ಖಂಡಿತವಾದಿ ಗಳಾಗಿದ್ದರು ಹಾಗೂ ಜನಾಂಗದ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಇವರು ಅಸ್ಪೃಶ್ಯರಿಗಾಗಿ ಒಂದು ಪ್ರತ್ಯೇಕ ಕಾಲೋನಿಯನ್ನು ನಿರ್ಮಿಸಿಕೊಟ್ಟರು ಎಂದು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ ಮೇಲಿನ ಎಲ್ಲಾ ಮಾಹಿತಿಯನ್ನು ಅವರ ಮಗಳಾದ ಡಾ. ಅನಿತ (ಉಪನ್ಯಾಸಕರು) ಮತ್ತು ಮಗನಾದ ಶಿವಪ್ರಸಾದರವರು ತಿಳಿಸಿಕೊಟ್ಟಿದ್ದಾರೆ.

ಅಯ್ಯರ್‌ರವರಿಂದ ಪ್ರಭಾವಿತರಾದ ಶಂಕರಯ್ಯನವರು ತಮ್ಮ ಜನಾಂಗದ ಏಳಿಗೆಗಾಗಿ ದುಡಿದರು. ಹೀಗೆ ತಮ್ಮ ಜನಾಂಗಕ್ಕೆ ಶಿಕ್ಷಣ ಪ್ರತ್ಯೇಕ ಕಾಲೋನಿ, ಕುಡಿಯುವ ನೀರಿನ ವ್ಯವಸ್ಥೆ ಮೊದಲಾದವುಗಳನ್ನು ಕಲ್ಪಿಸಿಕೊಟ್ಟು ಒಬ್ಬ ರಾಜಕಾರಣಿಯಾಗಿ ಹೋರಹೊಮ್ಮಿದ ಶಂಕರಯ್ಯನವರು ೨೩.೦೯.೧೯೯೭ರಂದು ಬಾಳಿನ ಪರದೆಯ ಹಿಂದೆ ಸರಿದರು.

## ಡಾ. ಡಿ. ರುದ್ರಯ್ಯ

**ಬಾಲ್ಯ** : ಸ್ವತಂತ್ರಪೂರ್ವದಲ್ಲಿ ದಲಿತ ಜನಾಂಗದಲ್ಲಿ ಶಿಕ್ಷಣ ಪಡೆದ ಮೊದಲ ದಲಿತ ವ್ಯಕ್ತಿಗಳಲ್ಲಿ ಒಬ್ಬರಾದ ಡಾ. ಡಿ. ರುದ್ರಯ್ಯನವರು ವಿದೇಶದಲ್ಲಿ ಶಿಕ್ಷಣ ಪಡೆದು ಬಂದವರಲ್ಲಿ ಮೊದಲಿಗರಾಗಿದ್ದಾರೆ. ಇವರು ಮಳವಳ್ಳಿ ತಾಲೂಕಿನ ಡಿ. ಅಲಸಹಳ್ಳಿ ಎಂಬ ಗ್ರಾಮದಲ್ಲಿ ದೊಡ್ಡ ಸಿದ್ಧಯ್ಯ ಮತ್ತು ದೇವಮ್ಮ ಎಂಬುವರ ಮಗನಾಗಿ ೧೯೧೫ರಲ್ಲಿ ನವೆಂಬರ್ ೧೦ರಂದು ಜನಿಸಿದರು. ರೈತ ಕುಟುಂಬಕ್ಕೆ ಸೇರಿದ ಈ ದಂಪತಿಗಳಿಗೆ ಒಟ್ಟು ಏಳು ಜನ ಮಕ್ಕಳಿದ್ದರು. ಅವರುಗಳಲ್ಲಿ ಹಿರಿಯ ಮಗನೇ ಶ್ರೀಯುತ ಡಿ. ರುದ್ರಯ್ಯನವರು ಉಳಿದವರುಗಳೆಂದರೆ ಡಾ. ರಾಜಶೇಖರ್ ಜಯರಾಜು ಶಿವರಾಜ್ ಅರವಿಂದ್ ಅಶೋಕ ಲಲಿತ ಪದ್ಮಿನಿ ಬೀನಾ.

**ವಿದ್ಯಾಭ್ಯಾಸ** : ಡಿ. ರುದ್ರಯ್ಯನವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮಳವಳ್ಳಿಯಲ್ಲಿ ಪಡೆದರು. ನಂತರ ಮೈಸೂರಿನ ಆದಿಕರ್ನಾಟಕ ವಸತಿ ಶಾಲೆಯಲ್ಲಿ ಶಿಕ್ಷಣ ಮುಂದುವರೆಸಿ ಪ್ರೌಢಶಾಲಾ ಶಿಕ್ಷಣವನ್ನು ಪಡೆದರು. ನಂತರ ೧೯೩೮ರಲ್ಲಿ ಉನ್ನತ ಶಿಕ್ಷಣಕ್ಕಾಗಿ ಕಲ್ಕತ್ತಕ್ಕೆ ಹೋಗಿ ಅಲ್ಲಿ ಪಶುವೈದ್ಯ ವಿಜ್ಞಾನ(Veterinarya Science)ವನ್ನು ಬೆಂಗಾಲ್ ಪಶುವೈದ್ಯ ಕಾಲೇಜಿನಲ್ಲಿ ಬಿ.ಎಸ್ಸಿ ಪದವಿ ಪಡೆದು ನಂತರ ೧೯೪೭-೪೮ರ ಅವಧಿಯಲ್ಲಿ ಅಮೆರಿಕಾಕ್ಕೆ ಹೋಗಿ ಕೋಲಂಬೋ ಓಹಿಯೊ ರಾಜ್ಯ ವಿಶ್ವವಿದ್ಯಾಲಯದಲ್ಲಿ ಎಂ.ಎಸ್ಸಿ (Dairy Science) ಪದವಿಯನ್ನು ಪಡೆದರು. ಈ ಸಂದರ್ಭದಲ್ಲಿ ಶೈಕ್ಷಣಿಕ ಪ್ರವಾಸ ಕೈಗೊಂಡು ಡೆನ್ಮಾರ್ಕ್ ಹಾಲೆಂಡ್ ಸ್ವಿಡಾನ್ ಸ್ವಿಡ್ಜರ್‌ಲ್ಯಾಂಡ್ ಮಾಸ್ಕೋ ನಾರ್ವೆ ಪ್ರಾನ್ಸ್ ಮತ್ತು ಅಮೆರಿಕಾಗಳಲ್ಲಿ ಸಂಚರಿಸಿ ಭಿನ್ನದೇಶಗಳ ನಾಗರೀಕತೆ ಶಿಕ್ಷಣ ಪದ್ಧತಿ ಸಾಮಾಜಿಕ ಜೀವನ ಅಲ್ಲಿನ ಸ್ಥಿತಿಗತಿಗಳನ್ನು ಬಲ್ಲವರಾಗಿ ಜ್ಞಾನ ವೃದ್ಧಿಸಿಕೊಂಡಿದ್ದರು. ಹಾಗಾಗಿ ವಿದೇಶದಲ್ಲಿ ಶಿಕ್ಷಣ ಪಡೆದ ಮೊದಲ ದಲಿತವ್ಯಕ್ತಿ ಎಂದೇ ಹೇಳಬಹುದು. ಇವರು ವಿದೇಶದಲ್ಲಿ ಶಿಕ್ಷಣ ಪಡೆಯಲು ಅಂದಿನ ಮೈಸೂರು ಸರ್ಕಾರವೇ ಕಾರಣವೆಂದು ಹೇಳಬಹುದು.

**ಸೇವೆ** : ವಿದೇಶದಲ್ಲಿ ಶಿಕ್ಷಣ ಪಡೆದ ಡಿ. ರುದ್ರಯ್ಯನವರು ೧೯೩೮ರಲ್ಲಿ ಕರ್ನಾಟಕದ ಜಂಟಿ ವಿಭಾಗೀಯ ಹೈನುಗಾರಿಕೆ ಮತ್ತು ಪಶು ವೈದ್ಯಕೀಯ ಅಧ್ಯಕ್ಷರಾಗಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ನಂತರ ೧೯೪೭ರಲ್ಲಿ ಹಾಲು ಉತ್ಪಾದನಾ ಮಂಡಲಿಯ ಅಧಿಕಾರಿಯಾಗಿ ೧೯೫೮ರಲ್ಲಿ ಹಾಲು ಉತ್ಪಾದನಾ ಮಂಡಲಿ ವಿಶೇಷ ಅಧಿಕಾರಿಯಾಗಿ, ಮತ್ತು ೧೯೬೭ರಲ್ಲಿ ಕರ್ನಾಟಕದ ಪಶುವೈದ್ಯಕೀಯ ವಿಜ್ಞಾನ ಮತ್ತು ಹೈನುಗಾರಿಕೆ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಹಾಗೆಯೇ ವೃತ್ತಿ ಜೀವನದ ಸಂದರ್ಭದಲ್ಲಿ ಅನೇಕ ಸಂಸ್ಥೆಗಳ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಹಾಗೂ ಆಗ್ರೋ-ಇಂಡಸ್ಟ್ರೀಸ್ ಕಾರ್ಪೊರೇಷನ್‌ನ ಎಸ್.ಸಿ/ಎಸ್.ಟಿ. ನೌಕರರ ಸಂಘದ ಅಧ್ಯಕ್ಷ ರಾಗಿಯೂ ಸಹ ಕಾರ್ಯ ನಿರ್ವಹಿಸಿರುತ್ತಾರೆ.

ಹೀಗೆ ಮೂವತ್ತೆರಡು ವರ್ಷಗಳ ಕಾಲ ಕರ್ನಾಟಕದ ವಿವಿಧ ಇಲಾಖೆಗಳಲ್ಲಿ ಆಡಳಿತ ನಡೆಸಿದ ಇವರು ಸಾಧು ಸ್ವಭಾವುಳ್ಳವರಾಗಿದ್ದು ಆಡಳಿತದಲ್ಲಿ ಅಷ್ಟೇ ಚತುರರಾಗಿದ್ದರು. ೧೯೭೦ರಲ್ಲಿ ಸರ್ಕಾರಿ ಸೇವೆಯಿಂದ ನಿವೃತ್ತಿಯಾದ ನಂತರ ೧೯೭೨-೭೩ನೇ ಸಾಲಿನಲ್ಲಿ ನಡೆದ ವಿಧಾನ ಸಭೆ

ಚುನಾವಣೆಯಲ್ಲಿ ಮಳವಳ್ಳಿಯಿಂದ ಸಂಸ್ಥಾನ ಕಾಂಗ್ರೇಸ್ ಅಭ್ಯರ್ಥಿಯಾಗಿ ಕಾಂಗ್ರೇಸ್ ಮಲ್ಲಿಕಾರ್ಜುನ ಸ್ವಾಮಿಯವರ ವಿರುದ್ಧ ಸ್ಪರ್ಧಿಸಿ ಸೋಲು ಕಂಡರು. ವಿವಿಧ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಜನಾಂಗಕ್ಕೆ ತಮ್ಮದೇಯಾದ ಅನೇಕ ಕೊಡುಗೆಗಳನ್ನು ನೀಡಿದ್ದಾರೆ. ಅಂದರೆ ನಿರುದ್ಯೋಗಿಗಳಿಗೆ ಉದ್ಯೋಗ ಕೋಡಿಸುವುದು ಕುರಿಪಾರಂ ಕೋಳಿ ಪಾರಂಗಳನ್ನು ತೆರೆಯಲು ಅವಕಾಶ ಕಲ್ಪಿಸಿದ್ದು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವ ಮೂಲಕ ಸಾಮಾಜಿಕ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಇವರ ಪ್ರೇರಣೆಯಿಂದ ಶಿಕ್ಷಣ ಪಡೆದು ಸರ್ಕಾರ ಉದ್ಯೋಗವನ್ನು ಪಡೆದ ಪ್ರಮುಖ ವ್ಯಕ್ತಿಗಳೆಂದರೆ ನಾಗಭೂಷಣ ಮರಿಸಿದ್ಧಯ್ಯ ಚಂದ್ರಶೇಖರಯ್ಯ ಆನಂದ್ ನಂಜುಂಡಸ್ವಾಮಿ ಪಿ.ಎಲ್. ಕುಮಾರಸ್ವಾಮಿ ಮೊದಲಾದವರು. ರುದ್ರಯ್ಯನವರು ಮಳವಳ್ಳಿ ತಾಲೂಕಿನ ಪಕ್ಕದಲ್ಲಿದ್ದ ದನಗೂರಿನಲ್ಲಿ ಒಂದು ಕುರಿಪಾರಂನ್ನು ಸ್ಥಾಪಿಸಿದರು. ಅಲ್ಲದೆ ಮಳವಳ್ಳಿಯ ಸುತ್ತಮುತ್ತಲಿನ ಹಳ್ಳಿಗಳಿಗೆ ಭೇಟಿಕೊಟ್ಟು ದಲಿತವರ್ಗದ ಜನರಿಗೆ ಶಿಕ್ಷಣದ ಮಹತ್ವವನ್ನು ಮತ್ತು ಕಡ್ಡಾಯವಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಪ್ರಚೋಧನೆ ಮಾಡುತ್ತಿದ್ದರೆಂದು ಇದೇ ಗ್ರಾಮದ ಮಾಜಿ ತಾಲೂಕು ಪಂಚಾಯ್ತಿಯ ಅಧ್ಯಕ್ಷರಾದ ಸಿದ್ಧಲಿಂಗಮೂರ್ತಿಯವರು ಮತ್ತು ಅವರ ಮಗ ಅರವಿಂದ ಅಶೋಕರು ಕ್ಷೇತ್ರಕಾರ್ಯಕೈಗೊಂಡ ಸಂದರ್ಭದಲ್ಲಿ ಈ ಎಲ್ಲಾ ಮಾಹಿತಿಗಳನ್ನು ಒದಗಿಸಿಕೊಟ್ಟಿರುತ್ತಾರೆ.

ರುದ್ರಯ್ಯನವರು ಹಿಂದು ಧರ್ಮದ ಪೂಜೆ ಪುರಸ್ಕರಗಳನ್ನು ಸಂಪ್ರದಾಯಗಳನ್ನು ವಿರೋಧಿಸುತ್ತಿದ್ದ ರೆಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿತು. ಇದಕ್ಕೆ ಅವರು ವಿದೇಶಿ ಶಿಕ್ಷಣ ಪಡೆದಿದ್ದು ಮತ್ತು ವಿಜ್ಞಾನಶಾಸ್ತ್ರವನ್ನು ಅಧ್ಯಯನ ಮಾಡಿದ್ದರಿಂದ ಎಲ್ಲವನ್ನು ವೈಚಾರಿಕ ನೆಲೆಯಲ್ಲಿ ನೋಡಿರ ಬಹುದು. ಹಾಗೆಯೇ ದಲಿತರ ರಕ್ಷಣೆಗೆ ಎಷ್ಟೇ ಕಟ್ಟುನಿಟ್ಟಿನ ಕಾನೂನುಗಳಿದ್ದರೂ ಅದನ್ನು ಅನುಷ್ಠಾನಕ್ಕೆ ತರುವಲ್ಲಿ ಬದ್ಧತೆ ಇರದಿದ್ದರೆ ಪ್ರಯೋಜನವಿಲ್ಲ ಎಂದು ಹೇಳುತ್ತಿದ್ದರು ಎಂದು ಸಿದ್ಧಲಿಂಗಮೂರ್ತಿ ಯವರು ತಿಳಿಸಿರುತ್ತಾರೆ. ಹೀಗೆ ಜನಾಂಗದ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ರುದ್ರಯ್ಯನವರು ೧೯೮೭ ಮೇ ೧೨ರಂದು ಮರಣ ಹೊಂದಿದರು.

**ಡಾ. ಜಿ. ಗೋಪಾಲ್**

ಕರ್ನಾಟಕದಲ್ಲಿಯೇ ದಲಿತ ಜನಾಂಗದಲ್ಲಿ ಎಂ.ಬಿ.ಬಿ.ಎಸ್. ಪದವಿ ಶಿಕ್ಷಣ ಪಡೆದವರಲ್ಲಿ ಮೂರನೆಯವರು ಮತ್ತು ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಪ್ರಮುಖ ಗಣ್ಯ ವ್ಯಕ್ತಿಗಳಲ್ಲಿ ಡಾ. ಜಿ. ಗೋಪಾಲ್‌ರವರು ಒಬ್ಬರು. ಇವರು ಕರ್ನಾಟಕದ ಮೊದಲ ತಲೆಮಾರಿನ ದಲಿತ ಕವಿಗಳಲ್ಲಿ ಒಬ್ಬರಾದ ಜಿ. ವೆಂಕಟಯ್ಯನವರು ತಮ್ಮ. ಜಿ. ಗೋಪಾಲ್‌ರವರು ಮದ್ದೂರು ತಾಲೂಕಿನ ಹೆಮ್ಮನಹಳ್ಳಿ ಎಂಬ ಗ್ರಾಮದಲ್ಲಿ ಗಿರಿಯಯ್ಯ ಮತ್ತು ಸಿದ್ದಮ್ಮ ಎಂಬ ದಂತಿಗಳ ನಾಲ್ಕನೇ ಮಗನಾಗಿ ದಿನಾಂಕ ೧೫.೧೧.೧೯೩೧ರಲ್ಲಿ ಜನಿಸಿದರು. ಇವರದು ಬಡತನದ ಕುಟುಂಬವಾದರೂ ಸಂಪ್ರದಾಯಸ್ಥ ಮನೆತನವಾಗಿತ್ತು.

ಡಾ. ಜಿ. ಗೋಪಾಲ್‌ರವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮದ್ದೂರಿನಲ್ಲಿ ಪಡೆದು ನಂತರ ಸೋಮನಹಳ್ಳಿಯಲ್ಲಿ ಮುಂದುವರೆಸಿದರು. ನಂತರ ಬೆಂಗಳೂರಿನಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್

ರವರು ಪಂಚಮರಿಗಾಗಿ ಸ್ಥಾಪಿಸಿದ ನರಸಿಂಹರಾಜ ವಿದ್ಯಾರ್ಥಿನಿಲಯಕ್ಕೆ ಸೇರಿ ಮಲ್ಲೇಶ್ವರಂನ ಸರ್ಕಾರಿ ಪ್ರೌಢಶಾಲೆಗೆ ಸೇರಿಕೊಂಡರು. ಈ ಸಂದರ್ಭದಲ್ಲಿ ಇವರ ಜೊತೆಗೆ ಓದುತ್ತಿದ್ದವರೆಂದರೆ ಶಿವಲಿಂಗಯ್ಯ ಮತ್ತು ಪಿ.ಎಲ್. ನಂಜುಡಸ್ವಾಮಿಯವರು. ಪ್ರೌಢಶಾಲೆ ಶಿಕ್ಷಣ ಮುಗಿದ ನಂತರ ಮುಂದಿನ ಶಿಕ್ಷಣಕ್ಕಾಗಿ ಮೈಸೂರಿಗೆ ಬಂದು ಇಲ್ಲಿ ಯುವರಾಜ ಕಾಲೇಜಿನಲ್ಲಿ ಬಿ.ಎಸ್ಸಿ ಪದವಿಗೆ ಸೇರಿ ೧೯೫೦-೫೧ರಲ್ಲಿ ಉತ್ತೀರ್ಣರಾದರು. ನಂತರ ಮೈಸೂರಿನ ವೈದ್ಯಕೀಯ ಕಾಲೇಜಿಗೆ ಸೇರಿ ೧೯೫೮ರಲ್ಲಿ ಎಂ.ಬಿ.ಬಿ.ಎಸ್. ಪದವಿಯನ್ನು ಪಡೆದರು. ಕರ್ನಾಟಕದಲ್ಲಿಯೇ ಅದರಲ್ಲಿಯೂ ದಲಿತ ಜನಾಂಗದಲ್ಲಿ ಎಂ.ಬಿ.ಬಿ.ಎಸ್. ಪದವಿಯನ್ನು ಪಡೆದ ಮೂರನೆಯವರು ಎಂಬ ಹೆಗ್ಗಳಿಕೆಗೆ ಪಾತ್ರ ರಾಗಿದ್ದಾರೆ.

ಡಾಕ್ಟರ್ ಪದವಿ ಪಡೆದ ನಂತರ ಪ್ರಥಮ ಬಾರಿಗೆ ದಾವಣಗೆರೆಯಲ್ಲಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ನಂತರ ಬಳ್ಳಾರಿಯಲ್ಲಿ ವೈದ್ಯರಾಗಿ ಸೇವೆ ಸಲ್ಲಿಸಿದ್ದಾರೆ. ತದನಂತರದಲ್ಲಿ ಮೈಸೂರಿನ ಮೆಡಿಕಲ್ ಕಾಲೇಜಿಗೆ ಎಂ.ಎಸ್. ಪದವಿಗೆ ಸೇರಿ ೧೯೬೨ರಲ್ಲಿ ಪದವಿಯನ್ನು ಪಡೆದರು. ಆದ್ದರಿಂದ ಇವರನ್ನು ಮತ್ತೆ ದಾವಣಗೆರೆಗೆ ಜನರಲ್ ಸರ್ಜರಿಯಾಗಿ ಸರ್ಕಾರ ನೇಮಕ ಮಾಡಿತು. ಈ ಸಂದರ್ಭದಲ್ಲಿ ಗೋಪಾಲ್‌ರವರು ಒಂದು ಹೊಸ ಬದಲಾವಣೆಯನ್ನು ತಂದರು. ಅಂದರೆ ಇಲ್ಲಿಯ ವರೆಗೆ ಈ ಊರಿನಲ್ಲಿ ವೈದ್ಯರಾಗಿ ಸೇವೆಸಲ್ಲಿಸಿದ್ದ ಯಾವ ಒಬ್ಬ ವೈದ್ಯನು ಸಹ ಸರ್ಕಾರದಿಂದ ಉಚಿತವಾಗಿಕೊಡುತ್ತಿದ್ದ ಔಷಧ ಮಾತ್ರೆಗಳನ್ನು ಪುಕ್ಕಟೆಯಾಗಿ ಜನರಿಗೆ ನೀಡುತ್ತಿರಲಿಲ್ಲ. ಈ ವ್ಯವಸ್ಥೆಯನ್ನು ಮುರಿದು ಜನರಿಗೆ ಉಚಿತವಾಗಿ ಮಾತ್ರೆ ಔಷಧಗಳನ್ನು ನೀಡಿ ಸೇವೆ ಮಾಡಿರುತ್ತಾರೆ. ಅಲ್ಲದೆ ಅಂದಿನ ಸಂದರ್ಭದಲ್ಲಿ ಯಾವ ಒಬ್ಬ ವೈದ್ಯನು ದಲಿತ ಜನಾಂಗದ ಬೀದಿಗೆ ಹೋಗಿ ಔಷದೋಪಾಚಾರವನ್ನು ಮಾಡಿರಲಿಲ್ಲ. ಆದರೆ ಜಿ. ಗೋಪಾಲರವರು ತಮ್ಮ ಜನಾಂಗದ ಕೇರಿಗಳಿಗೆ ಹೋಗಿ ಉಚಿತವಾಗಿ ಔಷಧವನ್ನು ನೀಡಿದ್ದಾರೆ. ಏಕೆಂದರೆ ತಾನು ಒಬ್ಬ ದಲಿತ ಜನಾಂಗದಿಂದ ಬಂದವರಾದ್ದರಿಂದ ತಮ್ಮ ಜನಾಂಗದ ನೋವುನಲಿವುಗಳನ್ನು ಚನ್ನಾಗಿ ಬಲ್ಲವರಾಗಿದ್ದರಿಂದ ತಮ್ಮ ಜನಾಂಗದ ಸೇವೆ ಮಾಡಲು ಮುಂದಾದರು. ಒಮ್ಮೆ ಚಪ್ಪಲಿ ಶೂಷ್ ಮಾರಾಟಗಾರನಾದ ಶಿಗ್ಗಾವಿ ಎಂಬ ವ್ಯಕ್ತಿಯು ಇವರನ್ನು ಊಟಕ್ಕೆ ಆಹ್ವಾನಿಸಿದಾಗ ಅದಕ್ಕೆ ಒಪ್ಪಿಗೆ ನೀಡಿದರು. ಅಲ್ಲಿಯ ಜವಾನನಾಗಿದ್ದಂಥ ಭಗೀರಪ್ಪಜಾದವ್ ಎಂಬ ವ್ಯಕ್ತಿಯು ಇವರನ್ನು ತಡೆದು ಹೋಗಬೇಡಿ ಸಾರ್ ಅವನು ಅಸ್ಪೃಶ್ಯನೆಂದು ತಿಳಿಸಿ ಬೇರೆಯವರು ನಿಮ್ಮನ್ನು ಟೀಕೆ ಮಾಡುತ್ತಾರೆ ಎಂದು ಹೇಳಿದ್ದನ್ನು ತಿರಸ್ಕರಿಸಿ ಗೋಪಾಲ್‌ರವರು ಆ ವ್ಯಕ್ತಿಯ ಮನೆಗೆ ಹೋಗಿ ಊಟ ಮಾಡಿ ಬಂದೆ ಎಂದು ಕ್ಷೇತ್ರಕಾರ್ಯಕೈಗೊಂಡ ಸಂದರ್ಭದಲ್ಲಿ ತಿಳಿಸಿದ್ದಾರೆ. ಇದರಿಂದ ತಿಳಿದುಬರುವ ಅಂಶವೆಂದರೆ ಅವರು ಜಾತಿ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದಾರೆಂಬುದಕ್ಕೆ ಸಾಕ್ಷಿ.

ನಂತರ ೧೯೬೮ರಲ್ಲಿ ಇಂಗ್ಲೆಂಡ್‌ಗೆ ಹೋಗಿ ಅಲ್ಲಿ ವಿಶೇಷವಾಗಿ ಮಕ್ಕಳ ಶಸ್ತ್ರಚಿಕಿತ್ಸೆಯ ಬಗ್ಗೆ ಅಧ್ಯಯನ ನಡೆಸಿ ೧೯೬೯ರಲ್ಲಿ ಭಾರತಕ್ಕೆ ಮರಳಿ ಬಂದರು. ಈ ವೇಳೆಗಾಗಲೇ ಕರ್ನಾಟಕದಲ್ಲಿ ದಲಿತ ಚಳವಳಿ ಪ್ರಾರಂಭಗೊಂಡಿದ್ದರ ಪರಿಣಾಮ ತಮ್ಮ ವೃತ್ತಿ ಜೀವನದ ಜೊತೆಗೆ ದಲಿತ ಚಳವಳಿಯಲ್ಲಿ ಪಾಲ್ಗೊಂಡು ದಲಿತರ ಮತ್ತು ಪ್ರಗತಿಪರ ಚಿಂತನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು

ಜನಾಂಗದವರನ್ನು ವೈಚಾರಿಕ ನೆಲೆಗಟ್ಟಿನಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಅಲ್ಲದೆ ಅಂಧಾಕಾರದಲ್ಲಿದ್ದ ಪಂಚಮರನ್ನು ಬೆಳಕಿನೆಡೆಗೆ ಕರದ್ಯೋಯ್ದು ಶೈಕ್ಷಣಿಕವಾಗಿ ಜಾಗೃತಿ ಯನ್ನುಂಟು ಮಾಡಿದ ಆರ್. ಗೋಪಾಲಸ್ವಾಮಿಅಯ್ಯರ್‌ರವರ ಬಗ್ಗೆ ಪ್ರಚಾರ ಮಾಡುವುದರ ಜೊತೆಗೆ ಮೈಸೂರು ಸಂಸ್ಥಾನದಲ್ಲಿ ಪಂಚಮರಿಗಾಗಿ ಕೈಗೊಂಡ ಅಭಿವೃದ್ಧಿ ಕಾರ್ಯಗಳ ಬಗ್ಗೆ ಇಂದಿನ ಯುವ ಪೀಳಗೆಗೆ ತಾವು ಭಾಗವಹಿಸಿದ ಉಪನ್ಯಾಸ ಕಾರ್ಯಕ್ರಮಗಳಲ್ಲಿ ತಿಳಸಿಕೊಡುತ್ತಾ ಪ್ರಚಾರ ಮಾಡುತ್ತಾ ಬಂದಿದ್ದಾರೆ. ಅಲ್ಲದೆ ಅವರನ್ನು ಕುರಿತು ಒಂದು ಕೃತಿಯನ್ನು ರಚಿಸಿದ್ದಾರೆ.

ಡಾ. ಜಿ. ಗೋಪಾಲ್‌ರವರು ಏಳು ವರ್ಷಗಳ ಕಾಲ ಎಸ್.ಸಿ./ಎಸ್.ಟಿ. ಡಾಕ್ಟರ್ಸ್ ಸಂಘದ ಅಧ್ಯಕ್ಷರಾಗಿಯೂ ಹಾಗೂ ನಾಲ್ಕು ವರ್ಷ ಅಂತರಾಷ್ಟ್ರೀಯ ಬುದ್ಧ ಸ್ನೇಹಾ (INFB) ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಈ ಸಂದರ್ಭದಲ್ಲಿ ಎಸ್.ಸಿ ಡಾಕ್ಟರ್ಸ್ ಪದವಿ ಸಂಘಕ್ಕಾಗಿ ಮೈಸೂರಿನ ಕಾಮಾಕ್ಷಿ ಆಸ್ಪತ್ರೆಯ ಪಕ್ಕದಲ್ಲಿ ನಿವೇಶನವನ್ನು ೬೦ x ೮೦ ಖರೀದಿಸಿ ಅದನ್ನು ಅಂಬೇಡ್ಕರ್‌ರವರ ೧೧೪ನೆಯ ಜನ್ಮ ಜಯಂತಿಯ ವೇಳೆಯಲ್ಲಿ ಮೈಸೂರು ವಿಶ್ವವಿದ್ಯಾಲಯದ ಅಧ್ಯಯನ ಪೀಠಕ್ಕೆ ಧಾನವಾಗಿ ಬಿಟ್ಟುಕೊಟ್ಟಿದ್ದಾರೆ. ಪ್ರಸ್ತುತ ಡಾ. ಜಿ. ಗೋಪಾಲ್‌ರವರು ನಿವೃತ್ತಿ ಜೀವನವನ್ನು ನಡೆಸುತ್ತಿದ್ದಾರೆ.

**ಗೋಪಾಲರವರು ರಚಿಸಿದ ಕೃತಿಗಳು**

೧. ವೈದ್ಯನ ವಿದೇಶ ಪ್ರವಾಸ

೨. ಚಂದವಳ್ಳಿಯ ಅಸ್ಪೃಶ್ಯರು.

೩. ಸ್ಮಶಾನದ ಕಬ್ಬು

೪. ನವೀನ ಇಂಡಿಯಾ ನಿರ್ಮಾಪಕರು

೫. ಮೈಸೂರಿನಿಂದ ಮೆಕ್ಸಿಕೋಗೆ, ಬೆಂಗಳೂರಿನಿಂದ ಭಾರತೀಯ ಭವನಕ್ಕೆ

೬. ಬಯೋಗ್ರಫಿ ಆಫ್ ಅಯ್ಯರ್.

**ಬಿ. ರಾಚಯ್ಯ**

**ಬಾಲ್ಯ ಮತ್ತು ಶಿಕ್ಷಣ:**

ಚಾಮರಾಜನಗರ ತಾಲೂಕಿನ ಆಲೂರು ಎಂಬ ಗ್ರಾಮದಲ್ಲಿ ಯಜಮಾನ್ ಪೊಳ್ಳಂಡೆ ಬಸವಯ್ಯ ಮತ್ತು ಸಿದ್ದಮ್ಮ ಎಂಬ ರೈತ ಕುಟುಂಬದಲ್ಲಿ ೧೦-೦೮-೧೯೨೨ರಂದು ನಾಲ್ಕನೆಯ ಮಗನಾಗಿ ಬಿ. ರಾಚಯ್ಯನವರು ಜನಿಸಿದರು. ಇವರು ಜನಿಸಿದಾಗ ತಂದೆ ಬಸವಯ್ಯ ಅಸಮಾಧಾನ ವ್ಯಕ್ತ ಪಡಿಸಿದ್ದರು. ಏಕೆಂದರೆ ಈಗಾಗಲೆ ಮೂರು ಜನ ಗಂಡುಮಕ್ಕಳಿದ್ದು ನಾಲ್ಕನೇ ಮಗು ಹೆಣ್ಣಾಗ ಬಹುದೆಂಬ ನೀರಿಕ್ಷೆಯಲ್ಲಿದ್ದರು. ಆದರೆ ಹಾಗಾಗಲಿಲ್ಲ. ನಂತರ ಮಗುವಿನ ಮೇಲೆ ಪ್ರೀತಿ ಹೆಚ್ಚಾಯಿತು. ಹಾಗಾಗಿ ತಮ್ಮ ಊರಿನಲ್ಲಿಯೇ ಪ್ರಾಥಮಿಕ ಶಿಕ್ಷಣ ಕೊಡಿಸಿದರು. ಆಗ ಅವರಿಗೆ ಎಂಟು ವರ್ಷ ವಯಸ್ಸಾಗಿತ್ತು. ಈ ಸಂದರ್ಭದಲ್ಲಿ ತಗಡೂರಿನ ರಾಮಸ್ವಾಮಿಯವರು ರಾಚಯ್ಯನವರ ಅಚ್ಚುಮೆಚ್ಚಿನ ಗುರುಗಳಾಗಿದ್ದರು. ನಂತರ ಚಾಮರಾಜನಗರದ ಸರ್ಕಾರಿ ಮಾಧ್ಯಮಿಕ ಶಾಲೆಗೆ ಪ್ರವೇಶ ಪಡೆದು

ಓದುತ್ತಿದ್ದ ಸಂದರ್ಭದಲ್ಲಿ ಆಕಸ್ಮಿಕವಾಗಿ ಶಾಲೆಗೆ ಬೆಂಕಿಬಿದ್ದು ಕೊಠಡಿ ಸುಟ್ಟು ಹೋದ ಕಾರಣ ಮುಂದಿನ ತರಗತಿಗೆ ಸೇರಲು ಸಾಧ್ಯವಾಗಲಿಲ್ಲ.

ಆದ್ದರಿಂದ ಮುಂದಿನ ವರ್ಷ ಚಾಮರಾಜನಗರ (೧೯೯೬-೧೯೯೭ರಲ್ಲಿ ಜಿಲ್ಲೆಯಾಗಿ ಮಾರ್ಪಾಡು ಮಾಡಲಾಗಿದೆ.) ತಾಲೂಕಿನ ಕುದೇರು ಗ್ರಾಮದಲ್ಲಿ ಮಾಧ್ಯಮಿಕ ಶಾಲೆಗೆ ಪ್ರವೇಶ ಪಡೆದು ಶಿಕ್ಷಕ ಸಣ್ಣಯ್ಯನವರ ಮನೆಯಿಂದ ಶಾಲೆಗೆ ಹೋಗುತ್ತಿದ್ದರು. ಮುಂದಿನ ವರ್ಷ ಕುದೇರಿನಲ್ಲಿ ವ್ಯಾಸಂಗ ಮುಂದುವರಿಸಲು ಕಷ್ಟವಾದರಿಂದ ಮೈಸೂರು ನಗರದಲ್ಲಿದ್ದ ನೇರಳೆ ರಂಗರಾಮಯ್ಯನವರ ಅನುದಾನಿತ ವಿದ್ಯಾರ್ಥಿನಿಲಯಕ್ಕೆ ಸೇರಿ ಪುರಭವನದ ಪಕ್ಕದಲ್ಲಿದ್ದ ಮೆಥೊಡಿಸ್ ಕ್ರೈಸ್ತ ಮಿಷಾನರಿ ಶಾಲೆಯಲ್ಲಿ ಮಾಧ್ಯಮಿಕ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಮುಂದಿನ ವಿದ್ಯಾಭ್ಯಾಸಕ್ಕಾಗಿ ಹಾಸನದಲ್ಲಿ ದಲಿತರ ಬಂದು ಆರ್.ಗೋಪಾಲಸ್ವಾಮಿಯವರು ಸ್ಥಾಪಿಸಿದ ನರಸಿಂಹರಾಜ ವಿದ್ಯಾರ್ಥಿನಿಲಯ ಮತ್ತು ಸರ್ಕಾರಿ ಪ್ರೌಢಶಾಲೆಗೆ ರಾಚಯ್ಯನವರು ಸೇರಿಕೊಂಡರು. ಈ ಸಂದರ್ಭದಲ್ಲಿ ವಿದ್ಯಾರ್ಥಿನಿಲಯದ ಅಧ್ಯಕ್ಷರಾಗಿ ಹೆಚ್.ಬಿ.ಗುಂಡಪ್ಪ ಮತ್ತು ಮೇಲ್ವಿಚಾರಕರಾಗಿ ಕೆ.ಎಂ.ಬಸಪ್ಪನವರು ಕಾರ್ಯನಿರ್ವಹಿಸುತ್ತಿದ್ದರು. ಇವರಿಗೆ ಇಲ್ಲಿ ಉತ್ತಮ ಗುರುವೃಂದವಿದ್ದುದ್ದರಿಂದ ಓದಿನಲ್ಲಿ ಅಪಾರ ಶ್ರದ್ಧೆ ತೋರಿದರು. ಪ್ರೌಢಶಾಲಾ ವ್ಯಾಸಂಗದ ಅವಧಿಯಲ್ಲಿ ಪ್ರತಿವರ್ಷವು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿದ್ದರು. ಆದರೆ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ನಿಲಯಪಾಲಕರ ಕುತಂತ್ರದಿಂದಾಗಿ ಅವರು ಮತ್ತು ಗೆಳೆಯರು ಇ.ಪಿ.ಎಸ್.(Eligible for Public service) ಇ.ಸಿ.ಪಿ.ಎಸ್.(Eligible for College Public service)ನಲ್ಲಿ ಅನುತ್ತೀರ್ಣರಾಗಿದ್ದರು. ಆದ್ದರಿಂದ ಇವರು ಪುನಃ ಎಸ್.ಎಸ್.ಎಲ್.ಸಿ.ಯನ್ನು ಓದಲು ಮೈಸೂರಿನ ಮಹಾಜನ ಪ್ರೌಢಶಾಲೆಗೆ ಸೇರಿ ಚಾಮುಂಡೇಶ್ವರಿ ಅನುದಾನಿತ ವಿದ್ಯಾರ್ಥಿನಿಲಯಕ್ಕೆ ಸೇರಿ ಅದೆ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದರು. ನಂತರ ಮಹಾರಾಜ ಕಾಲೇಜಿಗೆ ಬಿ.ಎ. ಪದವಿಗೆ ಪ್ರವೇಶ ಪಡೆದರು. ೧೯೪೨ರಲ್ಲಿ ಬಿ.ಎ.ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಹಳೇ ಮೈಸೂರು ಪ್ರಾಂತ್ಯದಲ್ಲಿ ಅದರಲ್ಲಿಯು ಕರ್ನಾಟಕ ರಾಜ್ಯದಲ್ಲಿಯೇ ಆದಿಕರ್ನಾಟಕ ಜನಾಂಗದ ಬಿ.ರಾಚಯ್ಯ ಪ್ರಥಮ ಬಾರಿಗೆ ಬಿ.ಎ.ಪಾಸ್ ಮಾಡಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ.

ನಂತರ ೧೯೪೭ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನ ವಿಭಾಗದಲ್ಲಿ ಸಿ.ಬಿ.ಜಡ್ (C.B.Z) ಐಚ್ಚಿಕ ವಿಷಯವನ್ನು ಆಯ್ಕೆಮಾಡಿಕೊಂಡು ಲಾಲ್‌ಬಾಗ್‌ನಲ್ಲಿದ್ದ ಆದಿಕರ್ನಾಟಕ ವಿದ್ಯಾರ್ಥಿ ನಿಲಯಕ್ಕೆ ಸೇರಿಕೊಂಡರು. ಆದರೆ ೧೯೪೭ರಲ್ಲಿ ನಾಡಿನಾದ್ಯಾಂತ ಹರಡಿದ ಸ್ವಾತಂತ್ರ್ಯ ಚಳವಳಿಯಲ್ಲಿ ಬಾಗವಹಿಸಿದ್ದರಿಂದ ಇಂಗ್ಲಿಷ್ ಪತ್ರಿಕೆಯಲ್ಲಿ ಅನುತ್ತೀರ್ಣರಾದರು. ೧೯೪೮ರಲ್ಲಿ ಬಿ.ಎಸ್ಸಿ. ಪದವಿ ಪಡೆದರು.

ಎಂ.ಬಿ.ಬಿ.ಎಸ್ (M.B.B.S.) ಮಾಡಿ ವೈದ್ಯನಾಗಬೇಕೆಂಬ ಹಂಬಲವಿದ್ದರೂ ಸಾಧ್ಯವಾಗದೇ ೧೯೪೮ರಲ್ಲಿ ಬಿ.ಎಲ್. (B.L. Bharath at Law) ಪದವಿಗೆ ಪ್ರವೇಶ ಪಡೆದರು. ಇಷ್ಟೆಲ್ಲ ಓದಿದ್ದರೂ ಸಹ ರಾಚಯ್ಯನವರು ರಜಾಕ್ಕೆ ಊರಿಗೆ ಬಂದಾಗ ದನ-ಕುರಿಗಳನ್ನು ಕಾಯುತ್ತಿದ್ದರು. ಬೇಸಾಯದ ಎಲ್ಲಾ ಕ್ರಮ ತಂತ್ರಗಳನ್ನು ಬಲ್ಲವರಾಗಿದ್ದು ಛಲ ಸಾಹಸದ ಗಟ್ಟಿತನವನ್ನು ಬೆಳೆಸಿಕೊಂಡಿದ್ದರು.

**ವೃತ್ತಿ ಮತ್ತು ಸೇವೆ**

ನಂತರ ಬೆಂಗಳೂರಿನ ಹೈಕೋರ್ಟ್ ವಕೀಲರಾಗಿ ಹೆಸರು ನೋಂದಾಯಿಸಿಕೊಂಡು ವಿ. ಕೃಷ್ಣ ಮೂರ್ತಿ ಮತ್ತು ಹೆಚ್.ಎಫ್.ಎಂ. ರೆಡ್ಡಿಯವರ ಸಹಾಯಕರಾಗಿ ಕಾರ್ಯನಿರ್ವಹಿಸಿದರು. ಚಾಮರಾಜ ನಗರ ತಾಲೂಕಿನ (೧೯೯೭-೧೯೯೭ನೇ ಸಾಲಿನಲ್ಲಿ ಜಿಲ್ಲೆಯಾಗಿ ಮಾರ್ಪಾಡು ಮಾಡಲಾಗಿದೆ)ಲ್ಲಿ ದಲಿತ ಸಮುದಾಯವರು ಸ್ವತಂತ್ರ ಪೂರ್ವದಿಂದಲೂ ಹೆಚ್ಚಿನ ಸಂಖ್ಯೆಯಲ್ಲಿದ್ದು ಅಂಬೇಡ್ಕರ್‌ರವರ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದರು. ಹಾಗಾಗಿ ಈ ಭಾಗದಲ್ಲಿ ದಲಿತವರ್ಗದ ವಿದ್ಯಾವಂತರು ಹೆಚ್ಚಿನ ಸಂಖ್ಯೆಯಲ್ಲಿದ್ದು ಅಂಬೇಡ್ಕರ್‌ರವರ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದರು. ಹಾಗಾಗಿ ಮೇಲ್ವರ್ಗದವರ ಶೋಷಣೆ ದಬ್ಬಾಳಿಕೆಯ ವಿರುದ್ಧ ದನಿಯೆತ್ತಿ ಹೋರಾಟ ಮಾಡಿದರು. ಈ ಹಿನ್ನಲೆಯಲ್ಲಿ ಬಿ.ರಾಚಯ್ಯನವರ ಮುಖಂಡತ್ವದಲ್ಲಿ 'ಆದಿಕರ್ನಾಟಕ ಅಭಿವೃದ್ಧಿ ಸಂಘ'ವನ್ನು ಸ್ಥಾಪಿಸಿ ಅದರ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ ಆ ಮೂಲಕ ಒಂದು ಆದಿಕರ್ನಾಟಕ ವಿದ್ಯಾರ್ಥಿನಿಲಯ ತೆರೆದು ತುಂಬಾ ಬಡತನ ಮತ್ತು ಏನೇನೂ ಗತಿಯಿಲ್ಲದವರ ಮಕ್ಕಳನ್ನು ಕರೆದುತಂದು ವಿದ್ಯಾರ್ಥಿ ನಿಲಯಕ್ಕೆ ಸೇರಿಸಿ ಉಚಿತ ಊಟ, ವಸತಿ, ಬಟ್ಟೆ, ಪುಸ್ತಕಗಳನ್ನು ಕೊಡಿಸಿದರು. ಹೀಗೆ ರಾಚಯ್ಯನವರು ದಲಿತವರ್ಗದ ಮಕ್ಕಳಿಗೆ ಶಿಕ್ಷಣ ನೀಡಲು ಮುಂದಾಗಿರುವುದನ್ನು ಗಮನಿಸಿದರೆ ಅದಕ್ಕೆ ಆರ್. ಗೋಪಾಲಸ್ವಾಮಿ ಅಯ್ಯರ್‌ನವರ ಪ್ರೇರಣೆ ಎಂದೇ ಹೇಳಬಹುದು.

**ರಾಜಕಾರಣ**

೧೯೫೨ರಲ್ಲಿ ಲೋಕಸಭೆ ಮತ್ತು ವಿಧಾನ ಸಭೆಗಳ ಸಾರ್ವತ್ರಿಕ ಚುನಾವಣೆಗಳು ಒಂದೇ ಬಾರಿಗೆ ನಡೆಸಲಾಯಿತು. ಈ ಚುನಾವಣೆಯಲ್ಲಿ ಯಳಂದೂರು ಮೀಸಲು ಕ್ಷೇತ್ರದಿಂದ ರಾಚಯ್ಯ ನವರು ಪಿ.ಎಸ್.ಪಿ. (ಪ್ರಜಾ ಸೋಷಿಯಲಿಸ್ಟ್ ಪಕ್ಷ)ಪಕ್ಷದಿಂದ ಸ್ಪರ್ಧಿಸಿ ಆಯ್ಕೆಯಾದರು. ನಂತರ ೧೯೫೪ರಲ್ಲಿ ಕಾಂಗ್ರೆಸ್ ಪಕ್ಷ ಸೇರಿ ೧೯೫೭ರಲ್ಲಿ ನಡೆದ ಎರಡನೇ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಿ ವಿಜೇತರಾದರು. ಈ ಸಂದರ್ಭದಲ್ಲಿ ಸವರ್ಣೀಯರು ಇವರನ್ನು ಸೋಲಿಸಲು ಪ್ರಯತ್ನಪಟ್ಟರೂ ಸಾದ್ಯವಾಗಲಿಲ್ಲ. ಏಕೆಂದರೆ ರೈತರ ಕುಂದುಕೊರತೆ ಮತ್ತು ಸಾಮಾಜಿಕ ಸುಧಾರಣೆ ಮುಂತಾದ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಯಶಸ್ವಿಯಾದರು. ಇದು ಸವರ್ಣೀಯರಿಗೆ ಸಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ನಂತರ ೧೯೬೨ರಲ್ಲಿ ನಡೆದ ಚುನಾವಣೆಯಲ್ಲಿ ಸಂತೆಮರಳ ಮೀಸಲು ಕ್ಷೇತ್ರದಿಂದ ಸ್ಪರ್ಧಿಸಿ ವಿಧಾನಸಭೆಗೆ ಆಯ್ಕೆಯಾಗಿ ಅರಣ್ಯ ಕೃಷಿ ಮತ್ತು ಸಹಕಾರಿ ಸಚಿವರಾಗಿ ಅಧಿಕಾರ ಸ್ವೀಕರಿಸಿದರು. ನಂತರ ಅರಣ್ಯ ರೇಷ್ಮೆ ಮತ್ತು ಮೀನುಗಾರಿಕೆ ಇಲಾಖೆಯ ಸಚಿವರಾಗಿ ಮೈಸೂರು ರಾಜ್ಯದ ದಲಿತ ವರ್ಗದ ೨ನೇ ಸಚಿವರಾಗಿ ಕರ್ನಾಟಕ ರಾಜಕೀಯ ಚರಿತ್ರೆಯ ಪುಟದೊಳಗೆ ಸೇರಿದರು. ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ರಾಜಕಾರಣದಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಶಾಸಕರಾಗಿ, ರಾಜ್ಯದ ವಿವಿಧ ಇಲಾಖೆಗಳ ಮಂತ್ರಿಗಳಾಗಿ ರಾಜ್ಯಸಭೆ ಸದಸ್ಯರಾಗಿ, ಕೇಂದ್ರದ ಮಂತ್ರಿಯಾಗಿ. ಕೊನೆಯದಾಗಿ ಹಿಮಾಚಲ ಪ್ರದೇಶ ಹಾಗೂ ಕೇರಳ ರಾಜ್ಯಗಳ ರಾಜ್ಯಪಾಲರಾಗಿ ಅತ್ಯುತ್ತಮ ಆಳ್ವಿಕೆ ನಡೆಸಿದ ಇವರು ಶೋಷಿತ ಮತ್ತು ಹಿಂದುಳಿದ ವರ್ಗದವರ ಪರವಾದ ಧ್ವನಿಎತ್ತಿ ಹೋರಾಟ ಮಾಡಿದ ಒಬ್ಬ ದೀಮಂತ ನಾಯಕ ಮತ್ತು ಕಳಂಕರಹಿತ ಆಡಳಿತಗಾರರಾಗಿದ್ದಾರೆ.

## ಎಸ್.ಎಂ. ಸಿದ್ದಯ್ಯ

ಶ್ರೀಯುತರು ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲೂಕಿನ ಸೋಸಲೆ ಎಂಬ ಗ್ರಾಮದ ದಲಿತ ಜನಾಂಗದ ಮರಿಯಯ್ಯನ ಸಿದ್ದಯ್ಯ ಮತ್ತು ಮಾದಮ್ಮ ದಂಪತಿಗಳ ರೈತ ಕುಟುಂಬದಲ್ಲಿ ೧೯೧೮ ಆಗಸ್ಟ್ ೧೫ರಂದು ಜನಿಸಿದರು. ತಮ್ಮ ಮಗನ ಬಗ್ಗೆ ಅಪಾರ ಪ್ರೀತಿ ಹೊಂದಿದ್ದ ಮರಿಯಯ್ಯನಸಿದ್ದಯ್ಯನವರು ತಮ್ಮ ಗ್ರಾಮದ ಸರ್ಕಾರಿ ಶಾಲೆಯಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಕೊಡಿಸಿದರು. ಮಾಧ್ಯಮಿಕ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಸಿದ್ದಯ್ಯನವರಿಗೆ ಆರ್. ಗೋಪಾಲಸ್ವಾಮಿ ಅಯ್ಯರವರು ಮುಂದಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿಗೆ ಬಂದು ಸೇರುವಂತೆ ಪತ್ರ ಬರೆದಿದ್ದರು. ಹಾಗಾಗಿ ಸಿದ್ಧಯ್ಯನವರು ಪ್ರೌಢಶಾಲಾ ಶಿಕ್ಷಣಕ್ಕಾಗಿ ಬೆಂಗಳೂರಿನ ಮಲ್ಲೇಶ್ವರಂನ ಸರ್ಕಾರಿ ಪ್ರೌಢಶಾಲೆಗೆ ಸೇರಿ, ನರಸಿಂಹರಾಜ ವಿದ್ಯಾರ್ಥಿನಿಲಯಕ್ಕೆ ಪ್ರವೇಶ ಪಡೆದರು. ನಂತರ ನರಸಿಂಹರಾಜ ವಿದ್ಯಾರ್ಥಿನಿಲಯವನ್ನು ಮೂರು ವಿಭಾಗಗಳಾಗಿ ಮಾಡಿದ್ದರಿಂದ ಹತ್ತನೇ ತರಗತಿ ಯನ್ನು ಹಾಸನದ ಸರ್ಕಾರಿ ಪ್ರೌಢಶಾಲೆಯಲ್ಲಿ ಓದ ಬೇಕಾಯಿತು. ಈ ಸಂದರ್ಭದಲ್ಲಿ ಎಲ್. ಶೇಷಗಿರಿ ರಾಯರು ಶಾಲಾ ಮುಖ್ಯ ಶಿಕ್ಷಕರಾಗಿದ್ದರೆ ಬಿ.ಎಸ್. ಸೋಮಸುಂದರರವರು ವಿದ್ಯಾರ್ಥಿನಿಲಯದ ನಿಲಯಪಾಲಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು.

ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಇವರು ಮುಂದಿನ ವ್ಯಾಸಂಗಕ್ಕಾಗಿ ಮೈಸೂರಿನ ಮಹಾರಾಜ ಕಾಲೇಜಿಗೆ ಸೇರಿ ೧೯೪೨ರಲ್ಲಿ ಬಿ.ಎಸ್ಸಿ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಹಾಗಾಗಿ ಮೈಸೂರು ಸಂಸ್ಥಾನದಲ್ಲಿಯೇ ಆದಿಕರ್ನಾಟಕ ಜನಾಂಗದಲ್ಲಿ ಪ್ರಪ್ರಥಮ ಬಾರಿಗೆ ಬಿ.ಎಸ್ಸಿ ಪದವಿ ಪಡೆದವರು ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ನಂತರ ಮದ್ರಾಸ್ ಪ್ರಾಂತ್ಯದ ಭಾಗವಾಗಿದ್ದ ಬೆಳಗಾವಿಯ 'ರಾಜಾಲಕ್ಕನ್ ಗೌಡ ಲಾ(ಕಾನೂನು) ಕಾಲೇಜ್‌ಗೆ (ಬಾಂಬೆ ವಿಶ್ವವಿದ್ಯಾಲಯ) ಸೇರಿ ೧೯೪೫ರಲ್ಲಿ ಕಾನೂನು ಪದವಿ ಪಡೆದು ಮೈಸೂರಿನ ನ್ಯಾಯಾಲಯದಲ್ಲಿ ೧೯೫೦-೧೯೫೭ರವರಿಗೆ ವಕೀಲರಾಗಿ ಸೇವೆ ಸಲ್ಲಿಸಿರುತ್ತಾರೆ.

೧೯೫೨ರಲ್ಲಿ ನಡೆದ ಪ್ರಥಮ ಲೋಕಸಭೆ ಮತ್ತು ವಿಧಾನಸಭೆಯ ಸಾರ್ವತ್ರಿಕ ಚುನಾವಣೆಯಲ್ಲಿ ಚಾಮರಾಜಗರದ ಮೈಸೂರು ಲೋಕಸಭಾ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿ ಪರಾಭವಗೊಂಡರು. ಪುನಃ ತಮ್ಮ ವಕೀಲ ವೃತ್ತಿಯನ್ನು ಮುಂದುವರೆಸಿದ ಇವರು ಈಗಾಗಲೇ ಗೋಪಾಲಸ್ವಾಮಿ ಅಯ್ಯರ್‌ರವರಿಂದ ಪ್ರಭಾವಿತರಾಗಿದ್ದರಿಂದ ತಮ್ಮ ಜನಾಂಗದ ಕೇರಿಗಳಿಗೆ ಬೇಟಿ ಕೊಟ್ಟು ಶಿಕ್ಷಣದ ಮಹತ್ವ ತಿಳಿಸಿ ಮಕ್ಕಳನ್ನು ಕಡ್ಡಾಯವಾಗಿ ಶಾಲೆಗೆ ಕಳುಹಿಸುವಂತೆ ಮಾಡಿದರು. ಅಲ್ಲದೆ ಅಂಬೇಡ್ಕರ್‌ರವರ ವಿಚಾರಧಾರೆಗಳನ್ನು ತಮ್ಮ ಜನಾಂಗದವರಿಗೆ ತಿಳಿಸಿಕೊಟ್ಟು ಅವರಲ್ಲಿ ಜಾಗೃತಿಯನ್ನುಂಟು ಮಾಡಿದರು.

೧೯೫೭ರ ಮತ್ತು ನಂತರ ನಡೆದ ಸಾರ್ವತ್ರಿಕ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಅಭ್ಯಾರ್ಥಿಯಾಗಿ ನಾಲ್ಕು ಬಾರಿ ಸ್ಪರ್ಧಿಸಿ ಚುನಾಯಿತರಾಗಿ ಇಪ್ಪತ್ತು ವರ್ಷಗಳ ಕಾಲ ಅಂದರೆ ೧೯೭೭ರವರೆಗೆ ಸುಧೀರ್ಘವಾಗಿ ನೆಹರು, ಲಾಲ್‌ಬಹದ್ದೂರ್‌ಶಾಸ್ತ್ರಿ ಇಂದಿರಾಗಾಂಧಿಯವರ

ಸರ್ಕಾರದಲ್ಲಿ ಆಡಳಿತ ನಡೆಸಿದ್ದಾರೆ. ರಾಜ್ಯದ ಮತ್ತು ದೇಶದ ವಿವಿಧ ಇಲಾಖೆಗಳ ಅಧ್ಯಕ್ಷರಾಗಿ, ಸದಸ್ಯರಾಗಿ ಉತ್ತಮ ಆಳ್ವಿಕೆ ನಡೆಸಿದ ಇವರು ಶೋಷಿತ ಸಮುದಾಯದಪರ ಧ್ವನಿಎತ್ತಿ ಅವರಿಗೆ ಸಿಗಬೇಕಾದ ಸೌಲಭ್ಯಗಳನ್ನು ನ್ಯಾಯಸಮ್ಮತವಾಗಿ ದೊರಕಿಸಿಕೊಡುವಲ್ಲಿ ಹೋರಾಟ ಮಾಡಿದ ಒಬ್ಬ ಧೀಮಂತ ನಾಯಕ ಮತ್ತು ಕಳಂಕರಹಿತ ಆಡಳಿತಗಾರಾಗಿದ್ದಾರೆ.

ಎಸ್.ಎಂ. ಸಿದ್ದಯ್ಯನವರು ಸತತವಾಗಿ ಇಪ್ಪತ್ತು ವರ್ಷಗಳ ಕಾಲ ಲೋಕಸಭೆಯ ಸದಸ್ಯರಾದ್ದುದರಿಂದ ಅವರು ಡಾ. ಬಾಬಾಸಾಹೇಬ್ ಅಂಬೇಡ್ಕರ್‌ರವರನ್ನು ಬಹಳ ಹತ್ತಿರದಿಂದ ನೊಡಿ ಅವರ ವಿಚಾರ ಧಾರೆಗಳಿಂದ ಪುಳಕಿತರಾದವರು. ಡಾ. ಬಾಬಾಸಾಹೇಬ್ ಅಂಬೇಡ್ಕರವರ ಜೀವನ ಚರಿತ್ರೆಯನ್ನು ಕರತಲಾಮಲಕ ಮಾಡಿಕೊಂಡವರು. ಅಷ್ಟೇ ಅಲ್ಲದೆ ಅಂಬೇಡ್ಕರ್‌ರವರು ಬರೆದಂತಹ 'ಜಾತಿ ನಿರ್ಮೂಲನೆ', (Anililation of Castes) 'ಕಾಂಗ್ರೆಸ್ ಮತ್ತು ಗಾಂಧಿ ಹರಿಜನರಿಗೆ ಮಾಡಿರುವುದೇನು'? (What Congress and Gandhi have done to Harijans) 'ಮತಾಂತರದ ಅಗತ್ಯವೇನು'? (Why convesion) ಎಂಬ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. ಹಾಗೂ ಇಂದು ಬೂಟಾಸಿಂಗ್‌ರವರು ಅಧ್ಯಕ್ಷರಾಗಿರುವ 'ರಾಷ್ಟ್ರೀಯ ಪರಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದ ಆಯೋಗ'ದ ರಚನೆಗೆ ಕಾರಣಕರ್ತರಾದರು ಮತ್ತು ಅಧ್ಯಕ್ಷರಾಗಿದ್ದವರು ಶ್ರೀಯುತ ಎಸ್.ಎಂ. ಸಿದ್ದಯ್ಯನವರು. ಗ್ರಾಮೀಣ ಪರಿಸರದಿಂದ ಬಂದವರಾದ ಇವರು ಗ್ರಾಮೀಣ ಜನರ ಬದುಕು ಮತ್ತು ಸ್ಥಿತಿಗತಿಗಳನ್ನು ಬಲ್ಲವರಾಗಿದ್ದರಿಂದ ಗ್ರಾಮೀಣ ಮಕ್ಕಳ ಶೈಕ್ಷಣಿಕ ಮತ್ತು ಸಾಮಾಜಿಕ ಪ್ರಗತಿಗಾಗಿ ಅದರಲ್ಲಿಯೂ ದಲಿತ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದ್ದಕ್ಕಾಗಿ ದಿನಾಂಕ ೦೫-೦೭-೧೯೬೭ರಲ್ಲಿ ಮೈಸೂರಿನ ಅಶೋಕಪುರಂನಲ್ಲಿ ಸಿದ್ಧಾರ್ಥ ವಸತಿಶಾಲೆಯನ್ನು ಸ್ಥಾಪಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಈ ಶಾಲೆಯು ಇಂದಿಗೂ ಸಹ ಮುಂದುವರೆದುಕೊಡು ಬಂದಿದ್ದು ಸಾವಿರಾರು ದಲಿತ ವಿದ್ಯಾರ್ಥಿಗಳಿಗೆ ಶಿಕ್ಷಣ ನಿಡುತ್ತಾ ಬಂದಿದೆ.

ಗ್ರಾಮ ಜಾತೀಯತೆಯ ತವರು ಎಂಬಂತೆ ತಮ್ಮ ಗ್ರಾಮ ಮತ್ತು ಸುತ್ತಮುತ್ತಲಿನ ಗ್ರಾಮದ ಅಸ್ಪೃಶ್ಯರು ಕೆರೆ ಬಾವಿ ಕಟ್ಟೆಗಳಲ್ಲಿ ನೀರು ಉಪಯೋಗಿಸಲ್ಲು ಅಸ್ಪೃಶ್ಯರು ಬಿಡುತಿರಲಿಲ್ಲ. ಇದನ್ನು ಅರಿತಿದ್ದ ಸಿದ್ದಯ್ಯನವರು ತಮ್ಮ ನೇತೃತ್ವದಲ್ಲಿ ಬೆನಗನಹಳ್ಳಿ, ಕೆಬ್ಬೆಹುಂಡಿ ಮೊದಲಾದ ಹಳ್ಳಿಗಳಲ್ಲಿ ಹೋರಾಟ ನಡೆಸಿ ಅಸ್ಪೃಶ್ಯರಿಗೆ ನ್ಯಾಯ ದೊರಕಿಸಿಕೊಟ್ಟರಲ್ಲದೆ ಸವರ್ಣೀಯರಿಗೆ ಕಾನೂನಿನ ಅರಿವನ್ನು ಮೂಡಿಸುವಲ್ಲಿ ಯಶಸ್ವಿಯಾದ ಇವರು ಅಗಸ್ಟ್ ೧೫, ೨೦೦೮ರಂದು. ತಮ್ಮ ಹುಟ್ಟುಹಬ್ಬವನ್ನು ಆಚರಿಸಿಕೊಂಡಿರುತ್ತಾರೆ.

**ಡಿ.ಆರ್. ನಂಜಯ್ಯ**

ಮೈಸೂರು ಸಂಸ್ಥಾನದಲ್ಲಿ ಸ್ವತಂತ್ರಪೂರ್ವದಲ್ಲೇ ಶಿಕ್ಷಣಪಡೆದ ಪ್ರಮುಖ ವ್ಯಕ್ತಿಗಳಲ್ಲಿ ಡಿ.ಆರ್.ನಂಜಯ್ಯನವರು ಸಹ ಒಬ್ಬರು. ಇವರು ಮಳವಳ್ಳಿ ತಾಲೂಕಿನ ರಾವಣಿ ಎಂಬ ಗ್ರಾಮದಲ್ಲಿ ಹುಚ್ಚಯ್ಯನ ನಂಜಯ್ಯ ಮತ್ತು ನಂಜಮ್ಮ ಎಂಬ ದಂಪತಿಗಳ ರೈತ ಕುಟುಂಬದಲ್ಲಿ ದಿನಾಂಕ ೦೫-೦೭-೧೯೧೯ರಂದು ಜನಿಸಿದರು. ಹುಚ್ಚಯ್ಯನ ನಂಜಯ್ಯನವರಿಗೆ ಒಟ್ಟು ನಾಲ್ಕು ಜನ ಗಂಡು

ಮಕ್ಕಳಿದ್ದರು. ಅವರುಗಳಲ್ಲಿ ಡಿ.ಆರ್. ನಂಜಯ್ಯನವರ ಹಿರಿಯ ಮಗನಾಗಿದ್ದರು. ಹಾಗಾಗಿ ಬಹಳ ಪ್ರೀತಿ ವಾತ್ಸಲ್ಯದಿಂದ ಮಗನನ್ನು ಬೆಳೆಸಿದರು. ತಮ್ಮ ಮಗನ ಮೇಲಿನ ಪ್ರೀತಿಯಿಂದಾಗಿ ತಮ್ಮ ಸ್ವಗ್ರಾಮವಾದ ರಾವಣಿಯಲ್ಲೇ ಪ್ರಾಥಮಿಕ ಶಿಕ್ಷಣವನ್ನು ಕೊಡಿಸಿದರು. ಪ್ರಾಥಮಿಕ ಶಿಕ್ಷಣ ಮುಗಿಸಿದ ನಂತರ ಮುಂದಿನ ವಿದ್ಯಾಭ್ಯಾಸಕ್ಕಾಗಿ ಮೈಸೂರಿನ ಪಂಚಮರ ವಸತಿಶಾಲೆಗೆ ಸೇರಿಸಿದರು. ಈ ಸಂದರ್ಭದಲ್ಲಿ ವಿದ್ಯಾರ್ಥಿನಿಲಯದ ಮೇಲ್ವಿಚಾರಕರಾಗಿದ್ದವರು ಎಸ್. ದೊರೆರಾಜ್. ಇವರು ನಂಜಯ್ಯ ನವರಿಗೆ ಒಮ್ಮೆ ಕೆಮ್ಮು ಮತ್ತು ಜ್ವರ ಬಂದಾಗ ಬಹಳ ಅಕ್ಕರೆಯಿಂದ ಆರೈಕೆ ಮಾಡಿದ್ದರು ಎಂದು ತಮ್ಮ ಆತ್ಮಕಥನ ನೆನಪುಗಳು ಎಂಬ ಕೃತಿಯಲ್ಲಿ ಬರೆದುಕೊಂಡಿದ್ದಾರೆ. ಹಾಗೆಯೇ ೧೯೩೨ರಲ್ಲಿ ನಾನು ನಾಲ್ಕನೇ ತರಗತಿಯಲ್ಲಿ ಓದುತ್ತಿರುವಾಗ ಗಾಂಧೀಜಿಯವರು ನಮ್ಮ ವಸತಿಶಾಲೆಗೆ ಬಂದಿದ್ದರು ಎಂದು ಹೇಳಿಕೋಂಡಿದ್ದಾರೆ.

೧೯೩೫ರಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್ ಬರೆದ ಪತ್ರದ ಆದೇಶದಂತೆ ಇವರು ಹಾಸನದ ಮಲ್ಲೇಶ್ವರ ಪ್ರೌಢಶಾಲೆಗೆ ಮತ್ತು ನರಸಿಂಹರಾಜ ವಿದ್ಯಾರ್ಥಿನಿಲಯಕ್ಕೆ ಸೇರಿಕೊಂಡರು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿ ನಂತರ ಮುಂದಿನ ವ್ಯಾಸಾಂಗಕ್ಕಾಗಿ ಮೈಸೂರಿನ ಮಹಾರಾಜ ಕಾಲೇಜಿಗೆ ಬಂದು ಬಿ.ಎಸ್ಸಿ.(B.Sc)ಪದವಿಗೆ ೧೯೩೮ರಲ್ಲಿ ಸೇರಿ ಚಾಮುಂಡೇಶ್ವರಿ ಅನುದಾನಿತ ವಿದ್ಯಾರ್ಥಿನಿಲಯಕ್ಕೆ ಸೇರಿಕೊಂಡರು. ಈ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಾರಂಭಿಸಿದ್ದ ವಯಸ್ಕರ ಶಿಕ್ಷಣ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಹಾಗೂ ಮಹರಾಜ ಕಾಲೇಜಿನಲ್ಲಿ ಓದುತಿರುವಾಗಲೇ ೨೪-೦೪-೧೯೪೨ರಲ್ಲಿ ವಿವಾಹ ಮಾಡಿಕೊಂಡರು. ೧೯೪೩ರಲ್ಲಿ ಬಿ.ಎಸ್ಸಿ ಪದವಿ ಪಡೆದು ಮೈಸೂರು ನಗರದ ನಗರಪಾಲಿಕೆಯಲ್ಲಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ನಂತರ ೩೧-೧೨-೧೯೪೩ರಲ್ಲಿ ಸಚಿವಾಲಯದ ಪ್ರಥಮ ದರ್ಜೆಯ ಗುಮಾಸ್ತರಾಗಿ ಬೆಂಗಳೂರಿನಲ್ಲಿ ವೃತ್ತಿ ಮುಂದುವರೆಸಿದರು. ಒಂದು ವಿಶೇಷವೆಂದರೆ ಶ್ರೀಯುತರು ಹುಟ್ಟಿದ್ದು ಮಂಗಳವಾರ ಸರ್ಕಾರಿ ಸೇವೆಗೆ ನೇಮಕಗೊಡದ್ದು ಮಂಗಳವಾರ. ಆದ್ದರಿಂದ ಇವರು ಯಾವ ಕಾರ್ಯ ಮಾಡಿದರೂ ಸಹ ಮಂಗಳವಾರವೇ ಮಾಡುತ್ತಿದ್ದರು. ಇದ್ದಕ್ಕೆ ಇನ್ನೊಂದು ಕಾರಣವನ್ನು ನೀಡಬಹುದು. ಇವರು ಸನಾತನ ಧರ್ಮ ಎಂದು ಕರೆಸಿಕೊಂಡಿರುವ ಹಿಂದೂ ಧರ್ಮದ ವಿಚಾರಗಳನ್ನು ವಿದ್ಯಾರ್ಥಿ ದೆಸೆಯಿಂದಲೇ ವಿರೋಧಿಸುತ್ತಬಂದಿದ್ದರು. ಅದರಲ್ಲಿಯೂ ಜಾತಿ ವ್ಯಾವಸ್ಥೆಯ ವಿರುದ್ಧ ತಮ್ಮ ಕತೆ ಕವನಗಳಲ್ಲಿ ಬರೆದಿರುವುದನ್ನು ನೋಡಬಹುದು. ಹಾಗಾಗಿ ಜಾತಿವ್ಯವಸ್ಥೆಯನ್ನು ಕುರಿತು ಅದರಲ್ಲಿಯೂ ಅಸ್ಪೃಶ್ಯತೆಯ ಬಗ್ಗೆ ಕಡೆ ಹೀಗೆ ಹೇಳುತ್ತಾರೆ. "ಬಸವಣ್ಣನವರ ಪ್ರಕಾರ ಹೊಲಸು ತಿನ್ನುವವ ಹೊಲೆಯ, ಹುಸಿಯ ನುಡಿವವನೆ ಮಾದಿಗ. ಆದರೆ ಬಸವಣ್ಣನ ಭಕ್ತರೆಷ್ಟು ಹೊಲಸು ತಿನ್ನುವುದಿಲ್ಲ, ಹುಸಿಯನಾಡುವುದಿಲ್ಲಾ? ಇಂಥವರನ್ನೆಲ್ಲಾ ಹೊಲೆಯ ಮಾದಿಗ ಎಂದು ಸಮಾಜವೇಕೆ ಪರಿಗಣಿಸುವುದಿಲ್ಲ?" ವಿಡಂಬನಾತ್ಮಕ ವಿಚಾರಗಳನ್ನು ಜನರಿಗೆ ತಿಳಿಸಿ ಕೊಟ್ಟಿದ್ದಾರೆ. ಈ ಮಾತು ಇಂದಿನ ಸಮಾಜಕ್ಕೆ ಇನ್ನೂ ಹೆಚ್ಚು ಪ್ರಸ್ತುತವೆನಿಸುತ್ತದೆ.

ನಂತರ ೧೯೪೩ರಲ್ಲಿ ಕಾರ್ಮಿಕ ಇಲಾಖೆಯ ತನಿಖಾಧಿಕಾರಿಯಾಗಿ ನೇಮಕಗೊಂಡರು. ಇವರು ಸರ್ಕಾರಿ ನೌಕರಿಯಲ್ಲಿ ಸೇವೆ ಸಲ್ಲುತ್ತಿರುವಾಗಲೇ ಅನೇಕ ಜನಪರ ಕಾರ್ಯಗಳನ್ನು ಕೈಗೊಂಡಿದ್ದಾರೆ.

ಗ್ರಾಮೀಣ ಜನರ ಬದುಕನ್ನು ಅದರಲ್ಲಿಯು ದಲಿತರ ಸ್ಥಿತಿಗತಿಯ ಬಗ್ಗೆ ಚೆನ್ನಾಗಿ ಬಲ್ಲವರಾಗಿದ್ದು ಮತ್ತು ಅನುಭವಿಸಿದ್ದರಿಂದ ದಲಿತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳನ್ನು (ಶಿವಮೊಗ್ಗದಲ್ಲಿ). ಜಿಲ್ಲಾ ಆದಿಕರ್ನಾಟಕ ಸಂಘ (ಚಿಕ್ಕಮಂಗಳೂರು) ಶಾಲೆಗಳನ್ನು ಸ್ಥಾಪಿಸಿ ಜನಾಂಗದ ಅಭಿವೃದಿಗೆ ದುಡಿದಿದ್ದಾರೆ. ಈ ಬಗೆಯ ಕಾರ್ಯಗಳನ್ನು ಕೈಗೊಳ್ಳಲು ಕಾರಣ ಆರ್. ಗೋಪಾಲಸ್ವಾಮಿಅಯ್ಯರ್ ರವರ ಪಂಚಮರ ಸೇವೆ ಮತ್ತು ಡಾ. ಬಾಬಾಸಾಹೇಬರವರ ವಿಚಾರಧಾರೆಗಳು ಪ್ರಮುಖವಾದವು. ನಂಜಯ್ಯನವರು ಮೈಸೂರು ಆದಿಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದರು. ಅಲ್ಲದೆ ೦೮-೦೮-೧೯೭೯ರಲ್ಲಿ. 'ಭೀಮವಾಣಿ'ಎಂಬ ಪಾಕ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯಲ್ಲಿ ಸವರ್ಣೀಯರ ದಬ್ಬಾಳಿಕೆ ಶೋಷಣೆಯ ಬಗ್ಗೆ ಬರೆಯುತ್ತಿದ್ದರಿಂದ ಈ ಪತ್ರಿಕೆ ಅಷ್ಟು ಜನಪ್ರೀಯ ಗಳಿಸಲಿಲ್ಲ. ಹಾಗಾಗಿ ಪ್ರತಿ ವರ್ಷ ಡಾ. ಬಾಬಾಸಾಹೇಬ್ ಅಂಬೇಡ್ಕರವರ ಹುಟ್ಟುಹಬ್ಬದ ಸಂದರ್ಭದಲ್ಲಿ ಸ್ಮರಣ ಸಂಚಿಕೆಯೊಂದನ್ನು ತರುವ ಕೆಲಸ ಮಾಡಿದರು.

ಅಲ್ಲದೆ ಒಟ್ಟಾರೆ ಹೇಳಬೇಕೆಂದರೆ ಸಂಪೂರ್ಣವಾಗಿ ಅಂಬೇಡ್ಕರ್‌ರವರ ಪ್ರಭಾವಕ್ಕೊಳಗಾದ ಇವರು ತಮ್ಮ ಜನಾಂಗದ ಬಗ್ಗೆ ಅಪಾರ ಅಭಿಮಾನ ಹೊಂದಿ ೧೯೩೫ರಲ್ಲಿ 'ಅಯೋಲಾ' ಎಂಬ ಸ್ಥಳದಲ್ಲಿ ಭಾಷಣ ಮಾಡುತ್ತಾ "ನಮ್ಮೆಲ್ಲಾ ಬಾಂಧವರು ಗೌರವ ಜೀವನಸಾಗಿಸಬೇಕಾದರೆ ಹಿಂದೂ ಮತವನ್ನು ತ್ಯಜಿಸಿ ಬೇರೆ ಯಾವುದಾದರೂ ಮತಕ್ಕೆ ಮತಾಂತರ ಹೊಂದಿ ಎಂದು ಸಲಹೆ ನೀಡಿ ನಾನು ಹಿಂದುವಾಗಿ ಸಾಯುವುದಿಲ್ಲ ಎಂದು ಹೇಳಿ ಅದರಂತೆ ಮೇ ೨೭, ೧೯೯೦ರಂದು ಸಿಖ್ ಧರ್ಮಕ್ಕೆ ಮತಾಂತರಗೊಂಡರು". ಅಲ್ಲದೆ ಡಾ. ಧನಂಜಯ ಖೀರ್‌ರವರು ಬರೆದ ಡಾ. ಅಂಬೇಡ್ಕರ್‌ರವರ ಜೀವನ ಮತ್ತು ಸಾಧನೆ (Dr. Ambedkar's Life and Mission) ಎಂಬ ಕೃತಿ ಓದಿ ನಂತರ ಅದನ್ನು ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ೨೭ವರ್ಷಗಳ ಕಾಲ ವಿವಿಧ ಹಂತಗಳಲ್ಲಿ ಕಾರ್ಯನಿರ್ವಹಿಸಿ ಉಪಕಮೀಷನರ್ ಹುದ್ದೆಗೇರಿ ೧೯೭೫ ನಿವೃತ್ತರಾಗಿ ನಿವೃತ್ತ ಜೀವನ ನಡೆಸುತ್ತಿದ್ದಾರೆ.

**ಡಿ.ವೆಂಕಟಯ್ಯ**

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಅಚ್ಚುಮೆಚ್ಚಿನ ಶಿಷ್ಯರು ಮತ್ತು ಬೆಂಗಳೂರಿನ ಶ್ರೀರಾಂಪುರದಲ್ಲಿ ಅಯ್ಯರವರ ಜ್ಞಾಪಕರ್ಥವಾಗಿ ನಿರ್ಮಿಸಿದ ವಸತಿಶಾಲೆಯ ನಿರ್ಮಾಪಕರು ಹಾಗೂ ದಲಿತರಲ್ಲಿ ಶಿಕ್ಷಣ ಪಡೆದ ಪ್ರಥಮ ವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀಯುತ ಡಿ. ವೆಂಕಟಯ್ಯನವರು ಮದ್ದೂರು ತಾಲೂಕಿನ ಹೊರಗರಹಳ್ಳಿ ಎಂಬಲ್ಲಿ ದಾಸಪ್ಪ ಮತ್ತು ಬೋರಮ್ಮ ಎಂಬ ದಂಪತಿಗಳ ಮೂರನೆ ಮಗನಾಗಿ ದಿನಾಂಕ ೨೧-೯-೧೯೧೩ರಲ್ಲಿ ಜನಿಸಿದರು. ದಾಸಪ್ಪ ಮತ್ತು ಬೋರಮ್ಮ ದಂಪತಿಗಳಿಗೆ ಬೋರಯ್ಯ ತಿಮ್ಮಯ್ಯ ವೆಂಕಟಯ್ಯ ಹುಚ್ಚಯ್ಯ ತಿಮ್ಮಯ್ಯ ಎಂಬ ಐದು ಜನ ಗಂಡು ಮಕ್ಕಳಿದ್ದರು. ಇವರದು ಬಡಕುಟುಂಬ.

ಮೂರನೇ ಮಗನಾದ ಡಿ. ವೆಂಕಟಯ್ಯನವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿಯೂ ಮಾಧ್ಯಮಿಕ ಶಿಕ್ಷಣವನ್ನು ಮದ್ದೂರಿನಲ್ಲಿಯೂ ಪಡೆದರು. ಆದರೆ ಬಹಳ ಚಿಕ್ಕ ವಯಸ್ಸಿನಲ್ಲಿಯೇ

ಅಂದರೆ ಮಾಧ್ಯಮಿಕ ಶಿಕ್ಷಣವನ್ನು ಪಡೆಯುತ್ತಿರುವಾಗ ತಮ್ಮ ತಂದೆಯನ್ನು ಕಳೆದುಕೊಂಡರು. ನಂತರ ೧೯೩೨ರಲ್ಲಿ ತಮ್ಮ ಆಪ್ತ ಬಂಧುವಾದ ಬಿ. ಸಿದ್ಧಯ್ಯನವರ ಸಹಾಯದಿಂದ ಬೆಂಗಳೂರಿಗೆ ಬಂದು ಅನುದಾನಿತ ಆದಿಕರ್ನಾಟಕ ವಿದ್ಯಾರ್ಥಿನಿಲಯ ಸೇರಿಕೊಂಡು ಕೋಟೆ ಪ್ರೌಢಶಾಲೆಗೆ ಸೇರಿಕೊಂಡರು. ಈ ಸಂದರ್ಭದಲ್ಲಿ ವಿದ್ಯಾರ್ಥಿನಿಲಯದ ಶುಲ್ಕವನ್ನು ಕಟ್ಟಲು ಸಾಧ್ಯವಾಗದಿದ್ದಾಗ ಅವರನ್ನು ವಿದ್ಯಾರ್ಥಿನಿಲಯದಿಂದ ಹೊರಹಾಕಲಾಯಿತು. ಅದೇ ವೇಳೆಗೆ ಅಯ್ಯರ್‌ರವರು ಅವರಿಗೆ ಶುಲ್ಕ ಕಟ್ಟಿ ವಿದ್ಯಾರ್ಥಿನಿಲಯದಲ್ಲಿ ಇರುವುದಕ್ಕೆ ಅವಕಾಶ ಮಾಡಿಕೊಟ್ಟರು. ಅದೇ ವಿದ್ಯಾರ್ಥಿ ನಿಲಯದಲ್ಲಿ ೧೯೩೭ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ನಿಲಯದಲ್ಲಿ ಇವರ ಕಾರ್ಯಚಟುವಟಿಕೆಗಳನ್ನು ನೋಡಿದ ಅಯ್ಯರ್ ನಿಲಯದ ಕಾರ್ಯಚಟುವಟಿಕೆಗಳನ್ನು ನೋಡಿಕೊಳ್ಳಲು ಮುಖಂಡನನ್ನಾಗಿ ನೇಮಿಸಿದರು. ಆ ಸಂದರ್ಭದಲ್ಲಿ ಬಿ. ಪುಟ್ಟರಂಗಯ್ಯ ನಿಲಯದ ಮೇಲ್ವಿಚಾರಕರಾಗಿದ್ದರೆ ಐಸಾಕ್‌ರವರು ನಿಲಯದ ಅಧ್ಯಕ್ಷರಾಗಿದ್ದರು. ೧೯೪೦ರಲ್ಲಿ ಬಡಕುಟುಂಬದ ಮನೆಯ ಹುಡುಗಿಯಾದ ಪಾರ್ವತಮ್ಮನವರನ್ನು ವಿವಾಹವಾದರು. ಇವರು ಮೋಜಿಣಿದಾರ ಕಛೇರಿ(ಸರ್ವೇಆಫೀಸ್)ಯಲ್ಲಿ ಗುಮಾಸ್ತರಾಗಿ ಸೇರಿಕೊಂಡು ಕೊನೆಯವರೆಗೂ ಯಾವ ಬಡ್ತಿಯನ್ನು ಪಡೆಯದೆ ನಿರಾಕರಿಸಿ ಕೇವಲ ಗುಮಾಸ್ತರಾಗಿಯೇ ಮುಂದುವರೆದರು. ಕಾರಣವನ್ನು ಮುಂದೆ ಹೇಳಲಾಗಿದೆ.

ವಿದ್ಯಾರ್ಥಿ ದಿಸೆಯಲ್ಲೇ ಜನಾಂಗದ ಅಭಿವೃದ್ಧಿ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ವೆಂಕಟಯ್ಯನವರು ಅಯ್ಯರ್‌ರವರ ಪಂಚಮರ ಅಭಿವೃದ್ಧಿ ಕಾರ್ಯಗಳಿಗೆ ಸಂಪೂರ್ಣವಾಗಿ ಮಾರುಹೋದರು. ಅವರ ಋಣವನ್ನು ಪಂಚಮ ಜಾತಿಯ ಪರವಾಗಿ ಹೇಗಾದರು ಮಾಡಿ ತೀರಿಸ ಬೇಕೆಂದು ತೀರ್ಮಾನಿಸಿ ಪ್ರಮಾಣ ಮಾಡಿ ಕಾರ್ಯಪ್ರವೃತ್ತರಾದರು. ಕಾರಣವಾದರೂ ಇಷ್ಟೇ ವ್ಯವಸ್ಥಿತ ವಾದ ಪೂರ್ವಗ್ರಹ ತಿರ್ಮಾನದಿಂದಲೇ "ದಲಿತರೆಂದರೆ ಅಸಹಾಯಕರು ಅಕ್ಷರ ಕಲಿಯಲು ಸಾಧ್ಯವಾಗ ದವರು, ಸಾಮಾಜಿಕವಾಗಿ ಎಲ್ಲಾ ರೀತಿಯಿಂದಲೂ ಕೀಳು ಎಂಬಂತೆ ಇರುವವರು ಅನುಕಂಪಕ್ಕೆ ಒಳಗಾಗಬೇಕಾದವರು" ಎಂಬ ಭಾವನೆಯನ್ನು ಹೊಂದಿದ್ದಂತಹ ಸಂದರ್ಭದಲ್ಲಿ ಆರ್. ಗೋಪಾಲ ಸ್ವಾಮಿಅಯ್ಯರ್‌ರವರು ಕಗ್ಗತ್ತಲಲ್ಲಿ ಬದುಕುತ್ತಿದ್ದ ದಲಿತರನೆಲ್ಲಾ ಬೆಳಕು ಕಂಡು ಮೈಸೂರು ಸಂಸ್ಥಾನದಲ್ಲಿ ಎಲ್ಲಾ ಮಾನವರಂತೆ ಸರಿಸಮಾನವಾಗಿ ಸ್ವಾಭಿಮಾನಂದಿದ ಬದುಕುವಂತೆ ಮಾಡಿದ ಒಂದು ದಿವ್ಯಜ್ಞಾನ ಶಕ್ತಿಯೆಂದೇ ಹೇಳಬಹುದು. ಒಟ್ಟಾರೆ ಪಂಚಮರ ಬಾಳಿನ ಸುಖ-ದುಃಖಗಳನ್ನು ಹಂಚಿಕೊಂಡ ಮಹಾನ್ ಮಾನವತಾವಾದಿ ಎಂದು ಹೇಳಬಹುದು.

ಈ ಎಲ್ಲಾ ಹಿನ್ನೆಲೆಯಲ್ಲಿ ಅಯ್ಯರ್‌ರವರ ಋಣವನ್ನು ತೀರಿಸಲು ಕಾರ್ಯಪ್ರವೃತ್ತರಾದ ವೆಂಕಟಯ್ಯನವರು ಮನೆಮನೆ ಜಾಥಾ ಮಾಡಿದರು. ಅಂದಿನ ಸಂದರ್ಭದಲ್ಲಿ ಶಿಕ್ಷಣಪಡೆದು ಸರ್ಕಾರಿ ಸೇವೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಪಂಚಮ ದುರೀಣರ ವೇದಿಕೆಯನ್ನು ಆಗಾಗ್ಗೆ ಏರ್ಪಡಿಸಿ, ಆಹ್ವಾನಿಸಿ. ಅವರನ್ನು ಹೊಗಳಿ ಮಾಲಾರ್ಪಣೆ ಮಾಡಿ ಗೌರವಿಸಿ ನಮ್ಮವರೆಂದು ಹೆಮ್ಮೆಪಟ್ಟು ಅವರಿಂದ ಹಣ ಸಂಗ್ರಹಿಸುತ್ತಿದ್ದರು ಹಾಗೂ ಅಧಿಕಾರಿಗಳನ್ನು ದಯಾಳುಗಳನ್ನು ಮತ್ತು ಸಂಘ ಸಂಸ್ಥೆಗಳಿಗೆ ಕಾಲ್ನಡಿಗೆಯಲ್ಲಿ ಬೇಟಿ ಮಾಡಿ ಸಂಗ್ರಹಿಸಿದರು. ಹೀಗೆ ಸಕರವಾಗಿ ಸಂಚರಿಸಿ

ಕೊನೆಗೊಂದು ದಿನ ಕ್ಷಯ ರೋಗಕ್ಕೊಳಗಾಗಿ ವಿಕ್ಟೋರಿಯಾ ಆಸ್ಪತ್ರೆಗೆ ಸೇರಿದಾಗ ಅಲ್ಲಿಯೂ ಸಹ ವೈದ್ಯರುಗಳನ್ನು ಬೇಡಿ ಚಿಕ್ಕವರು ದೊಡ್ಡವರು ಎನ್ನದೆ ಕೈಬಡ್ಡಿ ಹಣ ಯೋಚಿಸಿದರು. ಇಷ್ಟೆಲ್ಲದಾರ ಮುಖ್ಯ ಪ್ರಯತ್ನ ಅವರ ಹೃದಯಾಂತರಾಳದಲ್ಲಿ ಹರಿಜನೋದ್ಧಾರಕ ಶ್ರೀ ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಹೆಸರಿನಲ್ಲಿ ಉಚಿತ ವಿದ್ಯಾರ್ಥಿ ನಿಲಯವನ್ನು ನಿರ್ಮಿಸಿ ಜಾತಿಯ ಋಣ ತೀರಿಸಬೇಕೆಂಬ ಮಹಾದಾಸೆ ಮನೆ ಮಾಡಿತು. ಮುಂದಿನ ವಿವರಣೆಯನ್ನು ಶ್ರೀಯುತ ಡಿ. ವೆಂಕಟಯ್ಯನವರು ಬರೆದಿರುವ ಹಸ್ತಕ್ಷರವನ್ನು ಬಳಸಿಕೊಳ್ಳಲಾಗಿದೆ.

ಆರ್. ಗೋಪಾಲಸ್ವಾಮಿಅಯ್ಯರ್ ಪಂಚಮ ವಿದ್ಯಾರ್ಥಿನಿಲಯದ ನಿರ್ಮಾಪಕ ಶ್ರೀ ಡಿ. ವೆಂಕಟಯ್ಯನವರು. ಹುಟ್ಟಿದ ಸ್ಥಳ ಮದ್ದೂರು ತಾಲೂಕು ಹೊರಗರಹಳ್ಳಿ. ಮಂಡ್ಯ ಡಿಸ್ಟ್ರಿಕ್ಟ್. ತಂದೆ ದಾಸಪ್ಪ ತಾಯಿ ಬೋರಮ್ಮ ಬಡಕುಟುಂಬ. ತಂದೆಯು ಮಿಡಲ್ ಸ್ಕೂಲ್‌ನಲ್ಲಿರುವಾಗಲೇ ತೀರಿಹೋದರು. ೧೯೩೨ನೇ ಇಸವಿಯಲ್ಲಿ ಆಪ್ತ ಬಂಧುವಾದ ಶ್ರೀ ಬಿ. ಸಿದ್ದಯ್ಯ ಮತ್ತು ಅವರ ಸಹಾಯದಿಂದ ಬೆಂಗಳೂರಿಗೆ ಬರಲಾಯಿತು. ಎಲ್ಲೆಲ್ಲಿಯೂ ಸ್ಥಳವಿಲ್ಲದೆ ಪೇಚಾಡುತ್ತಿರುವಾಗ ಆದಿ ಕರ್ನಾಟಕ ಎಡೆಡ್ ಹಾಸ್ಟಲ್ ಸ್ಥಾಪಿಸಲಾಗಿ ನಾವು ಅಲ್ಲಿ ಸೇರಲಾಯಿತು. ೧೯೩೬ನೇಇಸವಿಯಲ್ಲಿ ಅದೇ ಹಾಸ್ಟಲ್‌ನಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆಯಾಯಿತು ನಿಲಯದ ಚಟುವಟಿಕೆ ನೋಡಿಕೊಳ್ಳಲು ನನ್ನನ್ನು ಮುಖಂಡನನ್ನಾಗಿ ನೇಮಿಸಲ್ಪಟ್ಟ ೧೯೪೩ರಲ್ಲಿ ಆರ್. ಗೋಪಾಲಸ್ವಾಮಿಅಯ್ಯರ್ ದಿವಂಗತರಾದರು. ಪ್ರೆಸಿಡೆಂಟಾಗಿ ಇದ್ದ ಐಸಾರ್ ವಾರ್ಡನ ಆಗಿದ್ದ ಬಿ. ಪುಟ್ಟರಂಗಯ್ಯನವರು ನಿಲಯದ ಆಡಳಿತ ನಡೆಯುವುದಕ್ಕೆ ದೂರವಾದರು.

ನಿಲಯಕ್ಕೆ ಹತ್ತು ಸಾವಿರ ರೂಪಾಯಿ ಸಾಲ ಇತ್ತು. ಬಾಡಿಗೆ ಒಂದು ಸಾವಿರ ರೂಪಾಯಿ ಕೊಡಬೇಕಾಗಿತ್ತು. ನಿಲಯ ನಿಂತು ಹೋಯಿತು. ಇದರ ಅದೋಗತಿಯನ್ನು ನೋಡಿ ಕಣ್ಣೀರಿಟ್ಟು ಭಗವಂತನ ಪ್ರೇರಣೆ ಮತ್ತು ಸ್ವತಃ ಇಚ್ಚೆಯಿಂದ ತಾನೇ ಶ್ರೀಯುತರುಗಳಾದ ಎಂ.ಎ. ಗೋಪಾಲಸ್ವಾಮಿ ಅಯ್ಯಂಗಾರ್ ಪಿ.ಆರ್. ರಾಮಯ್ಯ ಹೆಚ್.ಸಿ. ಸೂರ್ಯನಾರಾಯಣರಾವ್ ಇವರನ್ನು ಒಳಗೊಂಡ ಕಾರ್ಯನಿರ್ವಾಹಕ ಸಮಿತಿಯನ್ನು ಮಾಡಿ ನಾನೇ ವಾರ್ಡನ ಆಗಿ ದುಡಿಯಲು ಸಿದ್ದನಾದೆನು. ವಾರ್ಡನ್ ಆದರು ಇದರ ಅಗು-ಹೋಗುಗಳಗೆಲ್ಲಾ ನಾನೇ ಜವಾಬ್ದಾರನೆಂದು ಬರೆದುಕೊಟ್ಟೆ. ಪುನಃ ಹಾಸ್ಟಲ್‌ನ್ನು ೧೯೪೮ನೇ ಆಗಸ್ಟ್ ೮ನೇ ತಾರೀಖು ತೆರೆಯಲಾಯಿತು. ಸರ್ಕಾರಿ ಗ್ರ್ಯಾಂಟ್ ಇಲ್ಲದೆ ಬಿಕ್ಷಾಟನೆಯಿಂದ ಎಂಟು ತಿಂಗಳು ಹಾಸ್ಟಲ್‌ನ್ನು ನಡೆಸಲಾಯಿತು. ಅದರೆ ಮನೆ ಬಾಡಿಗೆ, ಇದ್ದ ಹತ್ತು ಸಾವಿರರೂ ಸಾಲ. ಇದರ ಒತ್ತಾಯ ಜಾಸ್ತಿಯಾಗಿ ಸರ್ಕಾರದವರು ಹಾಸ್ಟಲ್ ನಡೆಸುವುದಕ್ಕೆ ಅವಕಾಶ ಕೊಡಲಿಲ್ಲ. ಅನಂತರ ನಿಲಯವು ಪೂರ್ತಿ ಮುಚ್ಚಲಾಯಿತು. ೧೯೪೫ನೇ ಇಸವಿಯಲ್ಲೂ ಕೂಡ ಮುಚ್ಚಿ. ಕಟ್ಟಡದ ಮಾಲೀಕರನ್ನು ಕಟ್ಟಡವನ್ನು ವಾಪಸ್ ಪಡೆಯಲು ಒತ್ತಾಯ ಮಾಡಲಾಗಿ ಸ್ಥಳವಿಲ್ಲದೆ ಹಾಸ್ಟಲ್ ಮುಚ್ಚಿ ಹೋಯಿತು. ಇದರ ಬೇನೆಯು ನನ್ನನ್ನು ಚೆನ್ನಾಗಿ ಬೆನ್ನೆತ್ತಿತು. ನಾನು ಇಷ್ಟಕ್ಕೆ ಸುಮ್ಮನಾಗಲಿಲ್ಲ.ಕೊನೆಗೆ ಸ್ನೇಹಿತರ ಸಹಾಯದಿಂದ ಬಂಬೂಬಜಾರ್‌ನಲ್ಲಿ ಬಾಡಿಗೆ ಮನೆಯಲ್ಲಿ ಪುನಃ ಪ್ರಾರಂಭ ಮಾಡಿದೆ. ಹಿಂದೆ ಸರ್ಕಾರಿ ಗ್ರ್ಯಾಂಟ್ ತಿಂಗಳಿಗೆ ಬರುವ ಊಟದ ಚಾರ್ಜ್ ಕಳೆದು ಹೆಚ್ಚು ಬರುವದುಡ್ಡನ್ನು ವಿದ್ಯಾರ್ಥಿಗಳೇ ಕೊಡ ಬೇಕಾಗಿತ್ತು. ನಿಲಯಕ್ಕೆ ಸೇರಲು

ಹುಡುಗರು ಮುಂದಕ್ಕೆ ಬರಲಿಲ್ಲ. ಕೊನೆಗೆ ಮೈಸೂರು ಚಾಮುಂಡಿ ಎಡೆಡ್ ಹಾಸ್ಟಲ್‌ಗೆ ಹೋಗಿ ಚಾರ್ಜ್ ಇಲ್ಲದೆ ಉಚಿತ ಊಟ ಹಾಕುತ್ತೇನೆ ಬಟ್ಟೆ ಕೊಡಿಸುತ್ತೇನೆಂದು ಹೇಳಿ ಹದಿನೈದು ಹುಡುಗರನ್ನು ಕರೆದುತಂದು ಇಲ್ಲಿಯೆ ಕೆಲವು ಹುಡುಗರನ್ನು ಸೇರಿಸಿ ಒಟ್ಟು ಇಪ್ಪತ್ತೆರಡು ಹುಡುಗರಿಂದ ಹಾಸ್ಟಲ್ ಪ್ರಾರಂಭ ಆದರೂ ನನಗೆ ಕಷ್ಟವಾಯಿತು. ಉಚಿತವಾಗಿ ಅನ್ನಹಾಕಲು ಪ್ರಾರಂಭಿಸಿದೆ. ಬಹಳ ಕಷ್ಟವಾಗಿ ನ್ಯೂತರಗಪೇಟೆಯಲ್ಲಿ ನರಸಿಂಹರೆಡ್ಡಿಯವರ ಬಿಲ್ಡಿಂಗ್‌ನಲ್ಲಿ ಬಾಡಿಗೆ ತೆಗೆದುಕೊಂಡು ನ್ಯೂತರಗಪೇಟೆಯನ್ನೆಲ್ಲಾ ಭಿಕ್ಷೆಬೇಡಿ ಒಂದು ವರ್ಷ ಹಾಸ್ಟಲ್ ನಡೆಸಿಲಾಯಿತ್ತು. ಅಲ್ಲೂ ಕೂಡ ವಾತಾವರಣ ಸರಿಬೀಳದೆ ನರಸಿಂಹರೆಡ್ಡಿಯವರು ತಮಗೆ ಬಿಲ್ಡಿಂಗ್ ಬೇಕು ಎಂದು ಒತ್ತಾಯಪಡಿಸಿದರು ಅಲ್ಲೂ ಬಿಟ್ಟದ್ದಾಯಿತು. ೧೯೪೫ರಲ್ಲಿ ಮೂವತ್ತಾರು ಹುಡುಗರು ನನ್ನ ಬೆನ್ನತ್ತಿದ್ದರು. ಯಾರು ಹಾಸ್ಟಲ್‌ಗೆ ಬಿಲ್ಡಿಂಗ್ ಕೊಡದೆ ಪಂಚಮರೆಂದು ದೂಷಿಸಿದರು. ಕೊನೆಗೆ ಶ್ರೀರಾಂಪುರದ ನಾಲ್ಕನೇ ಕ್ರಾಸ್‌ನಲ್ಲಿ ಆರ್.ಎಸ್.ಎಸ್.ನವರಿಗೆ ಸೇರಿದ್ದ ಒಂದು ಕಟ್ಟಡ ಸೇರಿತ್ತು. ಅದರ ಮಾಲಿಕರು ಜಿ. ಅಣ್ಣಾಜಿ ಐಯ್ಯಂಗಾರ್ ಈ ಕಟ್ಟಡವನ್ನು ನೀವೇ ಕಮಾಂಡಿಯರ್ ಮಾಡಿಸಿ ಕೊಡಬೆಕೆಂದು ಆಗ ಜಿಲ್ಲಾಧಿಕಾರಿ ಯಾಗಿದ್ದ ಎಂ.ಕೆ. ಅಪ್ಪಾಜಪ್ಪನವರ ಮನೆಯ ಹತ್ತಿರ ಹುಡುಗರನ್ನು ಕರೆದುಕೊಂಡು ಹೋಗುತ್ತಿರುವಾಗ ಹುಡುಗರು ಮಹಾತ್ಮಗಾಂಧೀಜಿಕಿ ಜೈ ಎಂದು ಕೂಗಲಾಗಿ ಪೋಲೀಸಿನವರು ನನ್ನನ್ನು ಬೈದು ಸ್ಟ್ರೈಕ್ ಮಾಡಿಸುತ್ತೇವೆಂದು ಹೇಳಲಾಗಿ ಕೋರ್ಟ್‌ಗೆ ಹಾಕಿದರು. ಆಗ ಕಾಂಗ್ರೇಸ್ ಸರ್ಕಾರವಿರಲಿಲ್ಲ. ಎರಡು ದಿನಗಳ ನಂತರ ಬಿಟ್ಟು ಬಿಟ್ಟರು. ಪುನಃ ಮೂವತ್ತಾರು ಹುಡುಗರ ಜೋತೆಯಲ್ಲಿ ಗವಿಪುರ ಗುಟ್ಟಹಳ್ಳಿಯಲ್ಲಿದ್ದ ಜಿಲ್ಲಾಧಿಕಾರಿ ಎಂ.ಕೆ. ಅಪ್ಪಾಜಪ್ಪನವರ ಮನೆಯ ಮುಂದೆ ಹುಡುಗರ ಸಮೇತ ಮಲಗಿದೆನು. ಜಿಲ್ಲಾಧಿಕಾರಿಗಳು ಕರುಣೆಯಿಂದ ನಮ್ಮನ್ನು ನೋಡಿ ಕಷ್ಟಸುಖಗಳನ್ನು ಕೇಳಿದರು. ನನ್ನನ್ನು ಅವರ ಕಾರಿನಲ್ಲೇ ಕೂರಿಸಿಕೊಂಡು ಬಂದು ಬಿಲ್ಡಿಂಗ್‌ನ್ನು ಕಮಾಂಡಿಂಗರ್ ಮಾಡಿ ಕೈಗೆ ಆರ್ಡರ್ ಕೊಟ್ಟರು. ಆಗ ಡಿ.ಎಸ್.ಪಿ.ಆಗಿದ್ದ ಅನಂತರಾಮ ಅಯ್ಯಂಗಾರ್‌ರವರು ರಿಜರ್ವ್ ಪೋಲಿಸ್ ಕರೆಸಿ ನನ್ನ ಜೊತೆಯಲ್ಲಿ ಕಳುಹಿಸಿ ಕಷ್ಟಪಟ್ಟು ಬೀಗ ಒಡೆದು ಕಟ್ಟಡವನ್ನು ನನ್ನ ಸ್ವಾದೀನಕ್ಕೆ ಕೊಟ್ಟರು. ಇದ್ದ ಈ ವರ್ತನೆಯನ್ನು ಕಾರ್ಯನಿರ್ವಾಹಕ ಸಮಿತಿಯವರು ನನ್ನ ಕಷ್ಟ. ಧೈರ್ಯವನ್ನು ನೋಡಿ ಉತ್ತೇಜನ ಕೊಟ್ಟರು. ಬರಬರುತ್ತಾ ನಿಲಯವು ಕಷ್ಟವಾದರೂ ಸರ್ಕಾರಿ ಗ್ರ್ಯಾಂಟ್ ಅಲ್ಪವಾದರೂ ಮಕ್ಕಳಿಗೆ ಹೊಟ್ಟೆ ತುಂಬಾ ಊಟ ಹಾಕುತ್ತ ಅಭಿವೃದ್ಧಿ ಪಡಿಸಿದನು. ಆದರೆ ಈ ಕಷ್ಟನಿಷ್ಠುರಗಳು ನನ್ನ ತಲೆಯಲ್ಲಿ ನಿಂತುಹೋದವು. ೧೯೪೬ನೇ ಇಸವಿಯಿಂದ ೧೯೫೧ರವರೆಗೂ ನಾಲ್ಕನೇ ಕ್ರಾಸ್‌ನಲ್ಲಿದ್ದು ತದನಂತರ ಒಂದನೇ ಕ್ರಾಸ್‌ಗೆ ನಿಲಯವನ್ನು ಹಿಸಿದೆ. ನಾನೇ ಸ್ವಂತ ಕಟ್ಟಡವನ್ನು ಮಾಡಬಾರದು ಎಂಬ ಆಲೋಚನೆಗೆ ಗುರಿಯಾದೆನು. ಯಾರ ಕೃಪೆ ಯಾವ ದೈವ ಪ್ರೇರಣೆಯಿಂದ ಈಗ ಆಲ್ಲಿ ನಿವೇಶನವು ಖಾಲಿಯಾಗಿ ಬಿದ್ದಿತು. ಮುಳ್ಳುಗಿಡಗಳು ಬೆಳೆದು ಬಹಳ ಹಳ್ಳದಲ್ಲಿತ್ತು. ರಾತ್ರಿ ಒಂಬತ್ತು ಗಂಟೆಯಲ್ಲಿ ಒಬ್ಬನೇ ಖಾಲಿ ನಿವೇಶನದಲ್ಲಿ ಕುಳಿತು ಯೋಚನೆ ಮಾಡಿದೆ. ನಾನೇ ಏತಕ್ಕೆ ಈ ಸೈಟನ್ನು ತೆಗೆದುಕೊಳ್ಳಬಾರದು ಎಂದು ಯೋಚಿಸಿ ಧೈರ್ಯಮಾಡಿ ಮುನಿಸಿಪಾಲ್‌ಟಿಗೆ ನನ್ನ ಅರ್ಜಿಯನ್ನು ಗುಜರಾಯಿಸಿದೆ. ದೇವರ ಕೃಪೆಯಿಂದ ಆ ಕಾಲದಲ್ಲಿ ಹೆಚ್.ಸಿ. ಸೂರ್ಯನಾರಯಣರಾವ್ ಮುನಿಸಿಪಾಲಿಟಿಯಲ್ಲಿ ಸದಸ್ಯರಾಗಿದ್ದರು. ಭಗವಂತನ ಕೃಪೆಯಿಂದ

೧೨೫x೩೫ ಸ್ಥಳವು ಮಂಜೂರಾಯಿತು. ಇದಕ್ಕೆ ಹಣಬೇಕಾಯಿತು. ಸರ್ಕಾರದ ಸಹಾಯವು ಬೇಕಾಯಿತು. ಏನೇ ಆಗಲಿ ಕಟ್ಟಡವನ್ನ ಕಟ್ಟಬೇಕೆಂಬ ಉದ್ದೇಶದಿಂದ ನನ್ನ ಸ್ವಂತ ಅಭಿವೃದ್ಧಿಯನ್ನು ಕೊರೆದೆನು. ಅದೇ ಕಾಲದಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್ ಡ್ರಾಮಿಟಿಕ್ ಅಸೋಸಿಯಷೆನ್ ಎಂದು ಸ್ಥಾಪಿಸಿ ಅದಕ್ಕೆ ವೈ.ಸಿ. ಹೊಂಬಾಳಯ್ಯನವರನ್ನು ಪ್ರೆಸಿಡೆಂಟಾಗಿ ಮಾಡಿ ನಾಟಕ ಕಲೆಯನ್ನು ಮುಂದುವರೆಸಿದೆ.

ತಕ್ಷಣವೇ ಒಂದು ನಾಟಕವನ್ನಾಡಿ ಒಂದು ಸಾವಿರ ರೂ.ಗಳನ್ನು ಬ್ಯಾಂಕಿನಲ್ಲಿ ಇಟ್ಟೆನು ತದ ನಂತರ ಆ ಕಾಲದಲ್ಲಿ ಮುಖ್ಯಮಂತ್ರಿಗಳಾಗಿದ್ದ ಶ್ರೀಮಾನ್ ಚಂಗಾಲರಾಯ ರೆಡ್ಡಿಯವರಿಂದ ಅಸ್ತಿಬಾರ ಶಿಲೆಯನ್ನು ಹಾಕಿಸಿದ್ದಾಯಿತು. ಆದರೇನೂ ಹಣವಿಲ್ಲ. ಸರ್ಕಾರ ಕೇಳಲು ಐದು ಸಾವಿರ ರೂಪಾಯಿ ಮಂಜೂರು ಮಾಡಿದರು. ಆದರೂ ಸುಮ್ಮನಿರಲಿಲ್ಲ. ಜನಾಂಗದ ಮುಖಂಡರನ್ನು ನಿಲಯಕ್ಕೆ ಕರೆಯಲು ಕೆಲವರು ಉತ್ತೇಜನ ಕೊಟ್ಟರು ಕೆಲವರು ನನ್ನನ್ನು ಹೀಯಾಳಿಸಿದರು. ಈ ಕೆಲಸವು ನಿನ್ನಿಂದಾಗಿತೇ ಎಂದು ಮೂದಲಿಸಿದರು. ಸರಿಯಾದವರ ಪ್ರೆಸಿಡೆಂಟ್ ಸೆಕ್ರೆಟರಿ ಬೇಕು ಎಂದು ಮೂದಲಿಸಿದರು. ಆದರೆ ವೈ.ಸಿ. ಹೊಂಬಾಳಯ್ಯನವರು ಈ ಜಾಗಕ್ಕಿಂತ ಇನ್ನು ದೊಡ್ಡದಾಗಿ ತೆಗೆದುಕೊಂಡು ಬಿಲ್ಡಿಂಗ್ ಕಟ್ಟುವುದು ಉತ್ತಮವೆಂದು ಸಲಹೆಕೊಟ್ಟರು. ಪುನಃ ಮುನಿಸಿಪಾಲಿಟಿಗೆ ಜಾಗವನ್ನು ಇನ್ನು ಹೆಚ್ಚಾಗಿ ಕೊಡಬೇಕೆಂದು ಅರ್ಜಿ ಗುಜರಾಯಿಸಿದೆನು. ಆ ಕಾಲದಲ್ಲಿ ಶ್ರೀ ಬಿ. ಬಸವಲಿಂಗಪ್ಪ. ವಿ.ಆರ್. ನಾಯ್ಡು ಅವರು ಮುನಿಸಿಪಾಲಿಟಿ ಸದಸ್ಯರಾಗಿದ್ದರು. ಟಿ. ಚನ್ನಯ್ಯನವರು. ಮಂತ್ರಿಗಳಾಗಿದ್ದರು. ಒಟ್ಟು ಜಾಗವು ೧೪೦x೫೦ ವಿಸ್ತರಿಸಲಾಯಿತು. ಅದುವರೆಗೆ ಇಪ್ಪತ್ತೇಳು ಸಾವಿರ ರೂಪಾಯಿಗಳನ್ನು ನಾನು ಕಲೆಕ್ಟ್ ಮಾಡಿ ಸ್ವತಃ ಬಿಲ್ಡಿಂಗ್‌ನ್ನು ಬೇಗ ಒಂದು ಮಟ್ಟಕ್ಕೆ ತಂದೆನು ಆದರೂ ಕಷ್ಟವಾಯಿತು. ಅಲ್ಲಿ ನಾನು ಪಿ.ಆರ್. ರಾಮಯ್ಯನವರ ಸಹಾಯದಿಂದ ಕೆ. ಹನುಮಂತನವರನ್ನು ನೋಡಿ ಅವರನ್ನು ನಮ್ಮ ಸರ್ಕಾರ ಕೊರ್ಟ್‌ಗೆ ಒಪ್ಪಿಸಿ ಕೊಡೆನು. ಬೇರೆಯವರ ಸಹಾಯದಿಂದ ಮೂರು ಸಾವಿರ ರೂಪಾಯಿಗಳ ಖರ್ಚಿನಲ್ಲಿ ಒಂದು ದೊಡ್ಡ ಸಮಾರಂಭವನ್ನು ಏರ್ಪಾಟುಮಾಡಿದೆ. ಆದರೆ ಹನುಮಂತಯ್ಯನವರು ದೊಡ್ಡ ಮನುಸ್ಸುಳ್ಳವರಾಗಿದ್ದು ಇದುವರೆಗೆ ಸಮಿತಿಯವರು ಖರ್ಚು ಮಾಡಿರುವ ಹಣ ಮತ್ತು ಉಳಿದ ಬಾಕಿ ಮೊತ್ತವನ್ನು ಸರ್ಕಾರ ಕೊಡುವಂತೆ ಆಜ್ಞೆ ಮಾಡಿದ್ದರು. ಅಷ್ಟರಲ್ಲಿ ನಾನು ಮೂರು ತಿಂಗಳು ಖಾಯಿಲೆ ಬಿದ್ದು ಆಸ್ಪತ್ರೆ ಸೇರಿದೆ. ಆಗ ಡಾ. ಮುನಿಸ್ವಾಮಿಯವರು ನನ್ನನ್ನು ಕೈಹಿಡಿದು ನನ್ನ ಆರೋಗ್ಯ ಮತ್ತು ಮನೆಯ ಸರ್ವಸ್ವವನ್ನು ವಹಿಸಿಕೊಂಡರು. ಏತಕ್ಕೆಂದರೆ ನನ್ನನ್ನು ಈ ಕಷ್ಟ ಪರಿಸ್ಥಿತಿ ಮತ್ತು ಒಳ್ಳೆಯ ಕಾರ್ಯವನ್ನು ನೋಡಿದನಂತರ ಸರ್ಕಾರದ ಹಣವನ್ನು ಮಂಜೂರು ಮಾಡಿಸಿ ಕಟ್ಟಡ ಕೆಲಸವನ್ನು ಪೂರ್ತಿಗೊಳಿಸಿದೆನು. ಸೈಟು ತೆಗೆದುಕೊಳ್ಳಲಾಗಿ ನನ್ನನ್ನು ಅನೇಕರು ಚಪ್ಪಲಿಗಳನ್ನು ನನ್ನ ಮೇಲೆ ಎಸೆದರು ಪೊರಕೆ ನೀರನ್ನು ಎಸೆದರು ಬೈದರು ತೆಗಳಿದರು (ಸುತ್ತಮುತ್ತಲಿನ ಜನರು). ಆದರೂ ನಿಲಯದ ಕೆಲಸವು ದಿನೇದಿನೇ ಹೆಚ್ಚುತ್ತ ಬಂದಿತು. ನಿಲಯದ ವಿದ್ಯಾರ್ಥಿಗಳ ಸಂಖ್ಯೆಯು ಇಪ್ಪತ್ತೈದು ಜನ ಇದ್ದರೆ ಐವತ್ತು ಜನಕ್ಕೆ ಕೂಡುವುದು ಐವತ್ತು ಜನ ಇದ್ದರೆ ನೂರು ಜನ ಕೂಡುವುದು ಇದೇ ರೀತಿಯಾಗಿ ಎರಡು ನೂರ ಐವತ್ತಕ್ಕೆ ಹುಡುಗರ ಸಂಖ್ಯೆಯನ್ನು ಏರಿಸಿದೆನು. ಎರಡು ನೂರ ಐವತ್ತಕ್ಕೆ ಗ್ರ್ಯಾಂಟ್ ಕೂಡ ಮಂಜೂರು

ಮಾಡಿಸಿದೆನು. (ವರ್ಷ ವರ್ಷ)ಒಂದು ಕಡೆ ಬಿಲ್ಡಿಂಗ್ ದುಡ್ಡು ವಸೂಲಿ ಮಾಡುವುದು. ಈಕಡೆ ಹುಡುಗರಿಗೆ ಉಚಿತವಾಗಿ ಅನ್ನ ಹಾಕುವುದು. ಇದು ನನ್ನ ಶಕ್ತಿಯನ್ನೇ ಹೇರಿತು. ಜೊತೆಗೆ ಗೋಪಾಲಸ್ವಾಮಿಅಯ್ಯರ್ ಡ್ರಮಾಟಿಕ್ ಅಸೋಸಿಯೆಷನ್‌ಅನ್ನು ಮೈಸೂರು ಸರ್ಕಾರದ ಸಂಗೀತ ಆಕಾಡೆಮಿಯಿಂದ ಮನ್ನಣೆಪಡೆದು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಹೊಂದಿಸಿ ಒಂದು ಕಂಪನಿ ಯನ್ನು ಪ್ರಾರಂಭ ಮಾಡಿದೆನು. ಅನೇಕ ನಾಟಕಗಳನ್ನು ಬೆಂಗಳೂರು ಮೈಸೂರು ತುಮಕೂರು ಮುಂತಾದ ಕಡೆಗಳಲ್ಲಿ ನಾಟಕ ಆಡಿಸೀ ಬಂದ ದುಡ್ಡನ್ನು ಬಿಲ್ಡಿಂಗ್ ಕೆಲಸಕ್ಕೆ ಉಪಯೋಗಿಸಿಕೊಂಡು ಆ ಕಂಪನಿಗೆ ನಾನೇ ಸೆಕ್ರೆಟರಿಯಾಗಿ ಈಗಲು ಕಾರ್ಯ ನಿರ್ವಹಿಸುತ್ತಿದ್ದೇನೆ.

ನಾನು ೧೯೪೦ನೇ ಇಸವಿಯಲ್ಲಿ ಒಬ್ಬ ಬಡಕುಟುಂಬದ ಮನೆಯಲ್ಲಿ ಹೆಣ್ಣನ್ನು ಲಗ್ನವಾದೆನು. ಸರ್ವೆಆಫೀಸ್‌ನಲ್ಲಿ ಸಣ್ಣ ನೌಕರನಾಗಿ ಸೇರಿದೆನು. ಆಫೀಸ್‌ನಲ್ಲಿ ಕೊನೆಯವರೆಗೂ ಯಾವ ಪ್ರಮೋಸೆನ್ ವಗೈರೆ ತೆಗೆದುಕೊಳ್ಳಲು ನಿರಾಕರಿಸಿದೆ. ನನ್ನ ಧರ್ಮಪತ್ನಿಯು ಈ ಪವಿತ್ರವಾದ ಕೆಲಸಕ್ಕೆ ಮತ್ತಷ್ಟು ಉತ್ತೇಜನ ಕೊಟ್ಟು ಕೆಲಸವು ಸುಗುಮವಾಗಿ ನಡೆಯಲು ನೇರೆವಾದಳು. ಕೊನೆಗೆ ನಾನಾ ತೊಂದರೆಗಳಂದ ನನ್ನ ಆರೋಗ್ಯ ಭಾಗ್ಯವು ಕೆಟ್ಟು ಹೋಯಿತು. ನಿಲಯಕ್ಕೆ ಇನ್ನು ಜಾಗ ಸಾಲದೇ ಪುನಃ ೨೪೦x೪೦ ಅಡಿ ಜಾಗವನ್ನು ಕಾರ್ಪೊರೇಷನ್‌ನಿಂದ ತೆಗೆದುಕೊಂಡೆ. ಆಗ ಮುನಿಸಿಪಾಲಿಟಿ ಮಂಜೂರು ಮಾಡಿದರು ಕೂಡ ಕೆಲವರು ತೊಂದರೆಯಿಂದ ಅದನ್ನು ಸ್ವಾಧೀನಕ್ಕೆಡೆ ಮಾಡಿದರು. ವಿಕ್ಟೋರಿಯಾ ಹಾಸ್ಟಲ್‌ನಲ್ಲಿ ಖಾಯಿಲೆಯಿಂದ ನರಳುತ್ತಿದ್ದೆ. ಆದರೆ ಅಲ್ಲೇ ಅನ್ನ ನೀರು ಬಿಟ್ಟು ಸತ್ಯಗ್ರಹ ಮಾಡಿದೆ. ಆಗ ಮೇಯರ್ ಆಗಿದ್ದ ವಿ.ಎಸ್. ಕೃಷ್ಣಅಯ್ಯರ್‌ರವರು ಒಂದು ಜಾಗ ಕೊಡಿಸಿದರು. ಮಕ್ಕಳ ಪುನರ್ ಅಭಿವೃದ್ಧಿಯನ್ನು ಗಮನಿಸಿ ಪೂರ್ತಿ ಜಾಗವನ್ನು (೨೪೦x೪೦೦) ಪಡೆದುಕೊಂಡೆನು. ೧೨½ ಸಾವಿರ ರೂ. ಖರ್ಚಿನಲ್ಲಿ ಕಾಪೌಂಡ್ ಸಹ ಆಯಿತು. ಆದರೆ ಪರೀಕ್ಷೆ ಫಲಿತಾಂಶಗಳು ದಿನೇದಿನೇ ಕಡಿಮೆಯಾಗುತ್ರಾ ಬಂದಿತು. ಇದಕ್ಕೆ ಉಪಾಯ ಕಾಣದೆ ಕೊನೆಗೆ ಒಂದು ರೆಸಿಡೆಸ್ಸಯಲ್ ಹೈಸ್ಕೂಲ್ ಸ್ಥಾಪಿಸಬೇಕೆಂದು ಆಲೋಚಿಸಿದೆ ಇದಕ್ಕೆ ಇಪ್ಪತ್ತು ಸಾವಿರ ರೂ. ಮೊತ್ತದಲ್ಲಿ ಒಂದು ಹಾಲ್‌ನ್ನು ಕಟ್ಟಲಾಯಿತು. ಈ ವರ್ಷ ಶ್ರೀಮಾನ್ ಆರ್. ರಾಚಯ್ಯನವರ ಉತ್ತೇಜನ ಮತ್ತು ಆಶೀರ್ವಾದದಿಂದ ರೆಸಿಡೆನ್ಸಿಯಲ್ ಹೈಸ್ಕೂಲನ್ನು ಪ್ರಾರಂಭ ಮಾಡಲಾಯಿತು. ಇದಕ್ಕೆ ಎಲ್ಲರ ಸಹಾಯದಿಂದ ಮತ್ತು ಆಶೀರ್ವಾದದಿಂದ ಸ್ವಂತ ಕಟ್ಟಡವನ್ನು ಮಾಡಬೇಕೆಂದು ಆಲೋಚಿಸಿ ಇದಕ್ಕೆ ಸೆಕ್ರೆಟರಿಯಾಗಿಯೂ ಸೇವೆಸಲ್ಲಿಸುತ್ತಾ ಇದ್ದೇನೆ. ಇಷ್ಟಾದರೂ ಕೂಡ ನಾನು ಈ ಪವಿತ್ರವಾದ ಕೆಲಸವನ್ನು ನಿರ್ವಹಿಸುತ್ತಿದ್ದೇನೆ. ನಾನು ಮೂವತ್ತೈದು ವರ್ಷಗಳಿಂದಲೂ ಸತತವಾಗಿ ಸೇವೆಸಲ್ಲಿಸುತ್ತಾ ಇದ್ದೇನೆ.

ಡಿ. ವೆಂಕಟಯ್ಯನವರು ೧೯೭೧ರಲ್ಲಿ ಆರ್. ಗೋಪಾಲಸ್ವಾಮಿ ಅಯ್ಯಾರ್‌ರವರ ಹೆಸರಿನಲ್ಲಿ ವಸತಿ ಶಾಲೆಯನ್ನು ಸ್ಥಾಪಿಸಿ ಮುಂದುವರೆಸಿಕೊಂಡು ಬಂದಿದ್ದಾರೆ. ಈ ಶಾಲೆಯನ್ನ ಸ್ಥಾಪಿಸಿದಾಗ ಕೇವಲ ಅರವತ್ತು ಮಕ್ಕಳಿಕ್ಕರು. ತದನಂತರದಲ್ಲಿ ಹಂತಹಂತವಾಗಿ ಬೆಳೆದು ಇಂದು ವಿದ್ಯಾರ್ಥಿ ನಿಲಯದಲ್ಲಿ ಒಂದು ನೂರ ಇಪ್ಪತ್ತೈದು ಮಕ್ಕಳಿದ್ದಾರೆ. ಶಾಲೆಯಲ್ಲಿ ಮುಖ್ಯ ಶಿಕ್ಷಕರು ಸೇರಿದಂತೆ ಒಟ್ಟು ಹದಿನೆಳು ಶಿಕ್ಷಕರಿದ್ದು ಏಳು ಜನ ಬೋಧಕ ಸಿಬ್ಬಂದಿ. ವರ್ಗದವರಿದ್ದಾರೆ. ಸರ್ಕಾರದ ಅನುದಾನಕ್ಕೊಳಪಟ್ಟಿರುವ

ಈ ಸಂಸ್ಥೆಯು ಒಂದು ಮಾದರಿ ಸಂಸ್ಥೆಯಾಗಿ ಹೊರಹೊಮ್ಮಿದೆ. ಒಟ್ಟಾರೆ ಇದೆಲ್ಲದರ ಪರಿಶ್ರಮದ ಫಲ ಶ್ರೀಯುತ ಡಿ. ವೆಂಕಟಯ್ಯನವರಿಗೆ ಸಲ್ಲುತ್ತದೆ. ಡಿ. ವೆಂಕಟಯ್ಯನವರು ಮರಣಹೊಂದಿದ ನಂತರ ಅವರ ಮಗನಾದ ಧ್ವಾರಕನಾಥ್ (ಕಾರ್ಯದರ್ಶಿಗಳು)ರವರು ಈ ಸಂಸ್ಥೆಯನ್ನು ಮುನ್ನಡೆಸಿ ಕೊಂಡು ಬಂದಿದ್ದಾರೆ. ಈ ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರುಗಳಾಗಿ ಡಾ. ಸುಭಾಷ್‌ಭರಣಿ, ಡಾ. ಚಂದ್ರಮ್ಮ, ಡಾ. ಸಿದ್ಧಲಿಂಗಯ್ಯ, ಬಿ. ನಿಂಗಯ್ಯ, ಡಾ. ವಿ. ಚಂದ್ರಶೇಖರ್ ಕಾರ್ಯನಿರ್ವಹಿಸಿತ್ತಿದ್ದಾರೆ. ಬಿ. ಬಸವಲಿಂಗಪ್ಪನವರು ಸವರ್ಣೀಯರಾದರೂ ಕೂಡ ದಲಿತಪರ ಚಿಂತನೆಯ ಜೊತೆಗೆ ಅಪಾರ ಕಾಳಜಿಯುಳ್ಳವರಾಗಿದ್ದರಿಂದ ತಮ್ಮ ಅಧಿಕಾರ ಅವಧಿಯಲ್ಲಿ ಈ ಸಂಸ್ಥೆಗೆ ಡೆಸ್ಕ್ ಟೆಬಲ್ ಕುರ್ಚಿ ಮೊದಲಾದ ಶಾಲಾ ಸಲಕರಣೆಗಳನ್ನು ಕೊಡಿಸಿದರಲ್ಲದೇ ಕಟ್ಟಡ ನಿರ್ಮಾಣಕ್ಕೆ ಸಹಾಯ ಮಾಡಿದರು ಎಂದು ಕಾರ್ಯದರ್ಶಿಗಳಾದ ಧ್ವಾರಕನಾಥ್‌ರವರು ತಿಳಿಸಿದ್ದಾರೆ. ಹಾಗೂ ದಲಿತ ಕವಿ ಡಾ. ಸಿದ್ಧಲಿಂಗಯ್ಯನವರು ಮಾರ್ಗದರ್ಶನದಲ್ಲಿ ಇಂದಿಗೂ ಮುನ್ನಡೆಯುತ್ತಿದೆ.

ಅಯ್ಯರ್‌ರವರು ಮಕ್ಕಳಲ್ಲಿ ನಾಯಕತ್ವದ ಗುಣ ಬೆಳೆಸಿಕೊಳ್ಳಲು ಭಯ ಹಿಂಜರಿಕೆಯನ್ನು ಹೋಗಲಾಡಿಸಲು ಕ್ರೀಡಾ ಮನೋಭಾವನೆಯನ್ನು ಬೆಳೆಸಲು ವಾಲಿಬಾಲ್ ಸ್ಕೌಟ್ ಬಾಲ್ ಬ್ಯಾಡ್ಮಿಟನ್ ಕಬ್ಬಡ್ಡಿ ಮೊದಲಾದ ಕ್ರೀಡೆಗಳನ್ನು ನಡೆಸುತ್ತಿದ್ದರು. ಇದೆ ಮಾದರಿಯಲ್ಲಿ ಈ ಸಂಸ್ಥೆಯು ಇಂದಿಗೂ ಮುನ್ನೆಡೆಸಿ ಕೊಂಡು ಬಂದಿದೆ. ಅಯ್ಯರ್‌ರವರ ಹೆಸರಿನಲ್ಲಿ ಪ್ರತಿವರ್ಷ ಜುಲೈ ಎರಡರಂದು ಸಮಾರಂಭವನ್ನೇರ್ಪಡಿಸಿ ಆವೇಳೆಯಲ್ಲಿ ಅಯ್ಯರ್‌ರವರ ಬಗ್ಗೆ ತಿಳಿದ ವ್ಯಕ್ತಿಗಳನ್ನು ಕರೆತಂದು ಉಪನ್ಯಾಸ ಕಾರ್ಯಕ್ರಮ ನಡೆಸಿ ಆ ಮೂಲಕ ಅಯ್ಯರ್‌ರವರು ದಲಿತ ಸಮುದಾಯಕ್ಕೆ ಮಾಡಿದ ಸೇವೆಯನ್ನು ತಿಳಿಸಿಕೊಡಲಾಗುತ್ತಿದೆ.

ಒಟ್ಟಾರೆ ಈ ಸಂಸ್ಥೆಯು ಪ್ರಾರಂಭದಲ್ಲಿ ಏನೆಲ್ಲಾ ಅಡ್ಡಿಆತಂಕಗಳು ಬಂದರು ಅವನ್ನು ಲೆಕ್ಕಿಸದೆ ಸಂಕಷ್ಟದಲ್ಲಿಯೂ ಮುನ್ನೆಡೆದು ಇಂದು ಒಂದು ಮಾದರಿ ವಸತಿಶಾಲೆಯಾಗಿ ಹೊರಹೊಮ್ಮಿದೆ. ದಲಿತ ಸಮುದಾಯದ ಮಕ್ಕಳಿಗೆ ಶಿಕ್ಷಣ ನೀಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆತರುವ ಪ್ರಯತ್ನ ಮಾಡಿದೆ ಮತ್ತು ಮಾಡುತ್ತಿದೆ.

ಹೀಗೆ ಅಯ್ಯರ್‌ರವರು ಸಮುದಾಯವನ್ನು ಮುಖ್ಯವಾಹಿನಿಗೆ ತರುವುದಕೋಸ್ಕರ ಪಂಚಮ ಶಾಲೆ, ಪಂಚಮ ವಸತಿಶಾಲೆ ನರಸಿಂಹರಾಜ ವಿದ್ಯಾರ್ಥಿನಿಲಯ ಆದಿಕರ್ನಾಟಕ ವಸತಿಶಾಲೆ ಆದಿಜಾಂಬವ ಶಾಲೆ ಮತ್ತು ವಿದ್ಯಾರ್ಥಿನಿಲಯಗಳನ್ನು ತೆರೆದು ಪಂಚಮರಿಗೆ ಶಿಕ್ಷಣ ನೀಡಿದರು. ಇವರ ಪ್ರಯತ್ನದ ಫಲವೇ ಇಂದು ಹಳೆ ಮೈಸೂರು ಪ್ರಾಂತ್ಯದ'ಲ್ಲಿ ಒಂದು ಹೊಸ ಬಗೆಯ ರಾಜಕೀಯ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತ್ಯಾಂತರಗಳಿಗೆ ಕಾರಣವಾಗಿದೆ. ಅಯ್ಯರ್‌ರವರು ನಾಲ್ವಡಿಯವರ ಸರ್ಕಾರದಲ್ಲಿ ರೂಪಿಸಿದ ಯೋಜನೆಗಳು ಪಂಚಮರ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಇಂದು ದಲಿತ ಸಮುದಾಯದ ವಿದ್ಯಾರ್ಥಿಗಳು ಕೂಡ ಶೈಕ್ಷಣಿಕವಾಗಿ ಮುಂದೆ ಬಂದು ಶೇಕಡ ೯೦ರಷ್ಟು ಹೆಚ್ಚು ಅಂಕಗಳನ್ನು ಪಡೆದು ದೇಶದ ಅತ್ಯುನ್ನತ ಹುದ್ದೆಗಳನ್ನಲಂಕರಿಸಲು ಸಹಾಯಕವಾಗಿದೆ. ಅಯ್ಯರ್‌ರವರ ಪ್ರಭಾವಕ್ಕೊಳಗಾಗಿ ಶಿಕ್ಷಣಪಡೆದ ಇತರ ವ್ಯಕ್ತಿಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

| ಕ್ರ.ಸಂ. | ಹೆಸರು | ಅಲಂಕರಿಸಿದ ಹುದ್ದೆ/ಪಡೆದ ಶಿಕ್ಷಣ |
|---|---|---|
| ೧. | ವೈ.ಸಿ. ಹೊಂಬಾಳಯ್ಯ | ದಲಿತ ಜನಾಂಗದಲ್ಲೇ ಕಾನೂನು ಪದವಿ ಪಡೆದ ಮೊದಲಿಗರು. ರೆವಿನ್ಯೂ ಟ್ರಿಬ್ಯೂನಲ್ ಆಗಿ ನಿವೃತ್ತಿರಾದವರು. |
| ೨. | ಆದಿನಾರಾಯಣ | ದಲಿತ ಜನಾಂಗದ ಮೊದಲ ಪೋಲೀಸ್ ಇನ್ಸ್‌ಪೆಕ್ಟರ್. |
| ೩. | ರಾಮಸಿಂಗಯ್ಯ (ಸೋಮನಹಳ್ಳಿ) | ಇಂಜಿನಿಯರ್ ಆಗಿ ನಿವೃತ್ತರಾದವರು. |
| ೪. | ಎಂ. ಗಂಗಾಧರಯ್ಯ (ತುಮಕೂರು) | ತುಮಕುರು ಸಿದ್ದಾರ್ಥ ಶಿಕ್ಷಣಸಂಸ್ಥೆಗಳ ಸ್ಥಾಪಕರು. |
| ೫. | ಕೆ.ಎಸ್. ಬೋರಯ್ಯ (ಮೈಸೂರು) | ಮೈಸೂರು ವಿಭಾಗದ ರೈಲ್ವೆ ಅಧಿಕಾರಿಗಿದ್ದವರು ಮತ್ತು ಮೈಸೂರು ವಿಭಾಗದ ಕಮ್ಯುನಿಸಂನ ಕಾರ್ಯದರ್ಶಿಯಾಗಿದ್ದವರು. |
| ೬. | ಆರ್. ಭರಣಯ್ಯ (ಕಾಡುಕೊತ್ತನಹಳ್ಳಿ) | ದಲಿತ ಜನಾಂಗದ ಮೊದಲ ಐ.ಪಿ.ಎಸ್. ಅಧಿಕಾರಿ. |
| ೭. | ವೀರಭದ್ರಯ್ಯ | ಇಂಜಿನಿಯರ್ ಆಗಿದ್ದರು. |
| ೮. | ಎಂ. ಸುಬ್ರಹ್ಮಣ್ಯಂ | ಚಿನ್ನದ ಗಣಿಯ ನಿರ್ದೇಶಕರಾಗಿದ್ದವರು. |
| ೯ | ಬಿ. ಬೊಮ್ಮಯ್ಯ | ಸಹಾಯಕ ಆಯುಕ್ತರಾಗಿದ್ದವರು. |
| ೧೦ | ಕೆ. ಭೀಮಯ್ಯ | ಕ್ವಿಟ್‌ಇಂಡಿಯ ಚಳುವಳಿಯಲ್ಲಿ ಪಾಲ್ಗೊಂಡವರು. |
| ೧೧ | ಆರ್. ಬಿಳಿಗಿರಿರಂಗಯ್ಯ | ರಾಜ್ಯದ ಪ್ರಸಿದ್ಧ ಅಡ್ವಕೇಟ್‌ರಾಗಿದ್ದವರು. |
| ೧೨ | ಎಲ್. ಸಿಂಗಯ್ಯ | ಉಪ ಆಯುಕ್ತರಾಗಿದ್ದವರು. |
| ೧೩ | ಹೆಚ್. ಮಾದಯ್ಯ (ಮೈಸೂರು) | ಉತ್ತಮ ಪೋಲೀಸ್ ಅಧಿಕಾರಿಯಾಗಿ ರಾಷ್ಟ್ರಪತಿ ಪದಕ ಪಡೆದವರು. |
| ೧೪ | ಬಿ. ಬಸವಲಿಂಗಪ್ಪ | ಬೂಸಾ ಚಳುವಳಿಯ ನಾಯಕರು. |
| ೧೫ | ಎ.ಪಿ. ರಾಘವನ್ | ಪಿಗ್ಗರಿ(ಹಂದಿ ಸಾಕಣಿಕೆ)ಯ ಮೇಲ್ದರ್ಜೆಯ ಅಧಿಕಾರಿಯಾಗಿದ್ದವರು. |
| ೧೬ | ಟಿ. ಮಾಣಿಕ್ಯಂ | ಪ್ರಸಿದ್ಧ ಕವಿ ಮೂಗು ಗಂಟಲು ವೈದ್ಯರು ಮತ್ತು ಬಿ.ಸಿ.ರಾಯ್ ಪದಕ ಪಡೆದವರು. |
| ೧೭ | ಚಲುವಯ್ಯ | ಪ್ರಜಾಪ್ರತಿನಿಧಿ ಸಭೆಯ ಸದಸ್ಯರು. |
| ೧೮ | ಟಿ. ಚನಯ್ಯ | ಮಂತ್ರಿಯಾಗಿದ್ದವರು. |

೧೯ ಮಲ್ಲಿಕಾರ್ಜುನಸ್ವಾಮಿ — ಮಂತ್ರಿಯಾಗಿದ್ದವರು.

೨೦ ಬಿ. ನಂಜಪ್ಪ.

೨೧ ಬಿ. ಪುಟ್ಟರಂಗಪ್ಪ

೨೨ ಚಿಕ್ಕಹನುಮಂತಯ್ಯ (ಕೊರಟಗೆರೆ)

೨೩ ಕೆ. ಕಾಳಯ್ಯ — ರೈಲ್ವೆ ಅಧಿಕಾರಿಯಾಗಿದ್ದವರು.

೨೪ ಕೆ.ಟಿ. ರಾಮಸ್ವಾಮಿ.

೨೫ ಚನ್ನಿಗರಾಮಯ್ಯ — ಮಾಜಿ ಸಚಿವರು

೨೬ ಡಿ. ನಂಜುಂಡಪ್ಪ

೨೭ ಹೆಚ್. ಹನುಮಂತಯ್ಯ

೨೮ ಜೆ. ಲಿಂಗಯ್ಯ

೨೯ ಪಿ.ಜಿ.ಡಿ. ಸೌಜ

೩೦ ಜಿ. ಯಾಲಕ್ಕಯ್ಯ (ಹೆಮ್ಮನಹಳ್ಳಿ)

೩೧ ಮರಿದಂಡಯ್ಯ

೩೨ ಮುರುಗೇಶನ್‌ಪಿಳ್ಳೆ — ಪ್ರಜಾಪ್ರತಿನಿಧಿ ಸಭೆಯ ಸದಸ್ಯರು

೩೨ ರಾಮಕೃಷ್ಣಯ್ಯ

೩೩ ಶಿವಲಿಂಗಯ್ಯ

---

ಇನ್ನು ಅನೇಕರು ಮಂದಿ ಅಯ್ಯರ್‌ರವರ ಪ್ರಭಾವದಿಂದ ಮತ್ತು ಅವರ ಬಲವಂಥದಿಂದ ಶಿಕ್ಷಣ ಪಡೆದ ಸಾವಿರಾರು ಶಿಷ್ಯರು ಸಮಾಜದಲ್ಲಿ ಮುಖ್ಯವಾಹಿನಿಗಿ ಬಂದು ಎಲ್ಲರಂತೆ ಸಮಾನವಾಗಿ ಬದುಕುವ ಜೀವನ ರೂಪಿಸಿಕೊಂಡರು. ಶಿಕ್ಷಣ ಪಡೆದ ಶಿಷ್ಯರು ತಮ್ಮ ಜನಾಂಗದ ಅಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರುಗಳಲ್ಲಿ ಎಷ್ಟು ಜನಾಂಗದ ಸೇವೆಯಲ್ಲಿ ಸಫಲರಾದರು ಎಂಬುದು ಚರ್ಚೆಯ ವಿಷಯಕ್ಕೆ ಬಿಟ್ಟದ್ದು.

'ಶಿಕ್ಷಣವೇ ನಮ್ಮೆಲ್ಲರ ಮೂಲ ಮಂತ್ರವಾಗಬೇಕು' ಎಂದು ಎಚ್ಚರಿಸಿದ ನಮ್ಮ ದಾರ್ಶನಿಕ ಗುರು ವಿಶ್ವರತ್ನ ಡಾ. ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಎಚ್ಚರದ ನುಡಿಯೇ ನಮ್ಮ ಬದುಕಿನ ದಾರಿದೀಪವೆಂದು ತಿಳಿದು ಬದುಕುವ ನಾವು ಅವರೆಲ್ಲರನ್ನು ಸ್ಮರಿಸುವುದು ಅವರಂತೆ ನಡೆದು ಸಾಧಿಸಿ ತೋರಿಸುವುದು ನಮ್ಮ ಸಮುದಾಯದ ಏಳಿಗೆಯಿಂದ ದೇಶದ ಏಳಿಗೆಯನ್ನು ಬಯಸುತ್ತಾ ಜಾತಿ ಆರೋಗ್ಯಕ್ಕೆ ಮುಂದಾಗುವುದು ನಮ್ಮ ನಿಮ್ಮೆಲ್ಲರ ಆದ್ಯಕರ್ತವ್ಯವೂ ಹೌದು.

ಈ ಎಲ್ಲಾ ಹಿನ್ನಲೆಯಲ್ಲಿ ಮಹಾನ್ ಮಾನವತಾವಾದಿ ಅಯ್ಯರ್‌ರವರ ಜೀವನ,ಸಾಧನೆ ಮತ್ತು

ಅವರು ಪಂಚಮರಿಗಾಗಿ ಮಾಡಿದ ಸೇವೆ ಕಾರ್ಯಗಳನ್ನು ಕರತಲಾಮಲಕ ಮಾಡಿಕೊಳ್ಳುವ ಅನಿವಾರ್ಯತೆ ಇಂದಿನ ಯುವ ಪೀಳಿಗೆಗೆ ಇದೆ. ಆದ್ದರಿಂದ ಇಂತಹ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಓದುವುದರಿಂದ ನಮ್ಮ ಬೌದ್ಧಿಕ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ನಾವು ಕೂಡ ಸಮಾಜದ ಶಕ್ತಿಯುತ ಬೇರುಗಳಾಗಿ ಬೆಳೆದು ಹೊಚ್ಚ ಹೊಸ ಹಸಿರು ವಿಚಾರಗಳನ್ನು ಸಮುದಾಯಕ್ಕೆ ಬಿತ್ತುವ ಹೆಮ್ಮರಗಳಾಗಬಹುದು.

# ಅಧ್ಯಯನದಿಂದ ಕಂಡುಕೊಂಡ ಫಲಿತಗಳು

ಪ್ರಸ್ತುತ ಅಧ್ಯಯನವು ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ ಬಗ್ಗೆ ಕುರಿತದ್ದಾಗಿದೆ. ಅಂದರೆ ಅಯ್ಯರ್‌ವರ ಜೀವನ ಬದುಕು ಅವರ ದಲಿತೋದ್ಧಾರ ಕಾರ್ಯಗಳು ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಸರ್ಕಾರದ ಅವಧಿಯಲ್ಲಿ ಅಯ್ಯರ್‌ರವರ ಕಾರ್ಯಗಳು ಶೈಕ್ಷಣಿಕ ಸಾಮಾಜಿಕ ಸಾಂಸ್ಕೃತಿಕ ಚಿಂತನೆಗಳನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಬ್ರಾಹ್ಮಣ ಕುಲದ ಶ್ರೀಮಂತ ಕುಟುಂಬದಲ್ಲಿ ಜನಿಸಿದ ಅವರು ಸ್ವತಂತ್ರ ಪೂರ್ವದಲ್ಲಿಯೇ ಮೈಸೂರು ಸಂಸ್ಥಾನದಲ್ಲಿ ದಲಿತರ ಸರ್ವಾಂಗೀಣ ಏಳಿಗೆಗಾಗಿ ಅದರಲ್ಲಿಯೂ ಶೈಕ್ಷಣಿಕವಾಗಿ ಅವರು ಕೈಗೊಂಡ ಕಾರ್ಯಗಳು ಮತ್ತು ತೆಗೆದುಕೊಂಡ ನಿರ್ಧಾರಗಳು ದಲಿತ ಜನಾಂಗದಲ್ಲಿ ಒಂದು ಹೊಸ ಚೈತನ್ಯವನ್ನು ಮೂಡಿಸಿದವು. ಭಾರತೀಯ ಸಮಾಜದಲ್ಲಿ ಎಲ್ಲಿಯೂ ಸಲ್ಲದೆ ಸಮಾಜದಿಂದ ದೂರ ಉಳಿದು ಜಡ್ಡುಗಟ್ಟಿದ ದಲಿತ ಸಮುದಾಯವನ್ನು ಮೈಸೂರು ಸಂಸ್ಥಾನದ ಮಟ್ಟಿಗೆ ಚಲನಶೀಲವಾಗಿಸಿ ಸಮಾಜದ ಮುಖ್ಯವಾಹಿನಿಗೆ ತಂದ ಕೀರ್ತಿ ಶ್ರೀಯುತ ಗೋಪಾಲಸ್ವಾಮಿ ಅಯ್ಯರ್‌ರವರಿಗೆ ಸಲ್ಲುತ್ತದೆ.

ಇಂದು ದಲಿತರು ಮತ್ತು ದಲಿತೇತರ ಜನಾಂಗದವರು ಹಾಗೂ ಸಾರ್ವಜನಿಕ ಜೀವನದಲ್ಲಿರುವವರಿಗೆ ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಬದುಕು ಮತ್ತು ಸಾಧನೆಯ ಅರಿವು ಅವಶ್ಯವಾಗಿ ತಿಳಿಯಬೇಕಾಗಿದೆ. ವರ್ತಮಾನದ ಹೋರಾಟ ಅರ್ಥಪೂರ್ಣವಾಗಿ ಸಾಗಬೇಕಾದರೆ ಸ್ವತಂತ್ರಪೂರ್ವದಲ್ಲೆ ಮೂರು ದಶಕಗಳ ಕಾಲ ಪಂಚಮರಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ದುಡಿದು ಮಡಿದಿರುವ ಅಯ್ಯರ್‌ರವರಂತಹ ಮಹಾನ್ ಚೇತನಗಳ ಸ್ಮರಣೆ ಅರ್ಥಪೂರ್ಣವಾಗುತ್ತದೆ. ಶ್ರೀಯುತರು ಮಾನವ ಸಮಾಜಕ್ಕೆ ಮಾದರಿಯಾಗಿ ರೂಪುಗೊಂಡ ರೀತಿ ನೀತಿ ಅವರಲ್ಲಿದ್ದ ಮಾನವ ಪ್ರೀತಿ ಸಮಾಜ ಸೇವಾ ತುಡಿತ ಪಂಚಮರ ಬಗ್ಗೆ ಇದ್ದ ಸಮತೆ ಮಮತೆ ಪಂಚಮರ ಅಕ್ಷರದ ಬಗ್ಗೆ ಅವರಿಗಿದ್ದ ಅನನ್ಯ ಕಾಳಜಿ ನಮ್ಮಂತಹ ಗ್ರಾಮೀಣ ಮೂಲದಿಂದ ಬಂದವರನ್ನು ಆತ್ಮಾವಲೋಕನಕ್ಕೆ ಹಚ್ಚುತ್ತದೆ. ಅಯ್ಯರ್‌ರವರ ಪ್ರಭಾವಕ್ಕೊಳಗಾಗಿ ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಅವರ ಅಂದಿನ ಮಾನವಂತ ಸಮಾಜ ಸೇವಾದ ಬಗ್ಗೆ ಅಭಿಮಾನ ಮತ್ತಷ್ಟು ಹೆಚ್ಚಿಸಿಕೊಳ್ಳಲು

ಸಾಧ್ಯವಾಯಿತು. ಅಂದು ಅವರು ಪ್ರಾಜಾಪ್ರತಿನಿಧಿ ಸಭೆಯಲ್ಲಿ ಮಂಡಿಸಿರುವ ದಲಿತರ ಪರ ಮುಂದಾಲೋಚನೆಯ ಮಾನವಂತ ಚಿಂತನೆಗಳು ಇಂದು ತನ್ನ ಮೂಲ ಮೌಲ್ಯವನ್ನು ಕಳೆದುಕೊಂಡು ಶುಷ್ಕಗೊಳ್ಳುತ್ತಿರುವ ಸಂದರ್ಭದಲ್ಲಿ ಮತ್ತೆ ಸೇವಾ ಜೀವನ ಹೊಸ ಅಯಾಮ ಪಡೆಯಬೇಕಾಗಿದೆ. ಜನಸೇವಾ ಮನೋಭಾವ ನಿಚ್ಚಳವಾದ ರಾಜಕೀಯ ಸಾಮಾಜಿಕ ಶೈಕ್ಷಣಿಕ ದೂರದೃಷ್ಟಿ ಪ್ರತಿಗಾಮಿ ಚಿಂತನೆಗಳು ಇದ್ದಾಗ ಮಾತ್ರ ಒಬ್ಬ ಜನ ಪ್ರತಿನಿಧಿ ತನ್ನ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಬಹುದೆಂಬುದಕ್ಕೆ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ನಿದರ್ಶನವಾಗಿ ನಿಲ್ಲುತ್ತಾರೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಅಯ್ಯರ್‌ರವರ ಪಂಚಮರ ಸೇವಾ ಭಾವನೆಯನ್ನು ತಿಳಿಸಿಕೊಡುವ ಪ್ರಯತ್ನ ಮಾಡಲಾಗಿದೆ.

➲ ಪ್ರಸ್ತುತ ಸಂದರ್ಭದಲ್ಲಿ ದಲಿತ ಚಿಂತಕರು ಹಾಗೂ ದಲಿತಪರ ಹೋರಾಟಗಳು ಹೇಳುವ ಹಾಗೆ ಪುರೋಹಿತಶಾಹಿ ವರ್ಗ ಮಾತ್ರವೇ ದಲಿತರ ದುಸ್ಥಿತಿಗೆ ಕಾರಣರೆಂದು ಹೇಳುವ ಇಂದಿನ ದಿನಗಳಲ್ಲಿ ಇದು ತಪ್ಪಾಗಿ ಕಾಣುತ್ತದೆ. ಏಕೆಂದರೆ ಚರಿತ್ರೆಯ ಉದ್ದಕ್ಕೂ ಪುರೋಹಿತಶಾಹಿ ವರ್ಗದವರಾದ ವರದರಾಜ್ ಅಯ್ಯರ್ ವಿ.ಎಸ್. ನರಸಿಂಹ ಅಯ್ಯಂಗಾರ, ಕುದ್ಮುಲ್ ರಂಗರಾಯ ಗೋವಿಂದ ಚಾರ್ಯಸ್ವಾಮಿ ವೆಂಕಟ ಕೃಷ್ಣಯ್ಯ ಆರ್. ಗೋಪಾಲಸ್ವಾಮಿ ಅಯ್ಯರ್‌ರಂತಹ ಇನ್ನೂ ಅನೇಕ ಮಂದಿ ಮತ್ತು ಅಪರೂಪಕ್ಕೆ ಒಬ್ಬರಂತೆ ಬ್ರಾಹ್ಮಣೇತರರಾದ ತಲಕಾಡಿನ ಆರ್. ರಂಗೇಗೌಡರಂತಹ ವ್ಯಕ್ತಿಗಳು ದಲಿತರ ಸಾಮಾಜಿಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗೆ ಮಾರ್ಗದರ್ಶನ ನೀಡಿದವರು ಪುರೋಹಿತಶಾಹಿಗಳೇ ಹೊರತು ಇಂದಿಗೂ ದೌರ್ಜನ್ಯ ಬಹಿಷ್ಕಾರ ಇನ್ನಿತರೆ ಅವಮಾನವೀಯ ಘಟನೆಗಳಿಗೆ ಗುರಿ ಮಾಡುತ್ತಿರುವ ಬಂಡವಾಳಶಾಹಿ ಊಳಿಗಮಾನ್ಯಶಾಹಿಗಳು ಹಾಗೂ ಬ್ರಾಹ್ಮಣೇತರ ಕೋಮಿವರಲ್ಲ ಎಂಬುದನ್ನು ಗಮನಿಸಲಾಗಿದೆ.

➲ ಮೈಸೂರು ಸಂಸ್ಥಾನದ ಅಸ್ಪೃಶ್ಯರಲ್ಲಿ ಒಬ್ಬ ೧೯೨೧ರಲ್ಲಿಯೇ ಅಂದರೆ ಸ್ವತಂತ್ರ ಪೂರ್ವದಲ್ಲೇ ಬಿ.ಎ. ಪದವಿ ಪಡೆಯುವ ಮೂಲಕ ಸಮಾಜದ ಮುಖ್ಯವಾಹಿನಿಗೆ ಪಾದಾರ್ಪಣೆ ಮಾಡಿರುವುದನ್ನು ಗಮನಿಸಿದರೆ ಈ ಎಂಭತ್ತು ವರ್ಷಗಳಲ್ಲಿ ಮೈಸೂರು ಸಂಸ್ಥಾನದ ದಲಿತರ ಶಿಕ್ಷಣ ಉಳಿದ ನೆರೆಯ ಸಂಸ್ಥಾನಗಳಿಗೆ ಹೋಲಿಸಿಕೊಂಡರೆ ದುಪ್ಪಟ್ಟವಾಗಿಯೇ ಹೆಚ್ಚಾಗಿರುವುದನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ.

➲ ಮೈಸೂರು ಸಂಸ್ಥಾನದಲ್ಲಿ ಅಸ್ಪೃಶ್ಯರ ವಿದೇಶಿ ಮತ ಸ್ವೀಕಾರಕ್ಕೆ ನಾಲ್ವಡಿ ಕೃಷ್ಣರಾಜ ಒಡೆಯರ್ ಜಾರಿಗೆ ತಂದ ಅಸ್ಪೃಶ್ಯರ ಪ್ರತ್ಯೇಕ ಶಿಕ್ಷಣ ವ್ಯವಸ್ಥೆ ಕಡಿವಾಣ ಹಾಕಿತು ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಏಕೆಂದರೆ ಮೈಸೂರು ಸಂಸ್ಥಾನವು ಪ್ರಾರಂಭಿಸಿದ ಪಂಚಮ್ಮ ಶಾಲೆಗಳು ಸ್ಥಾಪನೆಗೊಂಡಿದ್ದು ಅಗಾಗಲೇ ದಲಿತ ಶಿಕ್ಷಣಕ್ಕೆ ಒತ್ತು ನೀಡಲು ಸ್ಥಾಪನೆಗೊಂಡಿದ್ದ ಕ್ರೈಸ್ತ ಮಿಷನರಿಗಳ ಆಸುಪಾಸಿನಲ್ಲಿಯೇ ಎಂಬುದನ್ನು ದೃಢಪಡಿಸುತ್ತದೆ. ಇದಕ್ಕೆ ಅಸ್ಪೃಶ್ಯ ಜನಾಂಗವೂ ಸಹ ಸ್ಪಂದಿಸಿ ಸಂಸ್ಥಾನ ನೀಡಿದ ಸೌಲಭ್ಯಗಳನ್ನು ಪಡೆದು ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಿದರೆಂದು ಗಮನಿಸಲಾಗಿದೆ.

- ಮೈಸೂರು ಸಂಸ್ಥಾನದ ಅರಸರು ಸ್ವತಃ ಶೂದ್ರ ವರ್ಗಕ್ಕೆ ಸೇರಿದವರಾಗಿದ್ದರಿಂದ ಹಾಗೂ ಪಾಶ್ಚತ್ಯ ಚಿಂತನೆಧಾರೆಯ ಆಕರ್ಷಣೆಗೆ ಒಳಪಡುವುದುರ ಜೊತೆಗೆ ಇಂಗ್ಲಿಷ್ ಬರಹಗಳನ್ನು ಓದಿ ಪ್ರಪಂಚದ ಹಲವಾರು ಸಾಮಾಜಿಕ ಸಂದರ್ಭಗಳನ್ನು ಜ್ಞಾನರ್ಜನೆ ಮಾಡಿಕೊಂಡಿದ್ದರು. ಪರಿಣಾಮವಾಗಿ ಸಂಸ್ಥಾನದಲ್ಲಿ ಆ ಚಿಂತನೆಗಳನ್ನು ಅಳವಡಿಸಿಕೊಂಡು ಕೆಳವರ್ಗದ ಜನರ ಮತ್ತು ಶೋಷಕ ವರ್ಗದ ಜನರ ಏಳಿಗೆಗೆ ಪ್ರಮಾಣಿಕವಾಗಿ ಶ್ರಮಿಸಿದರು ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಹಾಗೂ ಇವರ ಎಲ್ಲಾ ಕೆಲಸ ಕಾರ್ಯಗಳಿಗೆ ಪೂರಕವಾಗಿ ಸಹಕರಿಸಿದ ದಿವಾನರುಗಳ ಕಾರ್ಯ ಚಟುವಟಿಕೆಗಳನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

- ೧೯೭೦ರ ದಶಕದಲ್ಲಿ ಕರ್ನಾಟಕದಲ್ಲಿ ಹುಟ್ಟಿಕೊಂಡ ದಲಿತಪರ ಚಿಂತನೆ ಕಾಳಜಿ ಭಾರತದ ಸಂವಿಧಾನಾತ್ಮಕ ಹಕ್ಕುಗಳನ್ನು ಪಡೆಯಲು ಹಾಗೂ ಕರ್ನಾಟಕದ ಬ್ರಾಹ್ಮಣೇತರ ದಬ್ಬಾಳಿಕೆ ಮತ್ತು ದೌರ್ಜನ್ಯಗಳ ವಿರುದ್ಧ ಬಸವಳದು ಹೋರಾಟದ ಹಾದಿ ಹಿಡಿಯಲು ಸ್ಥಾಪನೆಗೊಂಡ ಕರ್ನಾಟಕದ ದಲಿತ ಸಂಘರ್ಷ ಸಮಿತಿ(ಡಿ.ಎಸ್.ಎಸ್.)ಯು ಇದಕ್ಕೆ ಪೂರಕವಾಗಿ ಸೃಷ್ಟಿಗೊಂಡ ಬಂಡಾಯ ಸಾಹಿತ್ಯ ಇವೆಲ್ಲವು ಮೈಸೂರು ಸಂಸ್ಥಾನದ ಅರಸರು ದಲಿತರಿಗೆ ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲೇ ನೀಡಿದ ಶೈಕ್ಷಣಿಕ ಸೌಲಭ್ಯಗಳಿಂದಾಗಿ ಎಂಬುದನ್ನು ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

- ಗೋಪಾಲಸ್ವಾಮಿ ಅಯ್ಯರ್ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ದೃಢಸಂಕಲ್ಪಗಳಿಂದ ಹಾಗೂ ನಿಷ್ಠಾವಂತ ದಿವಾನರು ಮತ್ತು ಅಧಿಕಾರಿಗಳ ಪರಿಶ್ರಮದ ಫಲದಿಂದಾಗಿ ಅಸ್ಪೃಶ್ಯ ವರ್ಗ ಸಾಮಾಜಿಕ ಶೈಕ್ಷಣಿಕ ಹಾಗೂ ಬೌದ್ಧಿಕವಾಗಿ ಅರುಣೋದಯ ಪಡೆಯಿತು. ಇದರ ಫಲದಿಂದಾಗಿ ಉತ್ತರ ಕರ್ನಾಟಕದ ದಲಿತರಿಗೆ ಹೋಲಿಸಿದರೆ ಮೈಸೂರು ಸಂಸ್ಥಾನದ ದಲಿತರು ಸಾಮಾಜಿಕ ಶೈಕ್ಷಣಿಕ ಹಾಗೂ ಬೌದ್ಧಿಕವಾಗಿ ಐವತ್ತು ವರ್ಷಗಳಷ್ಟು ಹಿರಿಯ ಸಂಸ್ಥಾನದಲ್ಲಿರುವುದು ಅಧ್ಯಯನದಿಂದ ಕಂಡುಬಂದಿದೆ. ಮೈಸೂರಿನ ದಲಿತರು ೧೯೬೦ರ ದಶಕದಲ್ಲಿ ಸಾಧಿಸಿದ ಪ್ರಗತಿಯನ್ನು ಉತ್ತರ ಕರ್ನಾಟಕದ ದಲಿತರು ಇಂದು ಸಾಧಿಸುತ್ತಿದ್ದಾರೆ ಎಂಬುದನ್ನು ಈ ಕೆಳಗಿನ ಪಟ್ಟಿಯಿಂದ ಗಮನಿಸಬಹುದು.

**ಮೈಸೂರು ಸಂಸ್ಥಾನ**

| ಪದವಿ | ವರ್ಷಗಳು | | | | |
|---|---|---|---|---|---|
| | ೧೯೨೨ | ೧೯೩೩ | ೧೯೪೪ | ೧೯೫೫ | ೧೯೬೬ |
| ಬಿ.ಎ. | ೦೧ | ೧೬ | ೩೬ | ೨೦೧ | ೧೮೦೦ |
| ಬಿ.ಎಸ್ಸಿ | ೦೧ | ೦೨ | ೦೯ | ೧೦೬ | ೨೦೨ |

**ನಿಜಾಂ ಸಂಸ್ಥಾನ (ಹೈದ್ರಾಬಾದ್ ಸಂಸ್ಥಾನ)**

| ಪದವಿ | ವರ್ಷಗಳು | | | | |
|---|---|---|---|---|---|
| | ೧೯೨೨ | ೧೯೩೩ | ೧೯೪೪ | ೧೯೫೫ | ೧೯೬೬ |
| ಬಿ.ಎ. | ೦ | ೦ | ೦೩ | ೧೦೭ | ೨೦೬ |
| ಬಿ.ಎಸ್ಸಿ | ೦ | ೦ | ೦ | ೦೭ | ೨೮ |

ಒಟ್ಟಾರೆ ಅಯ್ಯರ್‌ರವರು ಮೈಸೂರು ಪ್ರಾಂತ್ಯದಲ್ಲಿ ಕೈಗೊಂಡ ದಲಿತಪರ ಶೈಕ್ಷಣಿಕ ಮತ್ತು ಸಾಮಾಜಿಕ ಕಾರ್ಯಗಳಿಂದಾಗಿ ದಲಿತರ ಮತ್ತು ಸ್ತ್ರೀಯರ ಪ್ರಗತಿಯು ತ್ವರಿತಗತಿಯಲ್ಲಿ ಮುನ್ನಡೆಯಿತ್ತೆನ್ನುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

➲ ಹಲವಾರು ಕಾರಣಗಳಿಂದ ಕಾಲಘಟ್ಟದಲ್ಲಿ ಮರೆಯಾಗಿರುವ ಸಮುದಾಯಗಳು ಧರ್ಮಗಳು ಬೆಳಕಿಗೆ ಬರುವ ಸಂದರ್ಭಗಳು ಬರುತ್ತವೆ. ಅವುಗಳ ಹಿನ್ನೋಟ ಕ್ರಮದಿಂದ ತಮ್ಮ ವರ್ತಮಾನದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುತ್ತವೆ. ತಾವು ಇದ್ದ ಸ್ತರದಿಂದ ಮೇಲೇಳಲು ಪ್ರಯತ್ನಿಸುತ್ತವೆ. ಈ ಪ್ರಕ್ರಿಯೆಯಲ್ಲಿ ಅನೇಕ ಹೋರಾಟಗಳು ಅಂದೋಲನಗಳು ಸಂಘಟನೆ ಸಂಘರ್ಷಗಳು ಜರುಗತ್ತವೆ. ಈ ಹಿನ್ನೆಲೆಯಲ್ಲಿ ಗೋಪಾಲಸ್ವಾಮಿ ಅಯ್ಯರ್‌ರವರ ಪಂಚಮ ಕಾರ್ಯಗಳು ಮತ್ತು ದಲಿತಪರ ಆಲೋಚನೆಗಳನ್ನು ಹಳೆ ಮೈಸೂರು ಪ್ರಾಂತ್ಯದ ಜನತೆ ಅಳವಡಿಸಿಕೊಂಡಿದ್ದರಿಂದ ಮೈಸೂರು ಸಂಸ್ಥಾನದ ದಲಿತರು ಇದೇ ತರಹದ ಪ್ರಯತ್ನಗಳ ಮೂಲಕ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಾಗಿದೆ. ವ್ಯಕ್ತಿಯೊಬ್ಬರು ಒಂದು ಜನಾಂಗದ ಪರಿಸರದ ಏಳು ಬೀಳಿಗೆ ಸೋಲು ಗೆಲವುಗಳಿಗೆ ಕಾರಣರಾಗುತ್ತಾರೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

➲ ಶಿಕ್ಷಣದ ಬಗೆಗಿನ ಶತಮಾನದ ದಾರಿದ್ರ್ಯವನ್ನು ನೀಗಿಸಿಕೊಂಡವರು ಡಾ. ಬಾಬಾಸಾಹೇಬ್ ಅಂಬೇಡ್ಕರ್‌ರವರು ಮಾತ್ರ. ಅಯ್ಯರ್‌ರವರು ಅಂಬೇಡ್ಕರ್‌ರವರಿಗಿಂತ ಪೂರ್ವದಲ್ಲಿ ದಲಿತರ ಶಿಕ್ಷಣದ ಬಗ್ಗೆ ಚಿಂತಿಸಿ ಕಾರ್ಯಪ್ರವೃತ್ತರಾದರೂ ನಂತರದ ದಿನಗಳಲ್ಲಿ ಅವರ ತತ್ವ ಸಿದ್ಧಾಂತಗಳನ್ನು ಪರೋಕ್ಷವಾಗಿ ಒಪ್ಪಿರಬಹುದಾದರೂ ದಲಿತರ ಏಳಿಗೆಗೆ ಶಿಕ್ಷಣವನ್ನು ಮೂಲ ಮಂತ್ರವಾಗಿ ಮಾಡಿಕೊಂಡರು. ಆದ್ದರಿಂದ ದಲಿತರು ಶಿಕ್ಷಿತರಾಗಿ ವಿಚಾರವಂತರಾಗಿ ಸವರ್ಣೀಯರ ಶೋಷಣೆ ದಬ್ಬಾಳಿಕೆಯ ವಿರುದ್ಧ ಹೊರಾಡಿ ಸಮಾನತ್ವೆಯನ್ನು ಪಡೆಯಬೇಕೆಂಬ ಆಶಯವನ್ನು ಹೊಂದಿದ್ದರು. ಆದ್ದರಿಂದಲೇ ಅಯ್ಯರ್‌ರವರು ಪಂಚಮ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕಾಗಿ ಸಂಸ್ಥಾನದಲ್ಲಿ ಅವಶ್ಯವಿರುವ ಕಡೆ ನಾಲ್ವಡಿ ಕೃಷ್ಣರಾಜ ಒಡೆಯರ ಅನುಮತಿ ಪಡೆದು ಪಂಚಮ ವಸತಿಶಾಲೆ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಶಿಷ್ಯವೇತನ ಗ್ರಂಥಾಲಯ ಮೊದಲಾದ ಸೌಲಭ್ಯಗಳನ್ನು ಒದಗಿಸಿಕೊಟ್ಟರು. ಆದರೆ ಅಯ್ಯರ್‌ರವರು ಸ್ಥಾಪಿಸಿದ ಪಂಚಮ ವಸತಿಶಾಲೆ ಮತ್ತು ವಿದ್ಯಾರ್ಥಿನಿಲಯಗಳು ಇಂದು ಕ್ರಮವಾಗಿ ಸರ್ಕಾರದ ಅನುದಾನಕ್ಕೆ ಮತ್ತು ಸಮಾಜ ಕಲ್ಯಾಣ ಇಲಾಖೆಯ ಅಧೀನಕ್ಕೊಳಪಟ್ಟು ಮುಂದುವರೆದುಕೊಂಡು ಬರುತ್ತಿರುವುದನ್ನು ಕಾಣಬಹುದು. ಒಟ್ಟಾರೆ ಅಯ್ಯರ್‌ರವರು ಅಂದು ಸ್ಥಾಪಿಸಿದ

ವಸತಿಶಾಲೆ ಮತ್ತು ವಿದ್ಯಾರ್ಥಿನಿಲಯಗಳಿಗೆ ಇಂದು ದಲಿತ ವಿದ್ಯಾರ್ಥಿಗಳು ವಿದ್ಯಾರ್ದಿನಿಲಯಗಳಲ್ಲಿ ಪಡೆಯುತ್ತಿರುವ ಶಿಕ್ಷಣಕ್ಕೆ ನಾಂದಿಯಾದವು ಎಂದು ಹೇಳಬಹುದಾಗಿದೆ.

ಸ್ವತಂತ್ರಪೂರ್ವದಲ್ಲಿ ಅಸ್ಪೃಶ್ಯರ ಸಾಮಾಜಿಕ ಸುಧಾರಣೆಗಾಗಿ ದುಡಿಯುವುದು ಹಾಗೂ ಸಾಮಾಜಿಕ ಬದಲಾವಣೆಯ ಪ್ರಗತಿಪರ ಕಾರ್ಯಕೈಗಳ್ಳುವುದು ಬಹು ಅಪಾಯಕಾರಿ ಕೆಲಸವಾಗಿತ್ತು. ಅಂದರೆ ಸಮಾಜದ ಸವರ್ಣೀಯರ ನಿಂದನೆ ಅಪಮಾನ ಮತ್ತು ಕಿರುಕುಳ ಒಂದೆಡೆಯಾದರೆ ತಮ್ಮದೆಯಾದ ಬಂಧುಬಳಗದವರ ಅನಾದರಣೆ ತೀವ್ರ ವಿರೋಧ ಇನ್ನೊಂದೆಡೆಯಿಂದ ಎದುರಿಸ ಬೇಕಾಗಿತ್ತು. ಅಯ್ಯರ್‌ರವರಿಗೆ ಒದಗಿ ಬಂದ ಅಪತ್ತು ಪರಿಸ್ಥಿತಿ ಅದೇ ಆಗಿತ್ತು. ಅಯ್ಯರ್‌ರವರು ಅಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ ಎದೆಗುಂದದೆ ಆ ದಾರಿಯಲ್ಲೇ ಮುಂದೆ ಸಾಗಿದರು. ಅಷ್ಟೇ ಅಲ್ಲ ಪಂಚಮರ ಸಾಮಾಜಿಕ ಬದಲಾವಣೆಯಲ್ಲೆ ನೆಮ್ಮದಿಯ ಬದುಕನ್ನು ಕಂಡರು. ಇಂತಹ ಸಮರ್ಪಣಭಾವ ವ್ಯಕ್ತಿತ್ವವನ್ನು ಹೊಂದಿದ ಅಯ್ಯರ್‌ರವರು ಇಂದಿನ ಯುವ ಪೀಳಿಗೆಗೆ ಸಮಾಜ ಸುಧಾರಕರೆನಿಸಿಕೊಂಡವರಿಗೆ ಸಮಾಜ ಸೇವಾ ಕಾರ್ಯಗಳಲ್ಲಿ ತೊಡಗಿಸಿಕೊಂಡ ಭ್ರಷ್ಟರಾಜಕಾರಣಿಗಳಿಗೆ ಆದರ್ಶ ವ್ಯಕ್ತಿಯಾಗಿ ನಿಲ್ಲುತ್ತಾರೆ. ಹಳೆಯದನ್ನು ತಿಳಿಯದೆ ಹೊಸದನ್ನು ಕಾಣಲು ಸಾಧ್ಯವಿಲ್ಲವೆಂಬಂತೆ ಇಂಥ ವ್ಯಕ್ತಿತ್ವಗಳ ಪರಿಚಯವಾಗದೇ ಇಂದಿನ ಸಮಾಜ ಸೇವಕರಿಗೆ ಸ್ಪಷ್ಟ ದಾರಿಗಳು ಕಾಣದೆ ಹೋಗುವ ಸಂಭವವಿದೆ ಎಂದು ಹೇಳಬಹುದು. ಆದ್ದರಿಂದ ಅಯ್ಯರ್‌ರವರ ದಲಿತೋದ್ಧಾರ ಕಾರ್ಯ ಗಳು ಮಹತ್ವದ್ದೆನ್ನಿಸುತ್ತವೆ.

# ಸಮಾರೋಪ

**ಸಾ**ಮಾಜಿಕ ವಿಜ್ಞಾನಗಳಿಗೆ ಸಂಬಂಧಿಸಿದ ವಿಷಯಗಳ ಸಂಶೋಧನೆಯಲ್ಲಿ ವೈಜ್ಞಾನಿಕ ಪದ್ಧತಿಯನ್ನು ಆಳವಡಿಸುವುದಕ್ಕೆ ಕೆಲವೊಂದು ಇತಿಮಿತಿಗಳು ಎದುರಾಗುತ್ತವೆ. ಇಲ್ಲಿ ಮಾನವ ಮಾನವನನ್ನೇ ಅಧ್ಯಯನ ಮಾಡುವುದರಿಂದ ಮಿತಿಗೊಳಪಟ್ಟು ಖಚಿತವಾದ ತೀರ್ಮಾನಗಳನ್ನು ಹೇಳಲು ಬರುವುದಿಲ್ಲ. ಕಾರಣ ಬದಲಾಗುತ್ತಾ ಸಾಗುವ ಮಾನವ ಸ್ವಭಾವ ಮತ್ತು ಚಲನಾತ್ಮಕ ಸಮಾಜ ಇವು ಒಂದು ನಿರ್ದಿಷ್ಟ ನಿರ್ಣಯಕ್ಕೆ ಬರಲು ಅಡ್ಡಿಯಾಗುತ್ತವೆ. ಅಲ್ಲದೆ ಯಾವುದೇ ಪ್ರಯೋಗ ಸನ್ನಿವೇಶ ಘಟನೆಗಳಿಂದ ಹೊರಬೀಳುವ ಫಲಿತಾಂಗಳು ಸಾರ್ವತ್ರಿಕವಾಗಿರುವುದಿಲ್ಲ. ಹಾಗೆಯೆ ಭವಿಷ್ಯವನ್ನು ನುಡಿಯಲು ಸಾಧ್ಯವಿರುವುದಿಲ್ಲ. ಈ ಕಾರಣಗಳಿಂದಾಗಿ ನಾನು ಕೈಗೊಂಡಿರುವ ಅಧ್ಯಯನ ವ್ಯಕ್ತಿಗೆ ಸಂಬಂಧಿಸಿರುವುದರಿಂದ ಇಲ್ಲಿ ಗಮನಿಸಲಾಗಿರುವ ವಿಚಾರಗಳು ಖಚಿತತೆಯಿಂದ ಕೂಡಿವೆ ಎಂದು ವ್ಯಕ್ತಪಡಿಸಲಾಗದಿದ್ದರೂ ಸತ್ಯಕ್ಕೆ ಹತ್ತಿರವಾಗಿವೆ. ಆದರೆ 'ಹಿಸ್ಟರಿ ರಿಪೀಟ್ಸ್' (ಇತಿಹಾಸ ಮರುಕಳಿಸುತ್ತದೆ) ಎಂಬ ಮಾತಿನಂತೆ ಇತಿಹಾಸ ಮರೆತವರು ಇತಿಹಾಸ ಸೃಷ್ಟಿಸಲಾರರು ಎಂಬ ಬಾಬಾಸಾಹೇಬ್ ಅಂಬೇಡ್ಕರ್‌ರವರ ಹೇಳಿಕೆ ಸತ್ಯವೆಂದು ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಭಾರತೀಯರು ಪರಕೀಯರ ದಾಸ್ಯದಿಂದ ಮುಕ್ತರಾಗಲು ಹೋರಾಡಿದ ವಿಧಾನ ಮತ್ತು ನಾಡು ಕಟ್ಟುವ ನಿಟ್ಟಿನಲ್ಲಿ ಅಂದು ಹಲವಾರು ಮಹನೀಯರು ಎದುರಿಸಿದ ಸಮಸ್ಯೆಗಳು ನಿಭಾಯಿಸಿದ ರೀತಿ ಇವುಗಳಿಂದ ಸಮಾಜದ ಮೇಲಾದ ಪರಿಣಾಮ ಇವೆಲ್ಲ ಪ್ರಸ್ತುತ ಜನತೆಗೆ ಮಾರ್ಗದರ್ಶಕಗಳಾಗುತ್ತವೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಹೀಗೆ ಹೋರಾಟದ ಬದುಕನ್ನು ತಮ್ಮದಾಗಿಸಿಕೊಂಡು ಸಮಾಜದ ಒಳಿತಿಗಾಗಿ ತಮ್ಮನ್ನೇ ಅರ್ಪಿಸಿಕೊಂಡ ಎಷ್ಟೋ ಮಹನೀಯರು ಇತಿಹಾಸದ ಪುಟಗಳಲ್ಲಿ ಕಂಡುಬರುತ್ತಾರೆ. ಹಾಗೂ ಎಷ್ಟೋ ಜನ ಮಹನೀಯರು ಇತಿಹಾಸದಲ್ಲಿ ಗೌಪ್ಯವಾಗಿದ್ದಾರೆ. ಅಂತಹವರಲ್ಲಿ ೨೦ನೇ ಶತಮಾನದ ಮಧ್ಯದವರೆಗೂ ಬದುಕಿದ್ದು ಅಹಿಂಸಾತ್ಮಕ ತತ್ವ ಸಿದ್ಧಾಂತದಲ್ಲಿ ನಂಬಿಕೆಯಿಟ್ಟು ಗಾಂಧೀಜಿಯವರ ಅನುಯಾಯಿ ಯಾಗಿದ್ದವರು. ತಮ್ಮ ಬದುಕಿನ ಕೊನೆಯವರೆಗೂ ದಲಿತರ ಸೇವೆಗಾಗಿಯೇ ಶ್ರಮಿಸಿದ

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಬಗೆಗೆ ಲಭ್ಯವಾದ ಮಾಹಿತಿ, ದಾಖಲೆ, ಕೃತಿಗಳನ್ನು ಮುಖ್ಯ ವಾಗಿರಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಪ್ರಾಸ್ತಾವನೆಯ ರೂಪದಲ್ಲಿರುವ ನನ್ನ ಅಧ್ಯಯನದ ಮೊದಲನೇ ಭಾಗವು ಭಾರತೀಯ ಸಾಮಾಜಿಕ ಸ್ತರವಿನ್ಯಾಸ ಅದರಲ್ಲಿ ದಲಿತರ ಸ್ಥಿತಿಗತಿಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೂ ಅಧ್ಯಯನದ ಉದ್ದೇಶ, ವ್ಯಾಪ್ತಿ ಮಹತ್ವ ಮತ್ತು ಅಧ್ಯಯನದ ವಿಧಾನದಲ್ಲಿ ಕಂಡುಬರುವ ಭಿನ್ನಾಂಶಗಳನ್ನು ಚರ್ಚಿಸುವ ಸಂಕಲ್ಪ ಮಾಡಿದೆ. ಇದರ ಜೊತೆಗೆ ಕೂಲಂಕುಷವಾದ ವಿಶ್ಲೇಷಣೆಗಾಗಿ ಸರಳ ಮತ್ತು ವ್ಯವಸ್ಥಿತವಾದ ಅಧ್ಯಯನದ ಮಾದರಿಯನ್ನು ಅನುಸರಿಸಿ ನನ್ನ ಅಧ್ಯಯಯನದ ವಿನ್ಯಾಸಗಳನ್ನು ತಯಾರಿಸಲಾಗಿದೆ. ಇದಕ್ಕಾಗಿ ಒಂದು ನಿರ್ದಿಷ್ಟ ಕ್ಷೇತ್ರದ ಆಯ್ಕೆಯನ್ನು ಮಾಡಲಾಗಿದ್ದು ಆ ಪ್ರದೇಶದ ಕ್ಷೇತ್ರವ್ಯಾಪ್ತಿಯನ್ನು ಸ್ಪಷ್ಟಪಡಿಸುತ್ತದೆ.

ಅಧ್ಯಯನದ ಎರಡನೆ ಭಾಗವು ಆರ್. ಗೋಪಾಲಸ್ವಾಮಿಯ ಅಯ್ಯರ್‌ರವರ ಕೌಟುಂಬಿಕ ಹಿನ್ನೆಲೆ ಬಾಲ್ಯ ಶಿಕ್ಷಣ ಮತ್ತು ಬದುಕನ್ನು ಒಳಗೊಂಡಿದೆ. ಒಬ್ಬ ವ್ಯಕ್ತಿಯನ್ನು ಕುರಿತು ಸಂಶೋಧನೆ ಕೈಗೊಂಡಾಗ ಆ ವ್ಯಕ್ತಿ ಜನಿಸಿದ ಮನೆತನ ಸಂಪ್ರದಾಯ ಸಂಸ್ಕಾರ ಮೊದಲಾದ ಅಂಶಗಳನ್ನು ಒಳಗೊಂಡಂತೆ ಮಾಹಿತಿ ಸಂಗ್ರಹಿಸಿ ಅಧ್ಯಯನ ಮಾಡಿ ಅವರ ಬದುಕಿನ ಕಿರುಪರಿಚಯವನ್ನು ಒದಗಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಅಯ್ಯರ್‌ರವರ ಬದುಕಿನ ಮೇಲೆ ಬೆಳಕುವ ಚೆಲ್ಲುವ ದೃಷ್ಟಿಯಿಂದ ಅವರ ಕುಟುಂಬದವರನ್ನು ಸಮಕಾಲೀನ ವ್ಯಕ್ತಿಗಳ ಕುಟುಂಬದವರನ್ನು ಸಂದರ್ಶನ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಅವರ ಬದುಕಿನ ಬಗೆಗೆ ಅತಿಯಾಗಿ ಹೊಗಳ ಅಥವಾ ಉತ್ಪ್ರೇಕ್ಷೆ ಮಾಡಿ ಬರೆಯುವುದಕ್ಕಿಂತ ಅವರ ಜೀವನವನ್ನು ಸ್ವಲ್ಪದರಲ್ಲಿಯೇ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಅದರಲ್ಲಿ ಮನೆತನ ಬಾಲ್ಯ ಮತ್ತು ಶಿಕ್ಷಣ ಅವರ ದಲಿತೋದ್ಧಾರ ಕಾರ್ಯಗಳ ಕಿರುಪರಿಚಯ ಮಾಡಲಾಗಿದೆ.

ಮಾನವನ ಬದುಕು ಆಕಸ್ಮಿಕಗಳ ಆಗರ ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಈ ಆಕಸ್ಮಿಕಗಳನ್ನೇ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ತಮ್ಮ ಜೀವನದಲ್ಲಿ ಒದಗಿಬಂದ ದಲಿತ ಜನಾಂಗದ ಸೇವೆಯನ್ನು ಅವಕಾಶವೆಂದು ಭಾವಿಸಿ ಅದನ್ನು ಈ ಜನಾಂಗದ ಒಳಿತಿಗಾಗಿ ಉಪಯೋಗಿಸಿ ತಮ್ಮ ಬದುಕನ್ನು ಸಾರ್ಥಕಪಡಿಸಿಕೊಂಡು ಇತರರಿಗೆ ಮಾದರಿಯಾಗಿದ್ದಾರೆ. ಹೀಗೆ ಅವಕಾಶಗಳನ್ನು ಸದುಪಯೋಗ ಪಡಿಸಿಕೊಂಡು ಸಮಾಜಕ್ಕೆ ಅನುಕೂಲಕರವಾದ ರೀತಿಯಲ್ಲಿ ಬದುಕು ಸಾಗಿಸಬೇಕೆಂಬ ಮನೋಭಾವನೆ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಮೂಡಬೇಕೆಂಬುದೇ ಈ ಅಧ್ಯಯನದ ಆಶಯ.

ಅಧ್ಯಯನದ ಮೂರನೇ ಭಾಗವು ಅಯ್ಯರ್‌ರವರು ಮೈಸೂರು ಸಂಸ್ಥಾನದಲ್ಲಿ ಕೈಗೊಂಡ ದಲಿತೋದ್ಧಾರ ಕಾರ್ಯಗಳು ಮತ್ತು ದಲಿತ ಸಮುದಾಯ ಸಮಾಜದ ಮುಖ್ಯವಾಹಿನಿಗೆ ಬಂದ ಬಗೆಯನ್ನು ಕುರಿತು ಸಂಕ್ಷಿಪ್ತವಾದ ವಿವರಗಳನ್ನು ನೀಡಲು ಪ್ರಯತ್ನಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ದಲಿತರು ಸಾಮಾಜಿಕವಾಗಿ ಶೈಕ್ಷಣಿಕವಾಗಿ ಹಿಂದುಳಿದ್ದನ್ನು ಗಮನಿಸಿದ ಅಯ್ಯರ್‌ರವರು

ಮೈಸೂರು ಆಳರಸರು ಮತ್ತು ದಿವಾನರುಗಳ ರಾಜಮನ್ನಣೆ ಪಡೆದು ಹೇಗೆ ದಲಿತೋದ್ಧಾರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಅವರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಪ್ರಯತ್ನಿಸಿದರು ಎಂಬುದನ್ನು ವಿವರಿಸಲಾಗಿದೆ. ಹಾಗೂ ಇದರಿಂದಾಗಿ ಮೈಸೂರು ಸಂಸ್ಥಾನದ ದಲಿತರ ಮೇಲಾದ ಪರಿಣಾಮಗಳನ್ನು ಮತ್ತು ಅಯ್ಯರ್‌ರವರ ದಲಿತ ಕಾರ್ಯಗಳಿಗೆ ಈ ಸಮುದಾಯ ಹೇಗೆ ಸ್ಪಂದಿಸಿತು ಎಂಬುದನ್ನು ಕುರಿತು ವಿವರಿಸಲಾಗಿದೆ. ಅಲ್ಲದೆ ದಲಿತಪರ ಕಾರ್ಯ ಗಳನ್ನು ಕೈಗೊಂಡಾಗ ಅಯ್ಯರ್‌ರವರಿಗೆ ಎದುರಾದ ಕೆಲವು ಸಾಮಾಜಿಕ ಸಂದರ್ಭಗಳು ಮತ್ತು ಸಮಸ್ಯೆಗಳಿಗೆ ಅವರು ತಾಳಿದ ದೃಢನಿರ್ಧಾರಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

ಅಧ್ಯಯನದ ನಾಲ್ಕನೆ ಭಾಗವು ನಾಲ್ವಡಿ ಕೃಷ್ಣರಾಜ ಒಡೆಯರ ಸರ್ಕಾರ ಮತ್ತು ಅಯ್ಯರ್‌ರವರ ನಿಲುವುಗಳ ಬಗ್ಗೆ ವಿವರಣೆ ನೀಡಲಾಗಿದೆ. ದಲಿತರ ಐಕಮತ್ಯ ಮತ್ತು ಏಳಿಗೆಗೆ ಕಾರಣ ಬದ್ಧರಾದ ಅಯ್ಯರ್‌ರವರು ನಾಲ್ವಡಿ ಸರ್ಕಾರದ ನೆರವಿನಿಂದ ಈ ಜನಾಂಗದವರಿಗೆ ಒದಗಿಸಿದ ವಿಶೇಷ ಸೌಲಭ್ಯಗಳನ್ನು ತಿಳಿಸುವ ಪ್ರಯತ್ನ ಮಾಡಲಾಇಗದೆ. ದಲಿತಪರ ಕಾರ್ಯಗಳಲ್ಲಿ ತೊಡಗಿಸಿಕೊಂಡ ನಾಲ್ವಡಿಯವರ ಸರ್ಕಾರದ ವಿರುದ್ಧ ಎಲ್ಲಾ ಬಲಾಢ್ಯ ಜಾತಿಯವರು ನಿಂತ ಸನ್ನಿವೇಶದಲ್ಲಿ ಅರನ್ನು ಎದುರು ಹಾಕಿಕೊಳ್ಳದೇ ತನ್ನ ಹಿತ ದೃಷ್ಟಿಯಿಂದ ಯಾವ ಬಗೆಯಲ್ಲಿ ತನ್ನ ನಿಲುವುಗಳನ್ನು ಹೊಂದಿತು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ದಲಿತಪರ ಕಾರ್ಯಗಳಿಗಾಗಿ ಅಯ್ಯರ್‌ರವರನ್ನು ಪ್ರಜಾಪ್ರತಿನಿಧಿ ಸಭೆಗೆ ನೇಮಕ ಮಾಡಿದ ಉದ್ದೇಶ ಮತ್ತು ಅವರನ್ನು ಅ ಮೂಲಕ ಸರ್ಕಾರಕ್ಕೆ ನೀಡಿದ ಸಲಹೆಗಳಿಗೆ ಸರ್ಕಾರ ಹೇಗೆ ಸ್ಪಂದಿಸಿತು ಎಂಬುದನ್ನು ಕುರಿತು ಚರ್ಚಿಸಿ ಕೆಲವು ಆಶಯ ಗಳನ್ನು ವ್ಯಕ್ತಪಡಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಜಡ್ಡುಗಟ್ಟಿದ ದಲಿತ ಸಮುದಾಯ ಸ್ವಲ್ಪ ಮಟ್ಟಿಗಾದರೂ ಸವರ್ಣೀಯರಿಂದ ವಿಮೋಚನೆಗೊಂಡು ಸಾಮಾಜಿಕ ಶೈಕ್ಷಣಿಕ ರಾಜಕೀಯ ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೇಗೆ ಸೃಜನಶೀಲಗೊಂಡಿತು ಎಂಬುದನ್ನು ತಿಳಿದು ಕೊಳ್ಳಲಾಗಿದೆ. ಒಟ್ಟಾರೆ ಅಯ್ಯರ್‌ರವರು ಪ್ರಜಾಪ್ರತಿನಿಧಿ ಸಬೆಯ ಸದಸ್ಯರಾಗಿದ್ದಕೊಂಡು ನಾಲ್ವಡಿಯವರ ಸಹಕಾರ ದಿಂದ ಅವಶ್ಯವಿದ್ದ ಕಡೆ ಪಂಚಮ ಶಾಲೆ, ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ದಲಿತರ ಶೈಕ್ಷಣಿಕ ಪ್ರಗತಿಗೆ ಶ್ರಮಿಸಿದರು ಎಂಬುದನ್ನು ತಿಳಿಯಲಾಗಿದೆ.

ಅಧ್ಯಯನದ ಐದನೇ ಭಾಗವು ವಸಾಹತುಶಾಹಿ ಕಾಲಘಟ್ಟದಲ್ಲಿ ಮೈಸೂರು ಸಂಸ್ಥಾನದ ದಲಿತ ಶಿಕ್ಷಣ ಎಂಬ ವಿಷಯ ಕುರಿತು ಚರ್ಚಿಸಲಾಗಿದೆ. ಮೈಸೂರು ಸಂಸ್ಥಾನ ಭರತ ಖಂಡದಲ್ಲಿಯೇ ಒಂದು ಮಾದರಿ ಸಂಸ್ಥಾನವಾಗಿ ರೂಪುಗೊಂಡಿದ್ದರೂ ಸಹ ಅದು ವಸಾಹತುವಾದಿಗಳ ಕುಸಾಗಿತ್ತು. ಯಾವುದೇ ಸ್ವತಂತ್ರ ನಿರ್ಣಯಗಳನ್ನು ತೆಗೆದುಕೊಳ್ಳಲು ಸಾಧ್ಯವಿರಲಿಲ್ಲ. ಹೀಗಿದ್ದರೂ ಕೂಡ ಕೆಲವೇ ಜನರ ಸ್ವತ್ತಾಗಿದ್ದ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿ ಎಲ್ಲಾ ವರ್ಗದವರಿಗೂ ತಲುಪುವಂತೆ ಮಾಡಿದ ಬಗೆ ಅದರಲ್ಲಿಯೂ ದಲಿತರಿಗೆ ಶಿಕ್ಷಣ ನೀಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆ ತಂದ ಬಗೆಯಾದರೂ ಹೇಗೆ ಎಂಬುದನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಬ್ರಿಟಿಷ್‌ರು ಕ್ರೈಸ್ತ ಮಿಷರಿ ಶಾಲೆಗಳನ್ನು ಸ್ಥಾಪಿಸಿ ತಮ್ಮ ಧರ್ಮಪ್ರಚಾರ ಮಾಡುವುದರ ಜೊತೆಗೆ ದಲಿತರಿಗೆ ಇಂಗ್ಲೀಷ್ ಶಿಕ್ಷಣ ನೀಡಿದ್ದರ ಪರಿಣಾಮ ದಲಿತ ಸಮುದಾಯದಲ್ಲಾದ ಸ್ಥಿತ್ಯಾಂತರಗಳೇನು ಮತ್ತು ಮೈಸೂರು

ಅರಸರು ಹಾಗೂ ಬ್ರಿಟಿಷ್‌ರು ದಲಿತರಿಗೆ ಇಂಗ್ಲೀಷ್ ಶಿಕ್ಷಣ ನೀಡಿದ್ದು ಆ ಸಮುದಾಯದ ಪರಿಸ್ಥಿತಿಗಳನ್ನು ತಿಳಿದು ಅವರನ್ನು ತಮ್ಮಕಡೆಗೆ ಒಲಿಸಿಕೊಳ್ಳುವುದಕ್ಕೋ ಅಥವಾ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದಲೂ ಹಾಗೂ ಮನಪೂರ್ವಕವಾಗಿಯೇ ಸಮಾಜೋದ್ಧಾರ ಕಾರ್ಯ ಗಳನ್ನು ಕೈಗೊಂಡರೋ ಎಂಬ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ. ಒಟ್ಟಾರೆ ಇವೇನೇ ಕಾರಣ ಗಳಿದ್ದರೂ ಕೂಡ ದಲಿತರಿಗೆ ಶಿಕ್ಷಣ ನೀಡಿದ್ದರ ಪರಿಣಾಮ ಅಂಧಕಾರದಲ್ಲಿದ್ದ ದಲಿತರು ತಮ್ಮ ಮೌಢ್ಯತೆಗಳನ್ನು ಕಿತ್ತೊಗೆದು ಹೊಸ ಸಂಸ್ಕೃತಿಯೊಂದಿಗೆ ಹೊಂದಿಕೊಂಡು ತಮ್ಮ ಜೀವನ ಶೈಲಿಯನ್ನು ಬದಲಾಯಿಸಿಕೊಳ್ಳಲು ಸಾಧ್ಯವಾಯಿತು ಎಂಬುದನ್ನು ತಿಳಿಯಲಾಗಿದೆ.

ಅಧ್ಯಯನದ ಆರನೆ ಭಾಗವು ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಪ್ರಥಮ ದಲಿತ ಮಹನೀಯರು ಎಂಬ ವಿಷಯ ಕುರಿತು ಚರ್ಚಿಸಲಾಗಿದೆ. ಅಕ್ಷರ ಸಂಸ್ಕೃತಿಯಿಂದ ವಂಚಿತರಾಗಿದ್ದ ದಲಿತ ಜನಾಂಗದಿಂದ ಅಕ್ಷರವನ್ನು ನಿರೀಕ್ಷಿಸುವುದು ಕಷ್ಟ ಸಾಧ್ಯವಾಗಿದ್ದ ಸಂದರ್ಭದಲ್ಲಿ ದಲಿತ ಜನಾಂಗದ ಕೆಲವೇ ಕೆಲವರು ಅಕ್ಷರಸ್ಥರಾಗಿದ್ದರು. ಇದಕ್ಕೆ ಕಾರಣ ಆರ್.ಗೋಪಾಲಸ್ವಾಮಿ ಅಯ್ಯರ್ ತಲಕಾಡಿನ ಆರ್. ರಂಗೇಗೌಡ ವರದರಾಜ್ ಅಯ್ಯಂಗಾರ್ ವೆಂಕಣ್ಣಭಟ್ಟ ಕೆ.ಸಿ. ರೆಡ್ಡಿ ನಾಲ್ವಡಿ ಕೃಷ್ಣರಾಜಒಡೆಯರ್ ಮಿರ್ಜಾಇಸ್ಮಾಯಿಲ್ ಮತ್ತು ವಿಶ್ವೇಶ್ವರಯ್ಯನವರಂತಹ ದಲಿತಪರ ಕಾಳಜಿವುಳ್ಳ ವ್ಯಕ್ತಿಗಳಿಂದ ಈ ಕಾರ್ಯ ಸಾಧ್ಯವಾಯಿತು ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ತಿಳಿದುಕೊಳ್ಳಲಾಗಿದೆ. ಶಿಕ್ಷಣ ಪಡೆದ ದಲಿತ ಮಹನೀಯರು ಎಂತಹ ಸಂದರ್ಭದಲ್ಲಿ ಶಿಕ್ಷಣ ಪಡೆದು ಜಾಗೃತರಾಗಿ ಮೌಢ್ಯತೆಯ ವಿರುದ್ಧ ಸೆಟೆದು ನಿಂತು ಹೇಗೆ ತಮ್ಮ ಸಮುದಾಯವನ್ನು ಜಾಗೃತಗೊಳಿಸಿ ವೈಚಾರಿಕತೆ ಯನ್ನು ಬೆಳೆಸಿಕೊಳ್ಳುವಂತೆ ಮಾಡಿದರು ಎಂಬುದನ್ನು ತಿಳಿಯಲಾಗಿದೆ. ಹಾಗೂ ತಮ್ಮ ಸಮುದಾಯದ ಏಳಿಗೆಗೆ ಯಾವ ಬಗೆಯಲ್ಲಿ ಕಾರ್ಯಪ್ರವೃತ್ತರಾಗಿ ಮುಂದೆ ಕರ್ನಾಟಕದಲ್ಲಿ ಹುಟ್ಟಿಕೊಂಡ ದಲಿತ ಚಳವಳಿಗೆ ಹೇಗೆ ಕಾರಣಕರ್ತರಾದರು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಶಿಕ್ಷಣ ಪಡೆದ ಕೆಲವು ವ್ಯಕ್ತಿಗಳ ವಿವರವನ್ನು ನೀಡುವ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ. ಒಟ್ಟಾರೆ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ದಲಿತ ಮಹನೀಯರಿಂದ ಮುಂದೆ ಸಮಾಜದ ಮೇಲಾದ ಸಾದಕ ಬಾದಕಗಳೇನು ಎಂಬುದನ್ನು ಕುರಿತು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ತಿಳಿದು ಬಂದ ಕೆಲವು ವಿಚಾರಗಳನ್ನು ಇಲ್ಲಿ ತಿಳಿಯುವ ಪ್ರಯತ್ನ ಮಾಡಲಾಗಿದೆ.

ಅಧ್ಯಯನದ ಏಳನೇ ಭಾಗವು ಅಧ್ಯಯನದಿಂದ ಕಂಡುಕೊಂಡ ಕೆಲವು ನಿಲುವುಗಳು ಅಥವಾ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

ಪ್ರಸ್ತುತ ಪ್ರಬಂಧದ ಕೇಂದ್ರಬಿಂದುಗಳಾಗಿರುವ ಶ್ರೀ ಆರ್. ಗೋಪಾಲಸ್ವಾಮಿಅಯ್ಯರ್‌ರವರು ಕನ್ನಡ ನಾಡು ಕಂಡ ಒಬ್ಬ ವಿಶಿಷ್ಟ ಸಮಾಜ ಸುಧಾರಕರಾಗಿ ಗಮನ ಸೆಳೆದಿದ್ದಾರೆ. ನನ್ನ ಸಂಶೋದನೆಯಲ್ಲಿ ಅಯ್ಯರ್‌ರವರ ಬಗೆಗೆ ನಾನು ಗ್ರಹಿಸಿದ್ದು ಅವರಲ್ಲಿ ಕಂಡದ್ದು ಸರಳ ಶೈಲಿಯ ಉದಾತ್ತ ಜೀವನ. ಯಾವುದೇ ಸಾಮಾಜಿಕ ಬದ್ಧತೆಗೆ ಒಳಗಾಗದೇ ಅಥವಾ ಗುಂಪುಗಾರಿಕೆಗೆ ಜೋತು ಬೀಳದೆ ವಿಶಾಲ ಮನೋಭಾವ ಪರಿಶುದ್ಧ ಮನಸ್ಸನ್ನು ಪಾರಿವಾಳದಂತೆ ಸಾಕಿಕೊಂಡು ಬಂದ ಅಯ್ಯರ್ ಸಮತೆಯ ಶಿಲ್ಪಿಯಾಗಿ ಕಂಡುಬರುತ್ತಾರೆ. ಪ್ರಸ್ತುತ ಪ್ರಬಂಧವು ಆಕಾರ ಸಾಮಾಗ್ರಿಗಳ

ಆಧಾರದೊಂದಿಗೆ ಹಾಗೂ ನನ್ನ ಜ್ಞಾನದ ಮಿತಿಯಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಜೀವನ ಮತ್ತು ದಲಿತೋದ್ಧಾರ ಕಾರ್ಯಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಾಗಿದೆ. ಸಂಶೋಧನೆ ಯೆಂಬುದು ನಿರಂತರ ಪ್ರಕ್ರಿಯೆ. ಅದಕ್ಕೆ ಕೊನೆಯೆಂಬುದೇ ಇಲ್ಲ. ಅದದ್ದು ಅಲ್ಪ ಆಗಬೇಕಾದದ್ದು ಅಪಾರ ಎಂದು ಭಾವಿಸಿರುವ ನಾನು ನನ್ನ ಅಧ್ಯಯನದ ಅನುಭವದ ಮಿತಿಯಲ್ಲಿ ನನ್ನ ಸಂಶೋಧನೆಯ ವಿಚಾರಗಳನ್ನು ಸಾದರಪಡಿಸಿದ್ದೇನೆ.

# ಅನುಬಂಧಗಳು

* ಡಿ. ಗೋವಿಂದದಾಸರು ರಚಿಸಿದ ಭಜನೆ
* ಶ್ರೀರಂಗ ಚನ್ನಗಿರಿಯವರ ಪದ್ಯ
* ಪರಾಮರ್ಶನ ಗ್ರಂಥಗಳು
* ನಕ್ಷೆ
* ಛಾಯಾಚಿತ್ರಗಳು
* ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು

# <u>ಅನುಬಂಧಗಳು</u>

## – ಭಜನೆ –

ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಸಂಸ್ಥಾನದ ಗಣ್ಯಾತಿಗಣ್ಯರಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್‌ರವರು ಒಬ್ಬರು. ಸಾರ್ವಜನಿಕ ಸೇವಾದುರಂಧರರು, ದಲಿತ ಜನಾಂಗದ ಸರ್ವಾಂಗೀಣ ಅಭಿವೃದ್ಧಿಗಾಗಿ ತ್ರಿಕರಣ ಪೂರ್ವಕವಾಗಿ ಶ್ರದ್ಧೆಯಿಂದ ದುಡಿದ ಮಹಾನ್ ಮಾನವತಾವಾದಿ. ಇಂತಹ ಮಹಾ ಚೇತನವು ೧೯೪೩ ಮಾರ್ಚ್ ೧೯ರಂದು ಬಾಳಪರದೆಯ ಹಿಂದೆ ಸರಿದಾಗ ಆಧುನಿಕ ಕನ್ನಡ ಸಾಹಿಯದ ಮೊದಲ ದಲಿತ ಕವಿ ಮತ್ತು ನಾಟಕಾರರು ಹಾಗೂ ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಪ್ರೇರಣೆಯಿಂದ ಶಿಕ್ಷಣ ಪಡೆದವರಲ್ಲಿ ಒಬ್ಬರಾದ ಡಿ. ಗೋವಿಂದದಾಸರು ರಚಿಸಿದ ಭಜನೆ ಈ ಕೆಳಗಿನಂತಿದೆ.

ಹರಿಜನ ಗುರುವರ ಹಾರಿದೆಯಾ, ಹರಿಪಾದವ ನೀ ಸೇರಿದೆಯ ॥ಪ॥
ಮರೆಮಾಚುತೆ ಕಣ್ಮರೆಯಾದೆಯಾ,
ನೆರೆಶೋಕಗ್ಯೈವ ಪರಿಮಾಡಿದೆಯಾ
ಇನ್ನಾರೆಮ್ಮನು ಕರೆಯುವರು
ಬನ್ನಿ ರಿಲ್ಲೆಂದೊರಲುವರು ॥ಪ॥

ಬಾರದಿರೆಮ್ಮನು ಬೈಯುವರು
ಬಂದರೆ ಚಂದದಿ ಮನ್ನಿಪರು
ತಬ್ಬಲಿ ಎಮ್ಮನು ಮಾಡಿದೆಯಾ
ಕಡೆನೋಟದಿ ಎಮ್ಮನು ನೋಡಿದೆಯಾ
ಆರು ಅರಿಯದಂತೋಡಿದೆಯಾ
ಹರಿಗೋವಿಂದನ ಕೂಡಿದೆಯಾ ॥ಪ॥

ಅಯ್ಯನೆಂಬ ಸೊಲ್ಲಳಯಿತಲ್ಲ
ಮಂದ ಭಾಗ್ಯರು ನಾವೆಲ್ಲಾ
ಯಿಂದು ತಂದೆಯಗಲಿದೆವಲ್ಲಾ
ಮುಂದೆ ನಮ್ಮ ಪರಿಚಯ ಹರಿಬಲ್ಲ ॥ಪ॥

ಎಲ್ಲೋ ಕಾಣುವುದಿಲ್ಲವಲ್ಲ ನಮ್ಮಯ್ಯ
ಎಲ್ಲೂ ಇಲ್ಲ ಗೋಪಾಲಸ್ವಾಮಯ್ಯ
ಮನೆಯೊಳ ಮಂಚದಲ್ಲ ನಮ್ಮಯ್ಯ
ವರರಾಜರ ದರ್ಬಾರದೊಳಲ್ಲ ನಮ್ಮಯ್ಯ ||ಪ||

ಮೈಸೂರು ರಾಜ್ಯದೊಳಲ್ಲ ನಮ್ಮಯ್ಯ
ಇನ್ನೆಲ್ಲಿರುವ ಕಾಣೆ ನಮ್ಮಯ್ಯ
ಏನುಪೇಳದೆಲ್ಲಿ ಹೋದ ನಮ್ಮಯ್ಯ
ಕರುಣಾಳು, ನಾಳೆ ಬರುವನೆ ನಮ್ಮಯ್ಯ ||ಪ||

ಪಾಲುಪತ್ರ ಕೊಡದೆಯೆ ನಮ್ಮಯ್ಯ
ಈ ಗೋಳು ಕೊಟ್ಟು ಎಲ್ಲಿ ಪೋದೆ ನಮ್ಮಯ್ಯ ||ಪ||

ಇರುವನಲ್ಲಿ ನೋಡಿ, ನೋಡ, ನಮ್ಮಯ್ಯ
ಪರಂದಾಮದೊಳು ಕುಳಿತಿಹನು ನಮ್ಮಯ್ಯ
ಕರೆದರ‍್ಯಾಕೊಬಾರಲೊಲ್ಲ ನಮ್ಮಯ್ಯ
ಅಲ್ಲಿ ಹರಿಯ ಪೂಜೆ ಮಾಳ್ಪನು ನಮ್ಮಯ್ಯ ||ಪ||
ಎಂದು ಬರೆದು ಹಾರ್‍ಮೋನಿಯಂ ತಬಲ ತಾಳ ಸಮೇತ ಹಾಡಿದರು.

## – ಪದ್ಯ –

ಆರ್. ಗೋಪಾಲಸ್ವಾಮಿ ಅಯ್ಯರ್‌ರವರ ಪ್ರೇರಣೆಯಿಂದ ಶಿಕ್ಷಣ ಪಡೆದು ದಲಿತ ಸಮುದಾಯದ ಪ್ರಭಾವಿ ವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀರಂಗ ಚನ್ನಗಿರಿಯವರು ಹರಿಜನ ಕೃತಾಂಜಲಿ ದಿವಂಗತ ಆರ್. ಗೋಪಾಲಸ್ವಾಮಿ ಅಯ್ಯರ್‌ರವರಿಗೆ ಅರ್ಪಣೆ ಮಾಡಿರುವ ಪದ್ಯ ಈ ಕೆಳಗಿನಂತಿದೆ.

ಗೋಪಾಲಸ್ವಾಮಿ ಹರಿಜನ ಪ್ರೇಮಿ<br>
ಶ್ರೀ ಪದಗಾಮಿ ಚಿರನಾಮಿ<br>
ಲೋಪದೋಷ ಗುಣ ವ್ಯಾಪಿ ಜನಂಗಳ<br>
ಶ್ರೀಪತಿಯಂದದಿ ಪೋಷಿಸಿದೆ<br>
ಲೋಪಳಿವಲಿ ಗುಣ ರೂಪಿಸಿದೆ<br>
ಮಾದರಿ ಮೈಸೂರು ನಾಡೊಳು ನಿಮ್ನರ<br>
ಆದರದಿಂ ಪ್ರೋತ್ಸಾಹಿಸುತ<br>
ಸೋದರ ಹಿಂದುಗಳಾ ಗ್ರಹಕಂಜದೆ<br>
ಸಾಧಿಸಿ ಸಂಸ್ಕೃತಿ ಗೆಲ್ಲಿಸಿದೆ ॥೨॥

ಉಚ್ಚಧರ್ಮ ಮೇಣುಚ್ಚವರ್ಣದಿಂ<br>
ಉಚ್ಚವಂಶದೊಳು ಉದ್ಭವಿಸಿ<br>
ತುಚ್ಛನೀಚ ಮೇಣಸ್ಪೃಶ್ಯತೆಗಳ<br>
ಕಿಚ್ಚಿನೊಳಾಳ್ದವರ ಎಚ್ಚರಿಸಿ<br>
ಮೆಚ್ಚಿನೊಳೆತ್ತಿದ ಸಚ್ಚರಿತ ॥೩॥

ಮುಗ್ಧ ಜನಾಂಗವ ಉದ್ಧರಿಸಲು ಘನ<br>
ವಿದ್ಯೆಯೇ ಸಿದ್ಧೌಷಧವೆಂದೇ<br>
ವಿದ್ಯಾರ್ಥಿ ನಿಲಯಂಗಳ ನಿರ್ಮಿಸುತೆ<br>
ವಿದ್ಯಾಬುಧ್ಧಿಯಂ ವರ್ಧಿಸಿದೆ<br>
ಬಿದ್ದ ಪಂಚಮೋದ್ಧಾರನಾದೆ ॥೪॥

ಹರಿಜನಾಭ್ಯುದಯ ವೃಕ್ಷ ಬೀಜವೆನೆ<br>
ಹರಿಜನ ವಿದ್ಯಾಲಯಗಳನು<br>
ಪರಮಧ್ಯೇಯದಿಂದ ನಿರ್ಮಿಸಿ ಮಾದರಿ<br>
ಸಿರಿನಾಡರಸರಿಗೊಪ್ಪಿಸಿದೆ<br>
ಅರಸರ ಮನ್ನಣೆ ನೆರೆಗೆಲ್ದೆ ॥೫॥

ಈ ನವನಾಡಿನ ರಾಜರ್ಷಿಯು ಮಹ<br>
ಮಾನವ ಕೇಸರಿ ಯುವರಾಜಾ<br>
ಶ್ರೀ ನರಸಿಂಹರಾಜ ಹಾಸ್ಟಲೆನೆ<br>
ಆನವಸಂಸ್ಥೆಯ ಹರಿಸಿದರು<br>
ಜ್ಞಾನವೃಧ್ಧಿ ಪಥ ತೋರಿದರು ॥೬॥

ಹಿಂದು ಸಮಾಜದ ಶುದ್ಧಾದರ್ಶದಿ
ಬೃಂದಾವನ ಗೋಪಾಲನೊಲು
ಖಂಡಿಸುತಂಧರ ನಿಂದ್ಯೆಯ ಧೈರ್ಯದಿ
ವಂದ್ಯನಾದೆ ಇತಿಹಾಸದೊಳು
ತಂದೆಯ ಬಂಧು ಸ್ವರೂಪದೊಳು ॥೭॥

## ಪರಾಮರ್ಶನ ಗ್ರಂಥಗಳು


### ಕನ್ನಡ ಪ್ರಾಥಮಿಕ ಆಕರಗಳು

ಸಿ.ಕೆ. ವೆಂಕಟರಾಮಯ್ಯ., ಆಳಿದ ಮಹಾಸ್ವಾಮಿಗಳು, ಸಿಟಿ ಮೈಸೂರು.

ಬಿ.ಎಂ.ಶ್ರೀಕಂಠಯ್ಯ., ೧೯೭೧, ಮೈಸೂರಿನ ದಿವಾನರುಗಳು, ಜಿ.ಹೆಚ್. ರಾಮರಾವ್, ಮೈಸೂರು ಪ್ರಿಟಿಂಗ್ ಮತ್ತು ಪಬ್ಲಿಕೇಷನ್, ಮೈಸೂರು.

ವಿ.ಎನ್. ರಾಜಾರಾವ್, ೧೯೪೫, ಆಧುನಿಕ ಮೈಸೂರು ನಿರ್ಮಾಪಕರು, ಮೋದಿ ಪವರ್ ಪ್ರಿಟಿಂಗ್ ವರ್ಕ್ಸ್, ಬೆಂಗಳೂರು.

ಬ.ನ. ಸುಂದರರಾವ್, ೧೯೮೫, ಬೆಂಗಳೂರು ಇತಿಹಾಸ, ಸ್ಥಾಪನೆಯಿಂದ ಹಿಡಿದು ಸ್ವರಾಜ್ಯ ಲಭಿಸುವವರೆಗೆ, ವಸಂತ ಸಾಹಿತ್ಯ ಗ್ರಂಥಮಾಲಾ, ಬೆಂಗಳೂರು.

ಡಾ. ಜಿ. ಗೋಪಾಲ್, ೨೦೦೧, ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು.

ವಿ.ಎಸ್. ನಾರಾಯಣರಾವ್., ಸರ್ ಎಂ. ಇಸ್ಮಾಯಿಲ್‌ರ ಜೀವನ ಚರಿತ್ರೆ.

### ಇಂಗ್ಲಿಷ್ ಪ್ರಾಥಮಿಕ ಆಕರಗಳು

Sir Mirza M. Ismaial., The Man and his Work By. G. Sreenivasa Aingar

My Public Work, By. Sir Mirza M. Ismaial.,

Biography of his Highness Sri Chmarajendra Wadiyar Bahadur G.C.S.I., By M. Singvaiya

Specehes of Rajasevadurina Sirdar Sir M. Kantharaj Urs, Vol-I, (Ed.) By sirdar K. Basavaraj Urs.

Addresses of Rajasevadhurina Sirdar Sir M. Kantharaja Urs to the Representative Assmebly, Vol.-II

Dewan Seshadri Iyer, By N.S. Chandrashekar

Bangalore Past and Present, By B. Ramakrishana Rao, 1916

Memoirs of my Public Life, By. Dr. M. Visveswaraya.

## ಆಯ್ದ ಪರಮಾರ್ಶನ ಗ್ರಂಥಗಳು


ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೫, ನಾಲ್ವಡಿ ಕೃಷ್ಣನ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೪, ನಮ್ಮ ಗ್ರಾಮಗಳು ಅಂದು ಇಂದು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೬, ದಲಿತರ ಮೇಲೆ ದೌರ್ಜನ್ಯ ಒಂದು ನೋಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಎನ್. ಚಿನ್ನಸ್ವಾಮಿ ಸೋಸಲೆ., ೨೦೦೬, ಪ್ರಭುತ್ವ ಮತ್ತು ದಲಿತರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಎಸ್. ಚಂದ್ರಶೇಖರ್., ೧೯೮೩, ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ, ಎ೧೮೮೧ ರಿಂದ ೧೯೪೦ಏ ಕೆಲವು ಒಳ ನೋಟಗಳು, ಬೆಂಗಳೂರು.

ಎಸ್. ಚಂದ್ರಶೇಖರ್., ೨೦೦೬, ವಸಾಹತು ಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಎಸ್. ಚಂದ್ರಶೇಖರ್., ೨೦೦೬, ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಹಾ.ಮಾ. ನಾಯಕ., (ಸಂ). ೧೯೭೧, ಕನ್ನಡ ವಿಶ್ವಕೋಶ ಸಂಪುಟ-೩, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು.

ಚಂಪಾ (ಸಂ)., ಸಂಕ್ರಮಣ, ಸಂಪುಟ-೧೭, ಸಂಚಿಕೆ-೧೧ ಸಂಕ್ರಮಣ ಪ್ರಕಾಶನ, ಬೆಂಗಳೂರು.

ಬಿ.ಸಿ. ರಾಧಕೃಷ್ಣ, ೧೯೪೯, ನನ್ನ ತಂದೆ, ಬಿ. ಶ್ರೀನಿವಾಸ ಐಯ್ಯಂಗಾರ್ ಪ್ರಿಂಟರ್ಸ್ ಮತ್ತು ಪ್ರಕಾಶಕರು, ಬೆಂಗಳೂರು.

ಡಿ.ಎಸ್. ವೀರಯ್ಯ., ೨೦೦೫, ದಲಿತ ಚಿಂತನೆ, ಸ್ವಪ್ನಬುಕ್ ಹೌಸ್, ಬೆಂಗಳೂರು.

ಡಾ. ಮೊಗಳ್ಳಿಗಣೇಶ್., ೧೯೯೯, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಮೊಗಳ್ಳಿಗಣೇಶ್., ೨೦೦೬, ದಲಿತ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಎಸ್. ರಾಜಶೇಖರ್., ೨೦೦೧, ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ.

ಚ.ನ. ಶಂಕರ್‌ರಾವ್., ೨೦೦೦, ಭಾರತೀಯ ಸಮಾಜ, ಜೈಭಾರತ್ ಪ್ರಕಾಶನ, ಮಂಗಳೂರು.

ಡಾ. ಬಿ.ಎಸ್. ಪುಟ್ಟಸ್ವಾಮಿ., ೨೦೦೭, ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು.

ಲಕ್ಷ್ಮೀನಾರಾಯಣ ನಾಗವಾರ., (ಸಂ), ೨೦೦೦, ಬಿ. ಬಸವಲಿಂಗಪ್ಪ ಮತ್ತು ಬೂಸಾ ಚಳವಳಿ, ಕಾಲು ಶತಮಾನ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಬೆಂಗಳೂರು.

ಪಿ. ಕಮಲಾಕ್ಷ., ೧೯೮೬, ದಲಿತೋದ್ಧಾರಕ ಕುದ್ಮುಲ್ ರಂಗರಾವ್, ಪಿ. ಕಮಲಾಕ್ಷ ಪ್ರಿಂಟರ್ಸ್, ಮಂಗಳೂರು.

ನಾಗತಿಹಳ್ಳಿ ರಮೇಶ್., ೨೦೦೩, ಮಾನವತಾವಾದಿ ಮಲ್ಲಯ್ಯ, ಸೃಷ್ಟಿ ಪ್ರಕಾಶನ, ಬೆಂಗಳೂರು.

ಡಾ. ಎಂ.ಎಸ್. ಶೇಖರ್., ೨೦೦೬, 'ಮೊದಲ ತಲೆಮಾರಿನ ದಲಿತ ಸಾಹಿತಿಗಳು', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಡಾ. ಸಿದ್ಧಲಿಂಗಯ್ಯ., ೨೦೦೭, ಊರುಕೇರಿ, ಸಿವಿಜಿ ಪಬ್ಲಿಕೇಷನ್, ಬೆಂಗಳೂರು.

ಡಾ. ಟಿ.ಆರ್. ಚಂದ್ರಶೇಖರ (ಸಂ)., ೨೦೦೫, ದಲಿತ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ರಾಜರಾಮಹೆಗಡೆ (ಸಂ)., ೨೦೦೫, ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಡಾ. ಎಚ್.ಟಿ. ಪೋತೆ (ಅನು)., ೨೦೦೫, ಬೆಂದವರು, ಪಲ್ಲವಿ ಪ್ರಕಾಶನ, ಗುಲಬರ್ಗಾ.

ಡಾ. ಎಚ್.ಟಿ. ಪೋತೆ (ಸಂ)., ೨೦೦೭ ಮೀಸಲಾತಿ ಸಮಸ್ಯೆ ಸವಾಲುಗಳು, ತಿಪ್ಪಣ್ಣಂಬು ಪ್ರಕಾಶನ, ಗುಲಬರ್ಗಾ.

ಡಾ. ಜಿ. ಗೋಪಾಲ್., ೧೯೮೧, ಚಂದ್ರವಳ್ಳಿಯ ಅಸ್ಪೃಶ್ಯರು, ಗಿರಿ ಪ್ರಕಾಶನ, ಮೈಸೂರು.

ಡಾ. ಕೆ. ವೆಂಕಟೇಶ್ (ಸಂ)., ೨೦೦೫, ಅಂಬೇಡ್ಕರ್ ಒಂದು ಮರು ವ್ಯಾಖ್ಯಾನ್, ಸಂಸ್ಕೃತಿ ಪ್ರಕಾಶನ, ಬಳ್ಳಾರಿ.

ಎಂ. ನಾರಾಯಣ, ೨೦೦೩, ಸಾಮಾಜಿಕ ಸಮಸ್ಯೆಗಳು, ಚೇತನ ಬುಕ್ ಹೌಸ್, ಮೈಸೂರು.

ಕಾಮತ್ ಸೂರ್ಯನಾಥ (ಸಂ)., ಇತಿಹಾಸ ದರ್ಶನ, ಸಂಪುಟ-೯, ೧೯೯೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

ಕಾಮತ್ ಸೂರ್ಯನಾಥ (ಸಂ)., ೧೯೮೭, ಕರ್ನಾಟಕ ರಾಜ್ಯ ಗೇಜಿಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.

ಟಿ.ಹೆಚ್. ಮೂರ್ತಿ., ೨೦೦೭, ಆರ್. ಗೋಪಾಲಸ್ವಾಮಿ ಅಯ್ಯರ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಡಾ. ಜಿ. ಗೋಪಾಲ., ೨೦೦೧, ಆರ್. ಗೋಪಾಲಸ್ವಾಮಿ ಅಯ್ಯರ್, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು.

ಡಿ.ಆರ್. ನಂಜಯ್ಯ., ನೆನಪುಗಳು, ಕಾಮದೇನು ಪ್ರಿಂಟರ್ಸ್, ಬೆಂಗಳೂರು.

ಡಾ. ಎಂ. ನಂಜಯ್ಯ ಹೊಂಗನೂರು., ೨೦೦೧, ಬಿ. ರಾಚಯ್ಯರವರ ಜೀವನ ಮತ್ತು ರಾಜನೀತಿ, ಬಿ. ರಾಚಯ್ಯ ಪ್ರತಿಷ್ಠಾಪನ, ಮೈಸೂರು.

ಡಾ. ಡಿ.ಎಸ್. ಜಯಪ್ಪಗೌಡ ೧೯೯೪, ದಿವಾನ್ ಸರ್ ಎಂ. ವಿಶೇಶ್ವರಯ್ಯನವರ ಕಾರ್ಯ ಸಾಧನೆಗಳು, ಶುಭೋದಯ ಪ್ರಕಾಶನ, ಮೈಸೂರು.

ಡಾ. ಸಿ.ಎಸ್. ರಾಮಚಂದ್ರನ್ ೨೦೦೦, ವಸಾಹತ್ತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಡಾ. ಕೆ. ಮೋಹನ್ ಕೃಷ್ಣರೈ ೨೦೦೭, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೆ. ಭೈರಪ್ಪ., ೨೦೦೪, ಭಾರತೀಯ ಸಮಾಜ ಪರಿಚಯ, ಸ್ವಪ್ನಬುಕ್ ಹೌಸ್, ಬೆಂಗಳೂರು.

Mysore Census Report, 1911.

The Administration of Mysore, 1926-27

Mysore Census Report, 1931

Spceches by Sir M. Visvesvaraya, KCIE, 1910 to 1917

Representative Assembly Oct, 1941

The Mysore Blue Book Journel Vol.IV, No.1, 1919-1920

Procedings of the Mysore, Representation assmebly, Oct.,1941

**ನಿಯತಕಾಲಿಕೆಗಳು**

೧. ಇತಿಹಾಸ ದರ್ಶನ

೨. ಸಂಕ್ರಮಣ

೩. ಅರಿವು ಬರಹ

**ಪತ್ರಿಕೆಗಳು**

೧. ಸಾಧ್ವೀ (ರಾಜಧಾನಿ ರಾಷ್ಟ್ರೀಯ ವಾರಪತ್ರಿಕೆ)

೨. ಯಾತ್ರಿಕ ಪತ್ರಿಕೆ

೩. ಮೈಸೂರು ಸ್ಟಾರ್ ವಾರಪತ್ರಿಕೆ

೪. ಪ್ರಜಾವಾಣಿ ದಿನಪತ್ರಿಕೆ

೫. ಸಂಯುಕ್ತ ಕರ್ನಾಟಕ ದಿನಪತ್ರಿಕೆ

೬. ಶೂದ್ರ

೭. ಹೊಸತು ಹೊಸತು

೮. ರುಜುವಾತು

೯. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ

೧೦. ಪ್ರಬಂಧ ಕರ್ನಾಟಕ

೧೧. ಪಂಚಮ

೧೨. ಸಂವಾದ

೧೩. ದಲಿತ್ ವಾಯ್ಸ್

೧೪. ಭೀಮಾವಾಣಿ ಜಿ.ಐ.ಆರ್. ಡಿ.ಆರ್. ನಂಜಯ್ಯ ಸಂಪಾದಕ

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

೧. ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣಾಭಿವೃದ್ಧಿ ಒಂದು ಸಮೀಕ್ಷೆ., ೧೮೮೧ ರಿಂದ ೧೯೪೭ ಎನ್. ಚಿನ್ನಸ್ವಾಮಿ ಸೋಸಲೆ, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨. ಮೈಸೂರು ಸಂಸ್ಥಾನದಲ್ಲಿ ದಲಿತರು ಮತ್ತು ಅಭಿವೃದ್ಧಿ, ಎಂ. ಧನಲಕ್ಷ್ಮೀ, ಸಮಾಜಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩. ಆಶೋಕಪುರಂ ಒಂದು ಸಾಂಸ್ಕೃತಿಕ ಅಧ್ಯಯನ, ಎಂ. ವಾಸು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.



ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ್



ಆರ್.ಗೋಪಾಲಸ್ವಾಮಿ ಅಯ್ಯರ್‌ರವರು(ಬಲದಿಂದ ಎರಡನೆಯವರು) ಮತ್ತು ಸಹೋದರರಾದ ಭೀಮಸುಬ್ರಣ್ಯಾಂ, ಕೃಷ್ಣಯ್ಯರ್., ಅನಂತ ಸುಬ್ರಮಣ್ಯಾಂ. ಬಾಲಸುಬ್ರಣ್ಯಾಂ,
ಮಧ್ಯದಲ್ಲಿ ಅವರ ತಂದೆ ಎಸ್. ರಾಮಸ್ವಾಮಿ ಅಯ್ಯರ್‌ರವರ ಭಾವಚಿತ್ರ
(ಕುಳಿತವರು) ಬಲದಿಂದ, ಮುತ್ತು ಮೀನಾಕ್ಷಿ, ರಂಗನಾಯಕಿ, ರಾದಧಾಮಣಿ( ಗೋಪಾಲ ಸ್ವಾಮಿ ಅಯ್ಯರ್‌ರವರ ಎರಡನೆಯ ಧರ್ಮಪತ್ನಿ) ಅಂಬಾಯಿ ಶಕುಂತಲ.



ನಿಂತಿರುವ ಸಾಲಿನಲ್ಲಿ ಮೊದಲನೆಯವರು– ಶ್ರೀ ಕೃಷ್ಣ, ವಿಮಲ, ಭೀಮ ಸುಬ್ರಮಣ್ಯಂ,
ಕುಳಿತವರು– ಮುತ್ತು ಮೀನಾಕ್ಷಿ, ಶಕುಂತಲ. ದೇವನಾಯಕಿ,
ಕೆಳಗಿನ ಸಾಲಿನಲ್ಲಿ– ಮಕ್ಕಳು, ರಾಮದಾಸ್ ಗುಹಾ, ಇಂದಿರಾ, ಅನಸೂಯ

ಆದಿ ಕರ್ನಾಟಕ ಮೊದಲ ಕನ್ನಡದ ವಿದ್ಯಾಗುರು ತಲಕಾಡಿನ

## ಆರ್. ರಂಗೇಗೌಡರು

[ಸಂಗ್ರಹ- ಸಾಪ್ತಾಹಿಕ ಪುರವಣಿ (ಪ್ರವಾ)]



ಡಾ. ಜಿ. ಗೋಪಾಲ್‌ರವರೊಂದಿಗೆ



ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ಪ್ರೌಢಶಾಲಾ ಸಿಬ್ಬಂಧಿಯವರೊಂದಿಗೆ



ಬೆಂಗಳೂರಿನ ಶ್ರೀರಾಮಪುರದಲ್ಲಿ ಆರ್.ಗೋಪಾಲಸ್ವಾಮಿ ಅಯ್ಯರ್‌ರವರ ಹೆಸರಿನಲ್ಲಿ ಸ್ಥಾಪನೆಗೊಂಡ ವಸತಿ ಶಾಲೆಯ
ವಜ್ರ ಮಹೋತ್ಸವ ಸಂದರ್ಭದಲ್ಲಿ ಮಾಜಿ ಸಚಿವ ಬಿ. ಬಸವಲಿಂಗಪ್ಪರವರು ಬೇಟಿ ನೀಡಿದ ಸಂದರ್ಭ
.(ಸಂಗ್ರಹ- ಸಂಯುಕ್ತ ಕರ್ನಾಟಕ ದಿನಪತ್ರಿಕೆ.,ದಿ. ೨೫-೦೨-೦೬)



ಬೆಂಗಳೂರಿನ ಶ್ರೀರಾಮಪುರದಲ್ಲಿ ಆರ್.ಗೋಪಾಲಸ್ವಾಮಿ ಅಯ್ಯರ್‌ರವರ ಹೆಸರಿನಲ್ಲಿ ಸ್ಥಾಪನೆಗೊಂಡ ವಸತಿ ಶಾಲೆಯ
ವಜ್ರ ಮಹೋತ್ಸವ ಸಂದರ್ಭದಲ್ಲಿ ಮಾಜಿ ಮುಖ್ಯಮಂತ್ರಿ ದಿ, ಕೆಂಗಲ್ ಹನುಮಂತಯ್ಯನವರೊಂದಿಗೆ ದಿ. ಡಿ ವೆಂಕಡಯ್ಯನವರು.
.(ಸಂಗ್ರಹ- ಸಂಯುಕ್ತ ಕರ್ನಾಟಕ ದಿನಪತ್ರಿಕೆ.,ದಿ. ೨೫-೦೨-೦೬)



ಬೆಂಗಳೂರಿನಲ್ಲಿ ಆರ್. ಗೋಪಾಲಸ್ವಾಮಿ ಅಯ್ಯರ್ ಅವರ ಹೆಸರಲ್ಲಿ ನಿರ್ಮಾಣಗೊಂಡ ಬಡಾವಣೆ



ಗೋಪಾಲಸ್ವಾಮಿ ಅಯ್ಯರ್ ಅವರ ವಿದ್ಯಾರ್ಥಿನಿಲಯದ ಕಾರ್ಯಕ್ರಮವೊಂದರ ಭಾವಚಿತ್ರ



ಮಳವಳ್ಳಿಯ ಕುನ್ನೀರು ಕಟ್ಟೆ



ಸಿದ್ಧಾರ್ಥ ಸಂಯುಕ್ತ ಪದವಿ ಪೂರ್ವ ಕಾಲೇಜು, ಮಳವಳ್ಳಿ
(ಎಚ್.ಎಂ.ಗಂಗಾಧರಯ್ಯ ಮತ್ತು ಎಂ.ಶಂಕರಯ್ಯ ರವರಿಂದ ಸ್ಥಾಪನೆಗೊಂಡ ಸಂಸ್ಥೆ)